ವಾಗ್ಭೂಷಣ ಗ್ರಂಥಮಾಲೆ ೪೯.

# ನರಗುಂದದ ಬಂಡಾಯ.

ಲೇಖಕ:-

ಪಂಡಿತ ಭೀ. ಜಿ. ಹುಲಿಕವಿ



೧೯೩೦



ಒಂದು ರೂಪಾಯಿ.

# ಪ್ರಸ್ತಾವನೆ.

ಇದೊಂದು ಕರ್ನಾಟಕದ ಉಜ್ವಲವಾದ ಇತಿಹಾಸದೊಳಗಿನ ಐತಿಹಾಸಿಕ ಘಟನೆಯ ಚಿತ್ರವು. ೧೮೫೭ನೆಯ ಇಸ್ವಿಯ ಬಂಡಾಯದ ಕಥೆಯನ್ನು ಅನೇಕರು ಓದಿ ಕೇಳಬಲ್ಲರು. ಆ ಬಂಡಾಯದ ಪ್ರಭಾವದಿಂದ ದಕ್ಷಿಣ ಹಿಂದುಸ್ಥಾನದಲ್ಲಿ ಸಹ ಸಂಭವಿಸಿದ ಅಂತಹವೇ ಹಲಕೆಲವು ಘಟನೆಗಳಲ್ಲಿ ನರಗುಂದಕ್ಕೆ ಸಂಬಂಧಿಸಿದ ಈ ಘಟನೆಯೂ ಸಮಾವಿಷ್ಟವಾಗಿರುವದೆಂದಾಗಲಿ ಅಥವಾ ಈ ಭಾಗದ ಜನರ ಕೇಳಿಕೆಯಲ್ಲಿ ಇದಕ್ಕೆ " ಬಂಡಾಯ"ವೆಂದೇ ಕರೆಯುತ್ತ ಬಂದಿರುವ ಪ್ರಾಘಾತವಿರುವದೆಂದಾಗಲಿ, ಗ್ರಂಥಕರ್ತರು ಇದಕ್ಕೆ " ನರಗುಂದ ಬಂಡಾಯ'ವೆಂದೇ ನಾಮಕರಣ ಮಾಡಿರುವರು. ೮೫೭ನೆಯ ಇಸ್ವಿಯ ಉತ್ತರಹಿಂದುಸ್ತಾನವನ್ನೆಲ್ಲ ವ್ಯಾಪಿಸಿದ ಬಂಡಾಯಕ್ಕೆ ಆವಾವ ಕಾರಣಗಳಿದ್ದವೋ ಅವೆಲ್ಲ ಕಾರಣಗಳೂ ಈ ಬಂಡಾಯಕ್ಕೂ ಇದ್ದವು; ಆ ಬಂಡಾಯದ ಉದ್ದೇಶವೇ ನರಗುಂದದ ಭಾಸ್ಕರರಾಯನದೂ ಆಗಿದ್ದಿತು, ಎಂಬುದನ್ನು ವಾಚಕರು ಈ ಪುಸ್ತಕದಲ್ಲಿ ಓದಿ ಮನಗಾಣಬಹುದು.

ನರಗುಂದದ ಸಂಸ್ಥಾನವು ಪೇಶ್ವೆಯರ ಆಧೀನದಲ್ಲಿದ್ದುದು; ೧೮೧೮ನೆಯ ಇಸವಿಯಲ್ಲಾದ ಮರಾಟರ ಕೊನೆಯ ಯುದ್ಧದಲ್ಲಿ ಪೇಶ್ವೆಯು ರಾಜ್ಯಲಕ್ಷ್ಮಿಯನ್ನು ಇಂಗ್ಲಿಷ ಸರಕಾರಕ್ಕೆ ಒಪ್ಪಿಸಿ ಬ್ರಹ್ಮಾವರ್ತಕ್ಕೆ ಹೋಗಿ ಬಿಟ್ಟ ಬಳಿಕ ಬ್ರಿಟಿಷರ ಆಡಳಿತಕ್ಕೆ ಒಳಗಾಯಿತು. ೧೮೨೧ನೆಯ ಇಸ್ವಿಯಲ್ಲಿ ನರಗುಂದದ ಸಂಸ್ಥಾನಿಕರೊಡನೆ ಬ್ರಿಟಿಷ ಸರಕಾರದವರು ಹೊಸದೊಂದು ಒಪ್ಪಂದವನ್ನು ಮಾಡಿಕೊಂಡರು. ಅಂದಿನಿಂದ ನರಗುಂದದ ಅರಸರು ನಿಶ್ಚಿಂತರಾಗಿ, ಬ್ರಿಟಿಷರ ಅಧಿಕಾರಕ್ಕೊಳಗಾಗಿ ಆಳುತ್ತ ಬಂದರು.

ಲಾರ್ಡ ಡಾಲಹೌಸಿಯು ಹಿಂದುಸ್ತಾನದ ಗವ್ಹರ್ನರ ಜನರಲ್ಲನಾಗಿ ಬಂದ ಬಳಿಕ ದೇಶೀಯ ಸಂಸ್ಥಾನಗಳ ವಿಷಯವಾಗಿ ಹಿಂದುಸ್ತಾನದ ಧೋರಣವು ಬದಲಾದುದು ಸರ್ವವಿಶ್ರುತವಾಗಿಯೇ ಇದೆ. ಆತನ ಕಾಲದಲ್ಲಿ ದತ್ತಕದ ಕಾಯದೆ (Doctrine Lapse)ಯ ಮೇರೆಗೆ ಎಷ್ಟೋ ಸಂಸ್ಥಾನಗಳು ಬ್ರಿಟಿಷರ ಆಳಿಕೆಗೆ ಒಳಗಾದವು. ನರಗುಂದದ ಒಡಿಯನಾದ ಭಾಸ್ಕರರಾಯನಿಗೂ ಪುತ್ರ ಸಂತಾನವಿರಲಿಲ್ಲ. ಆತನು ಅದೇ ಸಮಯದಲ್ಲಿಯೇ ತನಗೆ ದತ್ತಕ ಸ್ವೀಕಾರ ಮಾಡಲಿಕ್ಕೆ ಅಧಿಕಾರ ದೊರೆಯಬೇಕೆಂದು ಹಿಂದುಸ್ತಾನ ಸರಕಾರವನ್ನು ಕೇಳಿಕೊಳ್ಳಲು ಅದಕ್ಕೆ ಅನುಮತಿ ದೊರೆಯಲಿಲ್ಲ. ಆಗ ಭಾಸ್ಕರರಾಯನು ಇಷ್ಟಕ್ಕೇ ನಿರಾಶನಾಗದೆ ವಿಲಾಯತಿಯಲ್ಲಿ " ಕೋರ್ಟ ಆಫ್ ಡಿರೆಕ್ಟರ್ಸ'

ಎಂಬ ಸಭೆಯ ಕಡೆಗೆ ದೊಡ್ಡದೊಂದು ವಿಜ್ಞಾಪನಾ ಪತ್ರವನ್ನು ಕಳುಹಿಸಿ ತಾನು ದತ್ತಕ ಸ್ವೀಕಾರ ಮಾಡಿಕೊಳ್ಳಲಿಕ್ಕೆ ಅರ್ಹನೆಂದು ಸಿದ್ಧಮಾಡಿ ತೋರಿಸಿದನು. ಆತನ ಹೇಳಿಕೆಗಳನ್ನೆಲ್ಲ ತಿಳಿದುಕೊಂಡು ಕೋರ್ಟ್ ಆಫ್ ಡಿರೆಕ್ಟರ್ಸನವರು ಈ ಪ್ರಕರಣವನ್ನು ಇನ್ನೊಮ್ಮೆ ವಿಚಾರ ಮಾಡಬೇಕೆಂದು ಅಪ್ಪಣೆ ಕೊಡಿಸಿದರು. ಆದರೆ ಹಿಂದುಸ್ತಾನದಲ್ಲಿ ಇದೇ ಕಾಲಕ್ಕೆ ಇಂಡಿಯಾ ಸರಕಾರದಿಂದ ಇನಾಮು ಕಮಿಶನ್" ಎಂಬುದೊಂದು ವಿಚಾರಣೆಯ ಸಭೆಯು ಸ್ಥಾಪಿತವಾಗಿದ್ದಿತು. ಕರ್ನಲ್ ಮ್ಯಾನಸನ್‌ಸಾಹೇಬನು ಅದರ ಚಾಲಕನಾಗಿದ್ದನು. ಆತನು ದೇಶೀಯ ಸಂಸ್ಥಾನಿಕರ ವಿಷಯದಲ್ಲಿ ಡಾಲಹೌಸಿ ಸಾಹೇಬನ ತತ್ವವನ್ನು ಅಕ್ಷರಶಃ ಅನು ಸರಿಸುವವನಾಗಿದ್ದುದರಿಂದ ಅನೇಕ ಸಂಸ್ಥಾನಿಕರ ಇನಾಮುಗಳು ಮುಳಿಗಿ ಹೋದುವದಕ್ಕೆ ಆತನೇ ಬಹ್ವಂಶದಲ್ಲಿ ಕಾರಣನೆಂಬ ತಿಳುವಳಿಕೆಯಾಗಹತ್ತಿತು. ಬಾಬಾಸಾಹೇಬನ (ಭಾಸ್ಕರರಾಯನ) ದತ್ತಕ ಸ್ವೀಕಾರದ ಪ್ರಕರಣವು ಸಹ ಈ ಇನಾಮು ಕಮಿಶನ್ನನವರ ಕಡೆಗೆ ವಿಚಾರಕ್ಕಾಗಿ ಬಂದಿತು. ಮ್ಯಾನಸನ್ ಸಾಹೇ ಬನೂ ಈ ಇನಾಮು ಕಮೀಶನ್ನಿನವರೂ ವಿರುದ್ಧವಾದ ಅಭಿಪ್ರಾಯವನ್ನು ಕೊಟ್ಟದ್ದರಿಂದ ಭಾಸ್ಕರರಾಯನು ಕೊನೆಗೆ ಹತಾಶನಾದನು; ಹಾಗೂ ನಿರಾ ಶೆಯ ಅಂಧಃಕಾರದಲ್ಲಿ ಉದ್ವೇಗ ಪರವಶನಾಗಿ ಅನನ್ಯಗತಿಕನಾದವನಂತೆ ಇಂಗ್ಲಿಷ ಸರಕಾರ ವಿರುದ್ಧವಾಗಿ ಯುದ್ಧ ಹೂಡಲು ನಿರ್ಧರಿಸಿದನು. ಮ್ಯಾನ ಸನ್ ಸಾಹೇಬನ ವಿಷಯವಾಗಿ ಕಲುಷಿತ ಮನಸ್ಸುಳ್ಳವರಾಗಿದ್ದ ಅನೇಕ ಸಂಸ್ಥಾನಿಕರಲ್ಲಿ ಭಾಸ್ಕರರಾಯನೂ ಒಬ್ಬನಾಗಿದ್ದನು. ಅದಿರಲಿ, ಪ್ರತ್ಯಕ್ಷ ಯುದ್ಧವು ಆರಂಭವಾದೊಡನೆಯೇ ಸುರೇಬಾನದ ಹನುಮಂತದೇವರ ಗುಡಿಯಲ್ಲಿ ಮ್ಯಾನ ಸನ್ ಸಾಹೇಬನು ಮರಣ ಹೊಂದಿದನೆಂಬದೇನೋ ನಿಜ.

ಇತ್ತ ನರಗುಂದದ ಕಾರಭಾರಿಯಾದ ಕೃಷ್ಣಾಜಿಪಂತ ಜೋಶಿ ಮತ್ತು ಅವನ ಅನುಯಾಯಿಯಾದ ಬನ್ಯಾಬಾಪು ಎಂಬಿಬ್ಬರ ತಂತ್ರದಿಂದ ಒಳಗಿನ ಗುಟ್ಟೆಲ್ಲ ಶತ್ರುಗಳಿಗೆ ಮುಂದಾಗಿ ಗೊತ್ತಾಗಿತ್ತೆಂದು ಜನರಲ್ಲಿ ವಾಡಿಕೆಯಾದ ನಂಬುಗೆಯಾಯಿತು. ಇದೂ ಅಲ್ಲದೆ ಭಾಸ್ಕರರಾಯನು ಯುದ್ಧಕ್ಕಾಗಿ ಸಿದ್ಧ ಮಾಡಿಕೊಂಡ ಮದ್ದಿನ ರಾಶಿಯಲ್ಲಿ ಮಣ್ಣು ಶಗಣಿಗಳನ್ನು ಬೆರಿಸುವಂತಹ ಕಾರ್ಯವನ್ನು ಅವರು ಮಾಡಿದ್ದರೆಂದು ಸಹ ಸುದ್ದಿ ಹರಡಿತು. ಶತ್ರುಗಳು ಏರಿ ಬಂದಾಗ ದೈವಹತನಾದ ಭಾಸ್ಕರರಾಯನು ನಿರುಪಾಯನಾಗಿ ಅಡವೀ ಪಾಲಾಗಿ ಕೊನೆಗೆ ಶತ್ರುಗಳ ಕೈಯಲ್ಲಿ ಸಿಕ್ಕು ಮೃತ್ಯುಗೀಡಾದನು. ಆತನ ಜನ್ಮದಾ ತೆಯಾದ ಜನನಿಯೂ ಸಹಧರ್ಮಿಣಿಯಾದ ಭಾರ್ಯೆಯೂ ಈ ಸಂಕಟದಲ್ಲಿ ಸ್ತ್ರೀಯರಿಗನುಗುಣವಾದ ಮಾರ್ಗವನ್ನವಲಂಬಿಸಿ ಮಲಪ್ರಭೆಯಲ್ಲಿ ಧುಮ್ಮಿಕ್ಕಿ ಇಹಲೋಕದ ಯಾತ್ರೆಯನ್ನು ಪೂರ್ಣಗೊಳಿಸಿದರು.

ಇದೀಗ ನರಗುಂದದ ಬಂಡಾಯವೆಂಬ ಇತಿಹಾಸ ಪ್ರಸಂಗದ ಕಥೆಸಾರವು ಕರ್ನಾಟಕದಲ್ಲಿ ಭ್ರಾಮಕ ಕಲ್ಪನೆಯಿಂದಾಗಲಿ ದೈವ ಸಂಕೇತದಿಂದಾಗಲಿ ಹೇಗಾಡಲೆಳಿಸಿ ರಾಜ್ಯಲಕ್ಷ್ಮಿಗೂ ಸ್ವಜೀವಿತಕ್ಕೂ ಎರವಾದಂತಹ ನರಗುಂದದ ಅಧಿಪತಿಯಾಗಿದ್ದ ಭಾಸ್ಕರರಾಯನ ಪ್ರಯತ್ನದ ವರ್ಣನೆಯು. ಆ ಕಾಲದಲ್ಲಿ ಬದುಕಿ ಬಾಳಿ ತಮ್ಮ ಮಕ್ಕಳು ಮೊಮ್ಮಕ್ಕಳುಗಳಿಗೆ ಕರ್ಣೋಪಕರ್ಣವಾಗಿ ತಿಳಿಸುತ್ತ ಬಂದಿದ್ದ ಆ ಜನರು « ನಮ್ಮ ಹಿಂದಿನ ಕಾಲದ ಜನರು ಇಲ್ಲದಾಗಿರುವ ಈ ಕಾಲದಲ್ಲಿ ಬಾಯಿ ಮಾತಿನಿಂದ ಕೇಳಿಕೊಳ್ಳಲನುವಿಲ್ಲದಂತಾಗಿ ಗ್ರಂಥಾವಲೋಕನಮಾತ್ರದಿಂದ ತಿಳಿದುಕೊಳ್ಳಲು ಸಾಧ್ಯವಿರುವ ಈ ಕಾಲದಲ್ಲಿ ಕನ್ನಡಿಗರೆಲ್ಲರೂ ಅಭಿಮಾನದಿಂದ ಓದಲರ್ಹವಾಗಿರುವ ಅಚ್ಚುಹೊಂದಿದ ಗ್ರಂಥವೆಂದರೆ ಇದೇ ಸರಿ. ಇಂತಹ ಗ್ರಂಥವನ್ನು ಬರೆದವರಾದ ಪಂಡಿತ ಶ್ರೀ ಭೀ. ಜಿ ಹುಲಿಕವಿಯವರ ವಿಷಯಕ್ಕಾಗಲಿ, ಅವರ ಭಾಷೆ, ಶೈಲಿ ಮೊದಲಾದವುಗಳ ವಿಷಯಕ್ಕಾಗಲಿ ಹೆಚ್ಚು ಬರೆಯುವ ಕಾರಣವಿಲ್ಲ.

ಕನ್ನಡಿಗರ ಪ್ರೋತ್ಸಾಹನದಿಂದ ಐತಿಹಾಸಿಕ ಕಥೆಗಳೂ ಇತಿಹಾಸ ಗ್ರಂಥಗಳೂ ಇತಿಹಾಸ ವಾಚನಾಭಿರುಚಿಯೂ ಇತಿಹಾಸ ಸಂಶೋಧನ ಪ್ರೀತಿಯೂ ನಮ್ಮಲ್ಲಿಲ್ಲದಂತಾಗಿದೆ. ಎಂಬ ಅಪವಾದವು ಮಾತ್ರ ಕಡಿಮೆಯಾಗಲೆಂದು ಹಾರೈಸುವೆವು.

**K. B. Ankaligi,**
ವ್ಯವಸ್ಥಾಪಕ ವಾಗ್ಭೂಷಣ
ಧಾರವಾಡ.

೨ನೇ ಆಗಸ್ಟ ೧೯೩೦ನೇ ಇಸ್ವಿ

# ನರಗುಂದದ ಬಂಡಾಯ !



## ೧ನೆಯ ಪ್ರಕರಣ.



### ಪೂರ್ವ ವೃತ್ತಾಂತವು.



ನರಗುಂದ ಸಂಸ್ಥಾನದ ಮೂಲಪುರುಷನ ಹೆಸರು ಅಪ್ಪಾಜಿರಾವ ಸುರ್ಣೆ ಎಂಬುದಾಗಿತ್ತು. ಇವನ ಅಡ್ಡಹೆಸರು "ಸುರ್ಣೆ" ಎಂದು ಏಕೆ ರೂಢಿಯಲ್ಲಿ ಬಂತೆಂಬ ವಿಷಯದಲ್ಲಿ ಒಂದು ಆಖ್ಯಾಯಿಕೆಯಿದೆ ಈ ಅಪ್ಪಾಜಿರಾಯನ ತಂದೆಯ ಹೆಸರು ಸೂರ್ಯರಾವ ಎಂಬುದಾಗಿತ್ತು. ಆದುದರಿಂದ ಅಪ್ಪಾಜಿರಾಯನು "ಅಪ್ಪಾಜಿರಾವ ಸುರೋ" ಎಂದು ತನ್ನ ರುಜುವನ್ನು ಮಾಡುತ್ತಿದ್ದನು. ಮುಂದೆ ಹಸ್ತದೋಷದಿಂದ "ಸುರೋ" ಎಂಬುದು "ಸುರ್ಣೆ" ಎಂಬ ರೂಪಾಂತರವನ್ನು ಹೊಂದಿತಂತೆ! ಹೇಗಿದ್ದರೂ ಅಪ್ಪಾಜಿರಾಯನ ಅಡ್ಡಹೆಸರು "ಸುರ್ಣೆ" ಎಂದು ಪ್ರಸಿದ್ಧವಾಗಿದೆ

ರಾಮರಾವ ಭಾವೆ ಎಂಬ ಒಬ್ಬ ಕೊಂಕಣದ ಹುಡುಗನು ಈ ಅಪ್ಪಾಜಿರಾಯನಲ್ಲಿ ಆಳುತನಕ್ಕೆ ಬಂದು ನಿಂತನು. ಕಾಲಾಂತರದಲ್ಲಿ ಈ ರಾಮರಾಯನು ತನ್ನ ಕರ್ತೃತ್ವಶಕ್ತಿಯಿಂದಲೂ, ವಿಧೇಯತೆಯಿಂದಲೂ ಅಪ್ಪಾಜಿರಾಯನ ಪ್ರೀತಿಯನ್ನು ಬಹಳವಾಗಿ ಸಂಪಾದಿಸಿದನು. ಇಷ್ಟೇ ಅಲ್ಲ; ಅಪ್ಪಾಜಿರಾಯನು ರಾಮರಾಯನನ್ನಗಲಿ ಒಂದು ಕ್ಷಣ ಸಹ ಇರುತ್ತಿದ್ದಿಲ್ಲ. ಈ ವಿಷಯದಲ್ಲಿಯೂ ಒಂದು ದಂತಕಥೆಯಿದೆ.

ರಾಮರಾಯನು ಚಿಕ್ಕವನಿದ್ದಾಗ ಅಪ್ಪಾಜಿರಾಯನ ಅಡಿಗೆಯ ಮನೆಯಲ್ಲಿ ಕೆಲಸ ಮಾಡುತ್ತಿದ್ದನು. ಒಂದಾನೊಂದು ದಿನ ರಾತ್ರಿಯಲ್ಲಿ ಅಪ್ಪಾಜಿರಾಯನು ಶೌಚಕ್ಕೆ ಹೋದಾಗ, ಕೈಕಾಲು ತೊಳೆದುಕೊಳ್ಳುವದಕ್ಕೆ ನೀರನ್ನು ಸಿದ್ಧಪಡಿಸುವ ಕೆಲಸವು ರಾಮರಾಯನದಾಗಿತ್ತು. ಅಪ್ಪಾಜಿರಾಯನು ಹೋದ ಕೂಡಲೆ ರಾಮರಾಯನು ಲಗುಬಗೆಯಿಂದ ನೀರಿನ ಸಿದ್ಧತೆಯನ್ನು ಮಾಡಿಕೊಂಡು ಕೈಕಾಲು ತೊಳೆದುಕೊಳ್ಳುವ ಸ್ಥಳಕ್ಕೆ ಬಂದನು. ಆದರೆ ಅಂದು ಅಪ್ಪಾಜಿರಾಯನು ಹೊರಗೆ

ಬರಲಿಕ್ಕೆ ಸ್ವಲ್ಪ ಅವಕಾಶವಾಯಿತು. ಆದರೆ ಇಷ್ಟರಲ್ಲಿಯೇ ಚಿಕ್ಕವನಾದ ರಾಮರಾಯನ ನಿದ್ರೆಯು ಅನಿವಾರವಾಯಿತು. ಕೈಯೊಳಗಿನ ಪಾತ್ರೆಗಳನ್ನು ಅಲ್ಲಿಯೇ ಇಟ್ಟು ಕೊಂಚ ಒರಗಿದನು. ಕಣ್ಣಿಗೆ ಕಣ್ಣು ಹಚ್ಚುವದಿಷ್ಟೇ ತಡ; ಅವನನ್ನು ಗಾಢನಿದ್ರೆಯು ಆವರಿಸಿ ಬಿಟ್ಟಿತು. ಅಪ್ಪಾಜಿರಾಯನು ಹೊರಗೆ ಬಂದು, ಕೈಕಾಲುಗಳನ್ನು ತೊಳೆದುಕೊಳ್ಳುವ ಸ್ಥಳಕ್ಕೆ ಬಂದು ನೋಡುತ್ತಾನೆ! ಅಲ್ಲಿ ರಾಮರಾಯನು ಅಸ್ತವ್ಯಸ್ತವಾಗಿ ಬಿದ್ದಿದ್ದಾನೆ! ಅವನಿಗೆ ಗಡದ್ದು ನಿದ್ದೆ ಹತ್ತಿಹೋಗಿದೆ! ಒಂದು ಮಹಾಭುಜಂಗವು ತನ್ನ ಹೆಡೆಯನ್ನು ಪಸರಿಸಿ ಅವನ ಮೋರೆಯ ಮೇಲೆ ಹಿಡಿದು ನಿದ್ರಾಭಂಗವಾಗದಂತೆ ರಕ್ಷಣೆ ಮಾಡುತ್ತಲಿದೆ! ಅದನ್ನು ನೋಡಿದ ಕೂಡಲೆ, 'ಇದು ರಾಮರಾಯನ ಭವಿಷ್ಯತ್ಕಾಲದ ಸುಚಿಹ್ನದ ದ್ಯೋತಕವಾಗಿದೆ' ಯೆಂದು ತಿಳಿದುಕೊಂಡನು. ಈ ಹುಡುಗನು ಈಗ ಸಾಮಾನ್ಯನಾಗಿ ಅಡಿಗೆಯ ಮನೆಯ ಪರಿಚರ್ಯೆಯದಲ್ಲಿದ್ದರೂ ಒಂದಿಲ್ಲೊಂದು ದಿನ ಇವನು ಹೆಸರಿಗೆ ಬರತಕ್ಕವನೆಂದು ಅಪ್ಪಾಜಿರಾಯನು ದೃಢವಾಗಿ ನಂಬಿದನು.

ಈ ದಂತಕಥೆಯು ಸಟಿಯೇ ಇರಲಿ; ದಿಟವೇ ಇರಲಿ, ರಾಮರಾಯನು ಚತುರನೂ ಚಟುವಟಿಕೆಯುಳ್ಳವನೂ ಆಗಿದ್ದನು. ಆದುದರಿಂದ ಮುಂದೆ ಅವನನ್ನು ಅಡಿಗೆಯ ಮನೆಯ ಕೆಲಸದಿಂದ ಬಿಡುಗಡೆ ಮಾಡಿ, ಅಪ್ಪಾಜಿರಾಯನು ಅವನಿಗೆ ಕಾರಕೂನನ ಕೆಲಸವನ್ನು ಕೊಟ್ಟನು. ಅಲ್ಲಿಂದ ಮುಂದೆ ರಾಮರಾಯನು ತನ್ನ ಜಾಣತನವನ್ನು ಹೊರಗೆಡವುತ್ತ ಹೋದಂತೆ, ಅಪ್ಪಾಜಿರಾಯನು ಅವನಿಗೆ ಹೆಚ್ಚು ಹೆಚ್ಚಿನ ಕೆಲಸಗಳನ್ನು ಕೊಡುತ್ತ ಬಂದನು. ಇದೇ ರಾಮರಾಯನು ಕ್ರಿ. ಶ. ೧೭೦೦ನೆಯ ವರ್ಷದಲ್ಲಿ, ಮೊಗಲರ ಹಸ್ತಗತವಾಗಿದ್ದ ನರಗುಂದ ಮತ್ತು ರಾಮದುರ್ಗದ ಕಿಲ್ಲೆಗಳನ್ನು ಬಹಳ ಶೌರ್ಯದಿಂದ ಹೋರಾಡಿ ಹಿಂದಕ್ಕೆ ತೆಗೆದುಕೊಂಡನು. ಅಂದಿನಿಂದಂತೂ ರಾಮರಾಯನ ಕೀರ್ತಿಯು ಎಲ್ಲ ಕಡೆಗೂ ಪಸರಿಸಿತು; ಅವನು ಉತ್ತರೋತ್ತರವಾಗಿ ಉತ್ಕರ್ಷವನ್ನು ಹೊಂದಹತ್ತಿದನು. ರಾಮರಾಯನು ಅಪ್ಪಾಜಿರಾಯನ ಕೈಕೆಳಗೆ ಇದ್ದು ಕಿಲ್ಲೆಯೊಳಗಿನ ಎಲ್ಲ ವ್ಯವಸ್ಥೆಯನ್ನು ನೋಡುತ್ತಿದ್ದನು. ತಾನು ವೃದ್ಧನಾಗುತ್ತ ನಡೆನಡೆದಂತೆ, ರಾಮರಾಯನಿಗೆ ಹೆಚ್ಚು ಹೆಚ್ಚಿನ ಜವಾಬುದಾರಿಯ ಕೆಲಸಗಳನ್ನು ಒಪ್ಪಿಸಹತ್ತಿದನು.

ಹೀಗಾಗಿ ಕಟ್ಟಕಡೆಗೆ ಅಪ್ಪಾಜಿರಾಯನು ತನ್ನ ರಾಜ್ಯವನ್ನೆಲ್ಲ ಸ್ವಸಂತೋಷದಿಂದಲೇ ರಾಮರಾಯನಿಗೆ ಕೊಟ್ಟನು. ತಾನು ಜೀವದಿಂದಿರುವಾಗಲೇ ನರಗುಂದ ಮತ್ತು ರಾಮದುರ್ಗ ಈ ಎರಡೂ ಕಿಲ್ಲೆಗಳ ಸನದನ್ನು ರಾಮರಾಯನ ಹೆಸರಿನಿಂದ ಮಾಡಿಸಿ ಕೊಟ್ಟದಲ್ಲದೆ, ಕೊಲ್ಹಾಪುರದ ಸಂಭಾಜಿರಾಯನಿಂದ 'ಪಂತಸಚೀವ' ಎಂಬ ಪದವಿಯನ್ನೂ ಕೊಡಿಸಿದನು. ಮುಂದೆ ಕ್ರಿ. ಶ ೧೭೨೪

ನೆಯ ವರ್ಷದಲ್ಲಿ ಅಪ್ಪಾಜಿರಾಯನು ತೀರಿಕೊಂಡನು ಅಂತ್ಯಕಾಲದಲ್ಲಿ ಅವನು ಬಳವಂತರಾಯನೆಂಬ ಒಬ್ಬ ಹುಡುಗನನ್ನು ದತ್ತಕ ತೆಗೆದುಕೊಂಡಿದ್ದನು. ಅವನ ದರ್ಶನ ಮಾಡುವ ಭಾಗವೆಲ್ಲ ರಾಮರಾಯನದೇ ಆಗಿತ್ತು. ಆದರೂ ತನ್ನ ಐಶ್ವರ್ಯದ ದೊಡ್ಡ ಭಾಗವನ್ನು ಅಪ್ಪಾಜಿರಾಯನು ರಾಮರಾಯನಿಗೆ ಪ್ರಸಿದ್ಧ ರೀತಿಯಿಂದಲೇ ಇನಾಮಾಗಿ ಕೊಟ್ಟಿದ್ದನು. ಅಂದಿನಿಂದ ರಾಮರಾವ ಭಾವೆ ಇವನು ನರಗುಂದದ ಬಾಧ್ಯಸ್ಥನಾದನು.

ಈ ನರಗುಂದದ ಕಿಲ್ಲೆಯನ್ನು ಶಿವಾಜಿಯು ಕ್ರಿ. ಶ. ೧೬೭೪ನೆಯ ವರ್ಷದಲ್ಲಿ ಕಟ್ಟಿಸಿದನು; ಅವನು ಕಟ್ಟಿಸಿದ ಎಲ್ಲ ದುರ್ಗಗಳಲ್ಲಿ ಇದು ಉತ್ತಮವಾದದ್ದೂ, ಹೆಚ್ಚು ಸುರಕ್ಷಿತವಾದದ್ದೂ ಆಗಿತ್ತು. ಇರಲಿ.

ಈ ರಾಮರಾಯನ ಮಗನ ಹೆಸರು ಭಾಸ್ಕರರಾಯನು; ಭಾಸ್ಕರರಾಯನಿಗೆ ಒಬ್ಬ ಮಗಳು ಮಾತ್ರ ಹುಟ್ಟಿದಳು. ಆದುದರಿಂದ ಅವನು ದತ್ತಕ ಮಾಡಿಕೊಂಡನು. ಅವನ ಹೆಸರು ವೆಂಕಟರಾಯನು. ಇವನ ಮಗನ ಹೆಸರು ದಾದಾಜೀರಾವ ಅಥವಾ ಅಪ್ಪಾಸಾಹೇಬ ಎಂಬುದಾಗಿತ್ತು. ಅಪ್ಪಾಸಾಹೇಬನಿಗೆ ಬಾಬಾಸಾಹೇಬನೆಂದೂ, ರಾವಸಾಹೇಬನೆಂದೂ ಇಬ್ಬರು ಮಕ್ಕಳು. ಇವರೊಳಗಿನ ರಾವಸಾಹೇಬನೇ ರಾಮದುರ್ಗದ ಸಂಸ್ಥಾನಕ್ಕೆ ದತ್ತಕ ಹೋದವನು. ಇರಲಿ.

ವೆಂಕಟರಾವ ಭಾವೆಯು ಸ್ವಭಾವಶೂರನಾಗಿದ್ದನು; ಇವನು ಆಗಾಗ್ಗೆ ಆಗುತ್ತಿದ್ದ ಯುದ್ಧಗಳಲ್ಲಿ ತನ್ನ ಪರಾಕ್ರಮವನ್ನು ಚೆನ್ನಾಗಿ ಪ್ರಕಟಪಡಿಸಿದ್ದನು. ಹೈದರಅಲ್ಲಿಯು ಕ್ರಿ. ಶ. ೧೭೭೮ನೆಯ ವರ್ಷ ಕರ್ನಾಟಕವನ್ನು ವಶಮಾಡಿಕೊಂಡ ಬಳಿಕ ರಾಮದುರ್ಗ ಮತ್ತು ನರಗುಂದದ ಕಡೆಯ ಎಲ್ಲ ಪ್ರದೇಶದಲ್ಲಿ ತನ್ನ ಅಧಿಕಾರವನ್ನು ಕೂಡ್ರಿಸಹತ್ತಿದನು. ಇವೆರಡೂ ಸಂಸ್ಥಾನಗಳು ಆಗ ಅವನಿಗೆ ಅಂಕಿತವಾಗಿಯೇ ಇದ್ದುವು. ಆದರೆ ಈ ಸಂಸ್ಥಾನಿಕರು ಮೊದಲು ಹೇಗೆ ಪೇಶವೆಯರ ಆಧೀನದಲ್ಲಿ ಕರಭಾರವನ್ನು ಸಾಗಿಸುತ್ತಿದ್ದರೋ, ಅದರಂತೆಯೇ ತನಗೂ ಆಧೀನರಾಗಿರಬೇಕೆಂಬ ಅನುಬಂಧದಿಂದ ಹೈದರನು ಆ ಸಂಸ್ಥಾನಗಳನ್ನು ಅವರ ವಶಕ್ಕೇ ಒಪ್ಪಿಸಿದನು. ಹೈದರನು ಸತ್ತಮೇಲೆ ಟೀಪೂಸುಲ್ತಾನನು ವೆಂಕಟರಾಯನಿಗೆ ಬಹಳ ತೊಂದರೆ ಕೊಡಹತ್ತಿದನು. ಇದನ್ನು ವೆಂಕಟರಾಯನು ಸಹಿಸದೆ ಹೋದನು. ಆಗ ಟೀಪುವು ಸಿಟ್ಟಾಗಿ ವೆಂಕಟರಾಯನನ್ನು ಹಣ್ಣು ಮಾಡುವದಕ್ಕಾಗಿ ದಂಡನ್ನು ಕಳಿಸಿಕೊಟ್ಟನು. ಈ ಸುದ್ದಿಯು ತಿಳಿದ ಕೂಡಲೆ ವೆಂಕಟರಾಯನು ಪೇಶವೆಯರ ಸಹಾಯವನ್ನು ಕೇಳಿದನು. ಅದರಂತೆಯೇ ಇಂಗ್ಲಿಷರಿಂದಾದರೂ ಸಹಾಯ ದೊರೆಯಬೇಕೆಂದು ಗುಪ್ತವಾಗಿ ಅವರನ್ನು ಕೇಳಿಕೊಂಡಿದ್ದ

ನಂತೆ! ಈ ವೃತ್ತಾಂತವು ಮುಟ್ಟಿದ ಕೂಡಲೆ ನಾನಾಫಡಣವೀಸನು ಟೀಪೂವಿಗೆ ಒಂದು ಪತ್ರವನ್ನು ಬರೆದನು. ಅದರಲ್ಲಿ ಅವನು "ಮೊದಲಿಗಿಂತ ಹೆಚ್ಚು ಕರವನ್ನು ಎತ್ತುವದು ನಿಮ್ಮ ಅಧಿಕಾರದಲ್ಲಿಲ್ಲವೆಂದೂ, ಉಂಬಳಿಯಿದ್ದ ಪ್ರದೇಶವು ಇನ್ನೊಬ್ಬರ ಸ್ವಾಮಿತ್ವಕ್ಕೆ ಒಳಗಾದರೆ, ಮೊದಲಿಗಿಂತ ಹೆಚ್ಚು ಕರವನ್ನು ಕೊಡುವ ಪದ್ಧತಿಯೂ ಇಲ್ಲವೆಂತಲೂ ಮತ್ತು ಉಂಬಳಿಗನು ದ್ರೋಹಿಯಾಗದೆ ಸರಳತನದಿಂದ ನಡೆಯುತ್ತಿದ್ದರೆ ಅವನಿಗೆ ಯಾವ ತರದ ತೊಂದರೆಯನ್ನೂ ಕೊಡಬಾರದೆ" ಎಂತಲೂ ಬರೆದಿದ್ದನು. ಇದನ್ನು ನೋಡಿದ ಕೂಡಲೆ ಟೀಪೂವಿನ ಪಿತ್ತವು ತಲೆಗೇರಿತು. ಅವನು ಅದಕ್ಕೆ ಉತ್ತರವಾಗಿ ಬರೆದದ್ದೇನೆಂದರೆ:—"ನನ್ನ ಪ್ರಾಂತದಲ್ಲಿ ನಾನು ಬೇಕಾದಂತೆ ನಡೆಯಲು ಸ್ವತಂತ್ರನು. ನಾನು ನನ್ನ ಪ್ರಜೆಗಳಿಂದ ನನಗೆ ಬೇಕಾದಷ್ಟು ದುಡ್ಡನ್ನು ತೆಗೆದುಕೊಳ್ಳುವೆನು". ಈ ಸಿಟ್ಟಿನ ಭರದಲ್ಲಿ ಅವನು ವೆಂಕಟರಾಯನಿಂದ ಅಪರಿಮಿತವಾದ ದುಡ್ಡನ್ನು ಸೆಳೆದನು; ಮತ್ತು ಹಿಂದೆ ಹೇಳಿದಂತೆ ಅವನ ಮೇಲೆ ದಂಡನ್ನೂ ಕಳಿಸಿದನು. ಇಷ್ಟರಲ್ಲಿ ಪೇಶವೆಯರ ಕಡೆಯ ಪರಶುರಾಮಪಂತ ಭಾವೂ, ಪಟವರ್ಧನ ಇವನೂ ಸೈನ್ಯವನ್ನು ತೆಗೆದುಕೊಂಡು ಬಂದನು. ಈ ಸಂಧಿಯಲ್ಲಿ ಟೀಪೂವಿನ ಸೈನ್ಯಕ್ಕೆ ಕುಡಿಯಲಿಕ್ಕೆ ನೀರು ದುರ್ಲಭವಾದುದರಿಂದ ಅವರು ಊರ ಬಿಟ್ಟು ಸ್ವಲ್ಪ ದೂರ ಹೋಗಿ ನಿಂತರು. ಈ ಕಾಲಕ್ಕೆ ಟೀಪೂವಿನ ಸೈನ್ಯದಲ್ಲಿ ಬಹಳ ಹಾನಿಯಾಯಿತು. ಆದುದರಿಂದ ಅವನು ಒಡಂಬಡಿಕೆಗೆ ಒಪ್ಪಿದನು. ಆದರೆ ಮುಂದೆ ಸಂಧಿಯನ್ನು ಸಾಧಿಸಿ, ಒಪ್ಪಂದವನ್ನು ಮುರಿದು, ವೆಂಕಟರಾಯನ ಕುಟುಂಬದವರನ್ನೆಲ್ಲ ಮೋಸದಿಂದ ಸೆರೆ ಹಿಡಿದನು; ಮತ್ತು ಅವನ ಮಗಳನ್ನು ತನ್ನ ಅಂತಃಪುರದಲ್ಲಿ ಇಟ್ಟುಕೊಂಡು, ಉಳಿದವರನ್ನೆಲ್ಲ ಮೈಸೂರಿನಲ್ಲಿ ಸೆರೆಮನೆಯಲ್ಲಿಟ್ಟನು.

ವೆಂಕಟರಾಯನ ಸ್ಥಿತಿಯು ಹೀಗೆ ಆಗಲು, ಅವನ ಆಪ್ತೇಷ್ಟರಿಗೆ ಬಹಳ ಚಿಂತೆಯುತ್ಪನ್ನವಾಯಿತು. ಅವರಲ್ಲಿ ಕೆಲವರು, ಪರಶುರಾಮ ಭಾವೂ ಪಟವರ್ಧನನ ಸಹಾಯದಿಂದ ರಾಮರಾಯನೆಂಬ ಒಬ್ಬ ಹುಡುಗನನ್ನು ವೆಂಕಟರಾಯನ ದತ್ತಕಮಗನನ್ನಾಗಿ ಮಾಡಿದರು; ಮತ್ತು ರಾಮದುರ್ಗವನ್ನು ಸಂಸ್ಥಾನದ ಮುಖ್ಯಸ್ಥಳವನ್ನಾಗಿ ಮಾಡಿ, ಅಲ್ಲಿ ರಾಮರಾಯನನ್ನು ಗಾದಿಗೆ ಕೂಡ್ರಿಸಿದರು. ಈ ಕೆಲಸದಲ್ಲಿ ಪರಶುರಾಮ ಭಾವೂವು ಬಹಳ ಸಹಾಯ ಮಾಡಿದನು. ಪೇಶ್ವೆಯರಲ್ಲಿ ಅವನ ವಿಶ್ವಾಸವು ಹೆಚ್ಚಾಗಿದ್ದುದರಿಂದ ಆತನ ಈ ಕೆಲಸಕ್ಕೆ ಯಾವತರದ ಪ್ರತಿಬಂಧವೂ ಉಂಟಾಗಲಿಲ್ಲ.

ಮುಂದೆ ನಿಜಾಮನೂ, ಮರಾಟರೂ, ಇಂಗ್ಲಿಷರೂ ಕೂಡಿ ಟಿಪೂವಿನ ಸಂಗಡ ಯುದ್ಧವನ್ನಾರಂಭಿಸಿ ಶ್ರೀರಂಗಪಟ್ಟಣವನ್ನು ಮುತ್ತಿದರು. ಆಗ ವೆಂಕ-

ಟರಾಯನು ಬಿಡುಗಡೆಯನ್ನು ಹೊಂದಿ ನರಗುಂದಕ್ಕೆ ತಿರುಗಿ ಬಂದನು. ಆಗ ಅಂದರೆ ಕ್ರಿ. ಶ. ೧೭೯೧ನೆಯ ವರ್ಷದಲ್ಲಿ ಪೇಶವೆಯವರು ೨೫೦೦೦ ರೂ. ಗಳನ್ನು ಕಾಣಿಕೆಯಾಗಿ ತೆಗೆದುಕೊಂಡು, ನರಗುಂದ ಮತ್ತು ರಾಮದುರ್ಗ ಇವೆರಡೂ ಸಂಸ್ಥಾನಗಳು ಕ್ರಮವಾಗಿ ವೆಂಕಟರಾವ ಮತ್ತು ರಾಮರಾಯನಿಗೆ ಸಲ್ಲತಕ್ಕದ್ದೆಂಬುದಾಗಿ ಹೊಸ ಸನದುಗಳನ್ನು ಮಾಡಿಕೊಟ್ಟರು. ಅಂದಿನಿಂದ ಅವರ ಸಂಸ್ಥಾನಿಕತ್ವವು ಅವರ ವಶಕ್ಕೆ ಬಂತು. ಹೀಗೆ ರಾಮದುರ್ಗದ ಕಿಲ್ಲೆಯೂ, ಊರೂ, ರಾಮರಾಯನ ಅಂಕಿತಕ್ಕೆ ಒಳಗಾಯಿತು. ಆದರೆ ಇತರ ಐಶ್ವರ್ಯದ ದೊಡ್ಡ ಭಾಗವು ವೆಂಕಟರಾಯನ ಕೈಯಲ್ಲಿಯೇ ಇತ್ತು. ಈ ಸನದುಗಳನ್ನು ಕೊಡುವಾಗ ೭೬೧೪೭ ರೂ. ಗಳನ್ನು ದಸ್ತಪಾಲೆಂದು ಸರಕಾರದಲ್ಲಿಯೇ ಇಟ್ಟರು; ಮತ್ತು ಸುಮಾರು ೧೭೧೧೭ ರೂ ಗಳ ಉತ್ಪನ್ನದ ಪ್ರದೇಶವು ಇವರಿಬ್ಬರಿಗೂ ನಡೆಯಬೇಕೆಂದು ಗೊತ್ತುಮಾಡಿದರು. ಅದರಲ್ಲಿ ೫೭ ಊರುಗಳು ಅಂದರೆ ಸುಮಾರು ೧೨೭೧೪ ರೂ. ಗಳ ಉತ್ಪನ್ನವುಳ್ಳ ಪ್ರದೇಶವು ವೆಂಕಟರಾಯನ ಕಡೆಗೂ, ಉಳಿದ ೧೮ ಊರುಗಳು ಅಂದರೆ ಸುಮಾರು ೨೯೦೦೦ ರೂ. ಗಳ ಉತ್ಪನ್ನದ ಪ್ರದೇಶವು ರಾಮರಾಯನ ಕಡೆಗೂ ಉಳಿದವು. ಆಗಿನಿಂದ ವೆಂಕಟರಾಯನಿಗೆ ನರಗುಂದಕರ ಎಂದೂ, ರಾಮರಾಯನಿಗೆ ರಾಮದುರ್ಗಕರ ಎಂದೂ, ಹೆಸರು ಬಿದ್ದವು. ಇದೇ ಸಂಧಿಯಲ್ಲಿ ಬಳವಂತರಾವ ಸುರ್ವೆ ಎಂಬವನು ಪೇಶವೆಯರಿಗೆ ೨೦೦೦ ರೂ. ಗಳನ್ನು ಕಾಣಿಕೆಯಾಗಿ ಕೊಟ್ಟು ಹೆಬ್ಬಳ್ಳಿಯನ್ನು ತನ್ನ ಹೆಸರಿನಿಂದ ಜಹಾಗೀರು ಪಡೆದನು. ಇರಲಿ.

ಕ್ರಿ. ಶ. ೧೮೧೦ನೆಯ ವರ್ಷದಲ್ಲಿ ಈ ರಾಮರಾಯನ ಮಗನಾದ ನಾರಾಯಣರಾಯನು ಅಧಿಕಾರಿಯಾದನು. ಇವನು ಪೇಶವೆಯರ ಮನಸ್ಸನ್ನು ಒಲಿಸಿಕೊಂಡು ಎರಡೂ ಸಂಸ್ಥಾನಗಳ ಉತ್ಪನ್ನದಲ್ಲಿ ಸರಿಯಾದ ಅರ್ಧಭಾಗವು ತನಗೆ ಸಲ್ಲತಕ್ಕದೆಂದು ಪ್ರಯತ್ನಮಾಡಿದನು, ಕೊನೆಯ ಬಾಜೀರಾಯನು ಈ ಮಾತಿಗೆ ಒಪ್ಪಿ, ಆದರಂತೆ ಮಾಡಿಕೊಡುತ್ತೇನೆಂದು ವಚನಕೊಟ್ಟನು. ಇದೇ ಬಾಜೀರಾಯನು ಯಾತ್ರಾರ್ಥವಾಗಿ ಹೋದಾಗ, ಸೊಂಡೂರಿಗೆ ಹೋಗುವ ವೇಳೆಯಲ್ಲಿ ರಾಮದುರ್ಗದಲ್ಲಿ ಇಳಿದುಕೊಂಡನು. ಮತ್ತು ತನ್ನ ಎದುರಿನಲ್ಲಿಯೇ ಇಬ್ಬರಿಗೂ ಎಲ್ಲ ಐಶ್ವರ್ಯಗಳನ್ನು ಸರಿಯಾಗಿ ಎರಡು ಪಾಲುಮಾಡಿ ಹಂಚಿಕೊಟ್ಟನು. ಅಂದಿನಿಂದ ಈ ಎರಡೂ ಸಂಸ್ಥಾನದವರು ಸರಿಯಾಗಿಯೇ ಸೈನ್ಯವನ್ನಿಟ್ಟು ಸರಕಾರಕ್ಕೆ ಆಧೀನರಾಗಿರಬೇಕೆಂದು ಗೊತ್ತಾಯಿತು. ಆಗ ಪೇಶ್ವೆಯರು ರಾಮದುರ್ಗಕರನಕಡೆಯಿಂದ ೧೫೦೦೦೦ ರೂ. ಗಳನ್ನು ಕಾಣಿಕೆಯಾಗಿ ತೆಗೆದುಕೊಂಡರು. ಹೆಚ್ಚು ಉತ್ಪನ್ನ ಬರುವ ೩೭ ಉತ್ತಮವಾದ ಊರುಗಳನ್ನು ಅವನಿಗೆ ಕೊಡಿಸಿದರು. ಮತ್ತು ಅವನಲ್ಲಿಡತಕ್ಕ ಸವಾರರ ಸಂಖ್ಯೆಯನ್ನು ಕಡಿಮೆ ಮಾಡಿ, ಇಬ್ಬರೂ

ಕೂಡಿ ೨೨೫ ಸವಾರರನ್ನೇ ಇಡಬೇಕೆಂದು ಗೊತ್ತುಪಡಿಸಿದರು. ಅದರಲ್ಲಿ ವೆಂಕಟರಾಯನು ೧೧೨ ಸವಾರರನ್ನೂ, ನಾರಾಯಣರಾಯನು ೧೧೩ ಸವಾರರನ್ನೂ ಇಡಬೇಕೆಂದು ಗೊತ್ತಾಯಿತು.

ಕ್ರಿ. ಶ. ೧೮೧೮ನೆಯ ವರ್ಷದಲ್ಲಿ ಪೇಶ್ವೆಯರಿಗೂ ಇಂಗ್ಲಿಷರಿಗೂ ನಡುವೆ ಯುದ್ಧವು ಆರಂಭವಾಯಿತು. ಆ ಕಾಲಕ್ಕೆ ನರಗುಂದಕರ ಮತ್ತು ರಾಮದುರ್ಗಕರ ಇವರ ಸೈನ್ಯವು ಮೊದಲು ಪೇಶ್ವೆಯರ ಕಡೆಗೇ ಇತ್ತು. ಈಗಿನ ನರಗುಂದದ ಒಡೆಯನು ದಾದಾಜಿರಾವ ಅಥವಾ ಅಪ್ಪಾಸಾಹೇಬ ಎಂಬವನಾಗಿದ್ದು ರಾಮದುರ್ಗಕ್ಕೆ ಮಾತ್ರ ನಾರಾಯಣರಾಯನೇ ಒಡೆಯನಾಗಿದ್ದನು. ಇವರಿಬ್ಬರೂ ಪೆಶ್ವೆಯರಿಗೆ ಚನ್ನಾಗಿ ಸಹಾಯಮಾಡಿದ್ದರು. ಆದರೆ ಕೊನೆಯಲ್ಲಿ ಇವರಿಬ್ಬರೂ ಜನರಲ್ ಮನ್ರೋನನ್ನು ಕೂಡಿಕೊಂಡರು. ಆದುದರಿಂದ ಮುಂದೆ ಒಡಂಬಡಿಕೆಯಾದಾಗ ಇವರಿಬ್ಬರಿಗೂ ಒಳ್ಳೇ ಲಾಭವಾಯಿತು. ಪೇಶ್ವೆಯರಲ್ಲಿದ್ದು ಕೆಲಸ ಮಾಡುವದು ತಪ್ಪಿತು. ಅಂದರೆ ಸ್ವತಂತ್ರರಾದರು. ಮತ್ತು ಅವರ ಕೊಣ್ಣೂರ ಪರಗಣೆಯು ಪೇಶ್ವೆಯರ ಕಡೆಗೇ ಇತ್ತು; ಆದರೆ ಈಗ ಅದಕ್ಕಾಗಿ ೩೪೨೯ ರೂ. ಗಳನ್ನು ಮಾತ್ರ ಇಂಗ್ಲಿಷ ಸರಕಾರಕ್ಕೆ ಕೊಟ್ಟು ಅದನ್ನು ಇವರೇ ತೆಗೆದುಕೊಳ್ಳಬೇಕೆಂದು ಗೊತ್ತಾಯಿತು. ಇದರ ಹೊರತು ಒಪ್ಪಂದದ ಉಳಿದ ನಿಯಮಗಳೆಲ್ಲ ಇತರ ಜಹಾಗೀರದಾರರ ಹಾಗೆಯೇ ಇದ್ದುವು.

ಇಂಗ್ಲಿಷ ಸರಕಾರದವರು, ಹಿಂದಕ್ಕೆ ಈ ಸಂಸ್ಥಾನಿಕರು ಇಂಗ್ಲಿಷರೊಡನೆ ಮಾಡಿಕೊಂಡ ಎಲ್ಲ ನಿಯಮಗಳನ್ನೂ ರದ್ದುಪಡಿಸಿದರು. ಮತ್ತು ಅವರೊಡನೆ ಹೊಸ ಒಪ್ಪಂದವನ್ನು ಮಾಡಿದರು. ಅದಕ್ಕೆ ಇವರಿಬ್ಬರೂ ಒಡಂಬಟ್ಟರು. ಕ್ರಿ. ಶ. ೧೮೦೧ನೆಯ ವರ್ಷದಲ್ಲಿ ಒಮ್ಮೆ ಒಡಂಬಡಿಕೆಯಾಗಿತ್ತು. ಆದರೂ ಕ್ರಿ. ಶ. ೧೮೨೧ನೆಯ ವರ್ಷದ ಜೂನ ತಿಂಗಳ ೯ನೆಯ ದಿವಸ ಅದರಲ್ಲಿ ಆದ ಒಡಂಬಡಿಕೆಯ ಮುಖ್ಯ ಮಾತುಗಳನ್ನು ಇದರಡಿಯಲ್ಲಿ ಕೊಡುತ್ತೇವೆ.

೧. ಹಿಂದಿನಿಂದ ಮಾಡುತ್ತ ಬಂದ ಹಾಗೆ ಪೇಶ್ವೆಯರ ಸೇವೆಯನ್ನು ಮಾಡುವ ಅವಶ್ಯಕತೆಯಿಲ್ಲ. ನಮ್ಮೊಡನೆ ಸ್ನೇಹದಿಂದಿರುವವನು, ನೀವು ಒಪ್ಪಿಕೊಂಡ ಮೇರೆಗೆ ತಪ್ಪದೆ ನಡೆಯಲಿಕ್ಕೆ ಬೇಕು. ಅದರಲ್ಲಿ ಸ್ವಲ್ಪವೂ ವ್ಯತ್ಯಯ ಉಂಟಾಗಬಾರದು.

೨. ಹಿಂದೆ ನೀವು ಕೊಣ್ಣೂರ ಪರಗಣೆಗೆ ಬದಲಾಗಿ ಪ್ರತಿ ವರ್ಷವೂ ೩೪೩೮ ರೂ. ಗಳನ್ನು ಪೇಶ್ವೆಯರಿಗೆ ಕೊಡುತ್ತಿದ್ದಿರಷ್ಟೇ? ಅದರಂತೆ ಈಗ ಪೇಶ್ವೆಯರಿಗೆ ಕೊಡುವ ಬದಲಾಗಿ ನಮಗೆ (ಕಂಪನಿ ಸರಕಾರಕ್ಕೆ) ತಪ್ಪದೆ ಕೊಡುತ್ತಿರಲಿಕ್ಕೆ ಬೇಕು.

೩. ಅಪ್ಪಾಸಾಹೇಬನು ಸ್ನೇಹದಿಂದಿರುವವರೆಗೆ ನರಗುಂದದ ಸಂಸ್ಥಾನವು ನಿರ್ಬಂಧವಾಗಿ ಅವನ ಜೀವಮಾನದ ವರೆಗೆ ಅವನ ಕಡೆಗೇ ಉಳಿಯುವದು. ತಾನು ಜೀವಿಸಿರುವಾಗ ಅವನು ಸ್ನೇಹದಿಂದ ವರ್ತಿಸುತ್ತಿದ್ದು ಸ್ವತಂತ್ರತೆಯಿಂದಲೇ ಉಪಭೋಗಿಸುತ್ತಿರಬಹುದು. ಈ ಪ್ರಕಾರವಾಗಿ ನಾಮುದಾರ ಗವ್ಹರ್ನರ ಜನರಲ್ ಸಾಹೇಬರಿಂದ ಒಂದು ಸನದು ದೊರೆಯುವದು. ಆದರೆ ಮುಂದೆ ಯಾವನು ಈ ಸಂಸ್ಥಾನಕ್ಕೆ ನಿಜವಾಗಿ ಬಾಧ್ಯಸ್ಥನೆಂದು ಗೊತ್ತಾಗುವದೋ ಅವನು ಹೊಸ ಸನದನ್ನು ಸಂಪಾದಿಸಲಿಕ್ಕೆ ಬೇಕು. ಈ ಸನದು ದೊರಕಿಸುವದಕ್ಕಾಗಿ ವಿಶೇಷ ತರದ ಯಾವ ಖರ್ಚನ್ನೂ ಮಾಡಬೇಕಾಗಿಲ್ಲ; ಓಂದಿನಂತೆ ಕಾಣಿಕೆ ಮೊದಲಾದವುಗಳನ್ನು ಕೊಡಬೇಕಾಗಿಲ್ಲ. ನಿಮ್ಮ ವಂಶಜನು ಆ ವಿಷಯದಲ್ಲಿ ಒಂದು ಅರ್ಜಿಯನ್ನು ಕಂಪನಿ ಸರಕಾರದ ಕಡೆಗೆ ಮಾಡಿದರೆ ಸಾಕು. ಯೋಗ್ಯ ವಿಚಾರವಾಗಿ ಸನದು ದೊರೆಯುವದು; ಮತ್ತು ಸಂಸ್ಥಾನವು ನಿಮ್ಮ ವಂಶದವರಲ್ಲಿಯೇ ಉಳಿಯುವದು.

೪. ಪೇಶ್ವೆಯರಿಗೂ ಇಂಗ್ಲಿಷರಿಗೂ ಯುದ್ಧವು ಆರಂಭನಾಗುವ ಮೊದಲು ಯಾವ ಯಾವ ಇನಾಮುಗಳೂ, ಜಹಗೀರುಗಳೂ, ಊರುಗಳೂ ಮೊದಲಾದವು ಅಪ್ಪಾಸಾಹೇಬನ ಕಡೆಗೆ ಇದ್ದವೋ ಅವು ಇಂಗ್ಲಿಷರ ಇಲಾಖೆಯಲ್ಲಿದ್ದರೂ ಅವ್ಯಾಹತವಾಗಿ ಅಪ್ಪಾಸಾಹೇಬನ ಕಡೆಗೇ ಉಳಿಯುವವು. ಆದರೆ ಅವುಗಳಲ್ಲಿ ಯಾವುದು ಸಂಕಾಂದ್ದೇ ಆಗಿತ್ತೆಂದು ನಿಶ್ಚಿತವಾಗಿ ಸಿದ್ಧವಾಗುವದೋ ಅದನ್ನು ಮಾತ್ರ ಸರಕಾರವು ತೆಗೆದುಕೊಳ್ಳುವದು. ಆದರೆ ಧರ್ಮಾದಾಯಕ್ಕಾಗಿ ಯಾವ ಯಾವ ಊರುಗಳು ಇನಾಮಾಗಿ ಕೊಡಲ್ಪಟ್ಟಿದ್ದುವೋ ಅವೆಲ್ಲವೂ ಅಪ್ರತಿಬಂಧವಾಗಿ ಹಾಗೆಯೇ ನಡೆಯುವವು.

೫. ಅಪ್ಪಾಸಾಹೇಬನು ತನ್ನ ಪ್ರಜೆಗಳನ್ನೂ ಒಕ್ಕಲಿಗರನ್ನೂ ಒಳ್ಳೆಯ ರೀತಿಯಿಂದ ಸಂರಕ್ಷಿಸುತ್ತ ಅವರಿಗೆ ಸುಖವನ್ನುಂಟು ಮಾಡಬೇಕು. ರಾಜ್ಯದಲ್ಲಿ ಕೊಲೆ, ಕಳವು, ಸುಲಿಗೆ ಮೊದಲಾದವುಗಳು ಸಂಭವಿಸದಂತೆ ನೋಡಿಕೊಳ್ಳುತ್ತ, ಎಲ್ಲರನ್ನೂ ನ್ಯಾಯದಿಂದ ಕಾಪಾಡಬೇಕು. ಯಾರಾದರೂ ಕಂಪನಿ ಸರಕಾರದ ಕಡೆಗೆ ಅರ್ಜಿ ಮೊದಲಾದವುಗಳನ್ನು ಮಾಡಿದರೆ, ಅವುಗಳ ವಿಷಯದಲ್ಲಿ ಕಂಪನಿ ಸರಕಾರದ ಆದೇಶವನ್ನು ಮನ್ನಿಸಲಿಕ್ಕೆ ಬೇಕು. ಒಂದು ವೇಳೆ ಅಪ್ಪಾಸಾಹೇಬನ ಅನ್ಯಾಯದ ಮೂಲಕ ದೇಶದಲ್ಲಿ ಅವ್ಯವಸ್ಥೆಯುಂಟಾದರೂ ಕಂಪನಿ ಸರಕಾರದವರು ಅದರ ಯೋಗ್ಯ ವ್ಯವಸ್ಥೆಯನ್ನು ಮಾಡಬೇಕಾಗುವದು. ಆದುದರಿಂದ ಅಂತಹ ಪ್ರಸಂಗವು ಒದಗದಂತೆ ಜಾಗರೂಕತೆಯಿಂದ ವರ್ತಿಸಬೇಕು.

೬. ಸೈನ್ಯವನ್ನು ಕೂಡಿಸಿ ಇನ್ನೊಬ್ಬರೊಡನೆ ಕಾದುವ ಪ್ರಸಂಗ ಬಂದಾಗ ಕಂಪನಿ ಸರಕಾರದವರ ಅನುಮತಿಯನ್ನು ಅವಶ್ಯವಾಗಿ ಪಡೆಯಲೇ ಬೇಕು. ವಿವಾದಾತ್ಮಕವಾದಂತಹ ಯಾವದೊಂದು ಪ್ರಕರಣವಿದ್ದರೆ, ಅದನ್ನು ಕಂಪನಿ ಸರಕಾರದವರ ಮುಂದೆ ತಂದು ಅವರ ನಿರ್ಣಯದಂತೆ ನಡೆಯಬೇಕೇ ಹೊರತು ಯುದ್ಧವನ್ನು ಹೂಡುವ ಪ್ರಸಂಗವನ್ನು ಎಂದೂ ತರಬಾರದು.

೭. ಶ್ರೀಮಂತ ಬಾಜೀರಾವ ಪೇಶ್ವೆ ಇವರ ಸಂಗಡವಾಗಲಿ, ಇನ್ನುಳಿದ ಸಂಸ್ಥಾನಿಕ, ಇನಾಮದಾರ, ಸರದಾರ ಮೊದಲಾದವರೊಡನೆ ಪತ್ರವ್ಯವಹಾರವನ್ನು ನಡೆಯಿಸಕೂಡದು; ಮತ್ತು ಅಂತಹ ಯಾರೊಡನೆಯೂ ಗುಪ್ತಸಂಬಂಧವನ್ನು ಕೂಡ ಇಟ್ಟುಕೊಳ್ಳಲಾಗದು. ಅದರಂತೆಯೇ ಅವಿಧೇಯರು, ಬಂಡುಗಾರರು, ವಿಶ್ವಾಸಘಾತಕರು ಮೊದಲಾದವರಿಗೆ ಎಂದೂ ಆಶ್ರಯವನ್ನು ಕೊಡತಕ್ಕದಲ್ಲ; ಯಾವ ತರದಿಂದಲೂ ಅಂತಹವರಿಗೆ ನೆರವಾಗತಕ್ಕದಲ್ಲ.

೮. ನಿಮ್ಮ ಪ್ರಾಂತದೊಳಗಿನ ಅಪರಾಧಿಗಳು ಕಂಪನಿ ಸರಕಾರದ ಸೀಮೆಯಲ್ಲಿ ಬಂದರೆ, ಆ ಸಂಗತಿಯನ್ನು ಕೂಡಲೆ ಸರಕಾರಕ್ಕೆ ಅರಿಕೆ ಮಾಡಬೇಕು. ಅಂದರೆ ಅವರ ವಿಚಾರಣೆಯನ್ನು ಮಾಡಿ ಒಪ್ಪಿಸುವ ವ್ಯವಸ್ಥೆಯು ಮಾಡಲ್ಪಡುವದು. ಅದರಂತೆಯೇ ಕಂಪನಿ ಸರಕಾರದ ಅಧೀನ ಪ್ರಾಂತದೊಳಗಿನ ಅಪರಾಧಿಗಳು ಸಂಸ್ಥಾನದಲ್ಲಿ ಬಂದರೆ ಅವರನ್ನು ಕೂಡಲೇ ಹಿಡಿದು ಸರಕಾರಕ್ಕೆ ಒಪ್ಪಿಸಲಿಕ್ಕೆ ಬೇಕು. ಕಂಪನಿ ಸರಕಾರದ ಜನರು ಅಪರಾಧಿಗಳ ಶೋಧಕ್ಕಾಗಿ ಸಂಸ್ಥಾನದಲ್ಲಿ ಬಂದರೆ ಅವರಿಗೆ ಪ್ರತಿಯೊಂದು ತರದಿಂದ ನೆರವಾಗಲಿಕ್ಕೆ ಬೇಕು.

ಮೇಲೆ ಹೇಳಿದಂತೆ ಒಡಂಬಡಿಕೆಯನ್ನು ಮಾಡಿಕೊಂಡು ನರಗುಂದ ಮತ್ತು ರಾಮದುರ್ಗ ಸಂಸ್ಥಾನಾಧಿಪತಿಗಳು ಕಂಪನಿ ಸರಕಾರದ ಆಶ್ರಯದಲ್ಲಿ ಆನಂದದಿಂದ ತಮ್ಮ ತಮ್ಮ ಅಧಿಕಾರೈಶ್ವರ್ಯಗಳನ್ನು ಅನುಭವಿಸಹತ್ತಿದರು.

ಕ್ರಿ. ಶ. ೧೮೩೭ನೆಯ ವರ್ಷ ರಾಮದುರ್ಗದ ನಾರಾಯಣರಾಯನು ಮರಣ ಹೊಂದಿದನು. ಅವನಿಗೆ ಮಕ್ಕಳಿದ್ದಿಲ್ಲ. ಅವನ ಅನುಬಂಧಿಗಳಲ್ಲಿ ದಾದಾಜೀರಾವ ನರಗುಂದಕರ ಎಂಬ ಒಬ್ಬನೂ ಅವನ ಎರಡು ಮಕ್ಕಳೂ ಮಾತ್ರ ಇದ್ದುವು. ಈ ದಾದಾಜಿರಾಯನು ನಾರಾಯಣರಾಯನ ವಂಶದ ದೂರಿನ ಒಬ್ಬ ಆಪ್ತನಾಗಿದ್ದನು. ಆದರೆ ನಾರಾಯಣರಾಯನ ಹೆಂಡತಿಯಾದ ರಾಧಾಬಾಯಿಯು ನರಗುಂದಕರನ ಮಗನನ್ನು ದತ್ತಕ ತೆಗೆದುಕೊಳ್ಳಲು ಇಚ್ಛೆಯುಳ್ಳವಳಾಗಿದ್ದಿಲ್ಲ. ಯಾಕಂದರೆ ಯೋಗಿರಾಯನೆಂಬುವನು ಮೊದಲಿನ ದಾದಾಸಾಹೇಬನನ್ನು ಕೊಲ್ಲಿಸಿದ್ದನು. ಆದುದರಿಂದ ಈ ಎರಡೂ ಸಂಸ್ಥಾನದವರ ಮನಸ್ಸು ಪರಸ್ಪರರ ವಿಷಯ

ವಾಗಿ ಕೆಟ್ಟುಹೋಗಿತ್ತು. ಮೇಲಾಗಿ ಈಗಿನ ದಾದಾಸಾಹೇಬನ ಇಬ್ಬರೂ ಮಕ್ಕಳು ವಿವಾಹಿತರಾಗಿದ್ದರು. ಆದುದರಿಂದ ಅವರು ಶಾಸ್ತ್ರಾನುಸಾರವಾಗಿ ದತ್ತಕಕ್ಕೆ ಯೋಗ್ಯರಾಗಿದ್ದಿಲ್ಲ. ಈ ಪ್ರಕಾರ ಅನೇಕ ವಿಧದ ತೊಂದರೆಗಳುಂಟಾಗಲು, ಕಂಪನಿ ಸರಕಾರದವರು ಸಂಸ್ಥಾನವನ್ನು ಖಾಲಸಾ ಮಾಡುವ ವಿಚಾರವನ್ನು ನಡೆಯಿಸಿದರು. ಈ ವರ್ತಮಾನವು ತಿಳಿದ ಬಳಿಕ, ಹಾಗೆ ಮಾಡುವದು ಉಚಿತವಲ್ಲವೆಂದು ರಾಧಾಬಾಯಿಯು ವಿನಯಪೂರ್ವಕವಾಗಿ ಕಂಪನಿ ಸರಕಾರದವರಿಗೆ ವಿಜ್ಞಪ್ತಿಯನ್ನು ಮಾಡಿಕೊಂಡಳು.

ಇತ್ತ ನರಗುಂದಕರನು ರಾಮದುರ್ಗ ಸಂಸ್ಥಾನವು ತನಗೆ ಸೇರತಕ್ಕದೆಂದು ಕಂಪನಿಸರಕಾರದವರಿಗೆ ಪತ್ರಬರೆದು ಪ್ರಯತ್ನವನ್ನು ಮಾಡಹತ್ತಿದನು. ಕ್ರಿ. ಶ. ೧೮೫೫ನೆಯ ವರ್ಷ ಕಂಪನಿಸರಕಾರದವರು, ನರಗುಂದಕರನ ಚಿಕ್ಕಮಗನಾದ ಹರಿಹರರಾವ ಅಥವಾ ರಾವಸಾಹೇಬನನ್ನು ರಾಧಾಬಾಯಿಯು ದತ್ತಕ ತೆಗೆದುಕೊಳ್ಳಬೇಕೆಂದೂ, ನರಗುಂದಕರನು ಇದಕ್ಕೆ ಅವಶ್ಯವಾಗಿ ಸಮ್ಮತಿಸಬೇಕೆಂದೂ ಅಪ್ಪಣೆಯನ್ನು ಕೊಟ್ಟರು. ಈ ರಾವಸಾಹೇಬನು ಆಗ ೧೪ ವರ್ಷದವನಾಗಿದ್ದನು. ಈ ಅಪ್ಪಣೆಯು ರಾಧಾಬಾಯಿಯ ಮನಸ್ಸಿಗೆ ಬರಲಿಲ್ಲ. ಆದರೆ ಕಂಪನಿಸರಕಾರದವರು ದತ್ತಕ ತೆಗೆದುಕೊಳ್ಳಬೇಕೆಂದು ಒತ್ತಾಯಮಾಡಿದರು; ಮತ್ತು ಪೋಲಿಟಿಕಲ್ ಏಜಂಟ, ರಾಮರಾವ ದೇಸಾಯಿ, ಅಕಬರನವೀಸ, ಅಣ್ಣಾ ಸಹಾಪೂರಕರ ಇವರೇ ಮೊದಲಾದವರು ರಾಧಾಬಾಯಿಗೆ ಹಲವು ಬಗೆಯಿಂದ ಸಮಾಧಾನಹೇಳಿ, ದತ್ತಕತೆಗೆದುಕೊಳ್ಳುವದಕ್ಕೆ ಒಡಂಬಡಿಸಿದರು. ಎಲ್ಲರೂ ಈ ಪ್ರಕಾರ ಆಗ್ರಹವನ್ನು ಮಾಡಹತ್ತಿದ ಬಳಿಕ, ರಾಧಾಬಾಯಿಯು ಸಂಸ್ಥಾನದ ಸಾಧ್ಯತೆಯು ತನ್ನದೇ ಆಗಿರಬೇಕೆಂದೂ, ದತ್ತಕಪುತ್ರನು ತನ್ನ ಆಜ್ಞೆಯಂತೆಯೇ ವರ್ತಿಸಬೇಕೆಂದೂ ಗೊತ್ತುಮಾಡಿ ದತ್ತಕಮಾಡಿಕೊಂಡಳು. ಮತ್ತು ಕೆಲವು ಆಳುಮಕ್ಕಳು ಮತ್ತು ಒಬ್ಬ ಕಾರಕೂನನು ಇವರ ಹೊರತು ಹುಡುಗನ ಸಂಗಡ ನರಗುಂದದವರು ಯಾರೂ ಇರಕೂಡದೆಂದು ಖಂಡಿತವಾಗಿ ಗೊತ್ತುಮಾಡಿದಳು. ಆದರೆ ದತ್ತಕತೆಗೆದುಕೊಂಡ ಹುಡುಗನಿಗ ಯೋಗ್ಯವಾದ ಮಾನಸನ್ಮಾನಗಳನ್ನು ಮಾಡುವುದಾಗಿಯೂ, ಅವನನ್ನು ಯೋಗ್ಯರೀತಿಯಿಂದ ನಡೆಯಿಸಿಕೊಳ್ಳುವದಾಗಿಯೂ ವಚನಕೊಟ್ಟಳು. ಹೀಗೆ ತನ್ನ ಮನಸ್ಸಿಗೆ ತಕ್ಕಂತೆ ನಿಯಮನಿರ್ಬಂಧಗಳನ್ನು ಮಾಡಿಕೊಂಡು ರಾಧಾಬಾಯಿಯು ಹರಿಹರರಾಯನನ್ನು ದತ್ತಕವಿಧಿಯಿಂದ ಮಗನನ್ನು ಮಾಡಿಕೊಂಡು, ಅವನ ಹೆಸರನ್ನು ಬದಲಿಸಿ ರಾಮರಾಯನೆಂದು ಬೇರೆ ಅಭಿಧಾನವನ್ನಿಟ್ಟಳು. ಸುಮಾರು ಎರಡು ವರ್ಷಗಳವರೆಗೆ ಬರಿದಾಗಿದ್ದ ಗಾದಿಗೆ ರಾಮರಾಯನು ಒಡೆಯನಾದನು.

ಆದರೆ ರಾಧಾಬಾಯಿಗೂ ಇವನಿಗೂ ಮಾತ್ರ ಕೂಡಿನಡೆಯಲಿಲ್ಲ. ರಾಧಾಬಾಯಿಯ ಪ್ರೇಮವು ಇವನಮೇಲೆ ಎಳ್ಳಷ್ಟಾದರೂ ಇದ್ದಿಲ್ಲ. ರಾಧಾಬಾಯಿಯ ಸಂಗಡ ನಡೆದುಕೊಳ್ಳುವದಕ್ಕಾಗದೆ, ಬೇಸತ್ತು ಈ ರಾಮರಾಯನು ದತ್ತವಿಧಾನವಾದ ಎಂಟನೆಯ ವರ್ಷ ತಪ್ಪಿಸಿಕೊಂಡು ನರಗುಂದಕ್ಕೆ ಓಡಿಹೋದನು. ಈ ಸುದ್ದಿಯು ಕಂಪನಿಸರಕಾರದವರಿಗೆ ತಿಳಿಯಲು ಅವರು ಈ ವಿಷಯದಲ್ಲಿ ಮಧ್ಯಸ್ಥಿಕೆಯನ್ನು ವಹಿಸಬೇಕಾಯಿತು. ರಾಮರಾಯನ ಖರ್ಚಿಗಾಗಿ ಸಂಸ್ಥಾನದ ಉತ್ಪನ್ನದ ನಾಲ್ಕನೆಯ ಭಾಗವನ್ನು ರಾಧಾಬಾಯಿಯಿಂದ ಅವನಿಗೆ ಕೊಡಿಸಿದರು. ಈ ರಾಧಾಬಾಯಿಯು ಕ್ರಿ. ಶ. ೧೮೦೮ನೆಯ ವರ್ಷ ತೀರಿಕೊಂಡಳು. ಕೊನೆಯ ವರೆಗೂ ತಾಯಿಮಕ್ಕಳಲ್ಲಿ ವಾತ್ಸಲ್ಯವುಂಟಾಗಲಿಲ್ಲ. ಅವಳ ಮರಣದ ಅನಂತರ ಸಂಸ್ಥಾನವು ರಾಮರಾಯನ ಕೈಯಲ್ಲಿ ಬಂತು; ಮತ್ತು ಅವನು ಸ್ವತಃ ಕಾರಭಾರವನ್ನು ನೋಡಹತ್ತಿದನು. ಈ ಪ್ರಕಾರ ರಾಮರಾಯನು ಬಹುದಿವಸಗಳ ಮೇಲೆ ಕಾರಭಾರದ ಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡನಾದರೂ ನಡುವಿನ ಕಾಲದಲ್ಲಿ ರಾಜ್ಯದಲ್ಲಿ ಯಾವತರದ ಅವ್ಯವಸ್ಥೆಯೂ ಇದ್ದಿಲ್ಲ. ಯಾಕಂದರೆ ರಾಧಾಬಾಯಿಯು ಚತುರೆಯೂ, ರಾಜ್ಯಕಾರಭಾರದಲ್ಲಿ ತಿಳಿವಳಿಕೆಯುಳ್ಳವಳೂ ಆಗಿದ್ದಳು. ಅವಳು ತನ್ನ ಸಂಸ್ಥಾನದ ರಾಜ್ಯವ್ಯವಸ್ಥೆಯನ್ನು ಬಹಳ ಚೆನ್ನಾಗಿ ಕಾಯ್ದುಕೊಂಡಿದ್ದಳು. ಅವಳ ಚತುರತೆಯು ಹೊಗಳುವಂತಹದಿತ್ತು. ಅವಳು ಕಾರಭಾರದಲ್ಲಿ ಎರಡನೆಯವರನ್ನು ಎಂದೂ ಕೈಹಾಕಗೊಡಲಿಲ್ಲ. ಇತರರು ಎಷ್ಟೇ ಉಪದೇಶಗಳನ್ನು ಹೇಳಿದರೂ, ಅವನ್ನೆಲ್ಲ ಕೇಳಿಕೊಂಡು ತನ್ನ ಮನಸ್ಸಿಗೆ ಸೂಕ್ತವಾಗಿ ತೋರಿದಂತೆಯೇ ಅವಳು ನಡೆಯುತ್ತಿದ್ದಳು. ಈ ಪ್ರಕಾರ ಜಾಣೆಯೂ ವಿಚಾರಶೀಲೆಯೂ ಆಗಿದ್ದರೂ, ಅವಳಿಗೂ ಅವಳ ದತ್ತಕಮಗನಿಗೂ ಮಾತ್ರ ಎಂದೂ ಕೂಡಿನಡೆಯಲಿಲ್ಲ. ಇದಕ್ಕೇನು ಕಾರಣವೆನ್ನಬೇಕೋ ನಮಗಂತೂ ತಿಳಿಯುವದಿಲ್ಲ. ಮಾನವೀಸ್ವಭಾವವೇ ವಿಚಿತ್ರವಾದುದು!

ರಾಧಾಬಾಯಿಯ ದತ್ತಕಮಗನಾದ ರಾಮರಾಯನು ಅವಳ ಮರಣದ ತರುವಾಯ ಸ್ವತಂತ್ರನಾಗಿ ಕಾರಭಾರವನ್ನು ನೋಡಹತ್ತಿದ ಸಮಯದಲ್ಲಿಯೇ ಹಿಂದುಸ್ಥಾನದಲ್ಲಿ ಶಿಪಾಯರ ಬಂಡಾಯವು ಪ್ರಾರಂಭವಾಯಿತು. ಕೊಲ್ಲಾಪುರದಲ್ಲಿದ್ದ ಸೈನ್ಯವು ಅಸ್ತವ್ಯಸ್ತವಾಯಿತು. ಜಮಖಂಡಿಯಲ್ಲಿಯೂ ಬಂಡಾಯವು ಆರಂಭವಾಗುವ ಲಕ್ಷಣಗಳು ತೋರಿದುವು. ಅದೇಕಾರಣದಿಂದ ಸರಕಾರದವರು ಜಮಖಂಡಿಯ ಒಡೆಯನನ್ನು ಸೆರೆಹಿಡಿದು, ಕಳೆದ ಎಂಟು ತಿಂಗಳುಗಳಿಂದ ವೆಂಗುರ್ಲೆಯಲ್ಲಿ ಪ್ರತಿಬಂಧದಲ್ಲಿಟ್ಟಿದ್ದರು. ಆ ಸಂಸ್ಥಾನದಲ್ಲಿ ಮದ್ದುಗುಂಡುಗಳ ಸಂಗ್ರಹವೇನಾದರೂ ಇದೆಯೋ ಹೇಗೆಂದು ಶೋಧಮಾಡಿದರು; ಮತ್ತು ಅಲ್ಲಿಯ ಮುಖ್ಯಸೇನಾಪತಿಯಾದ ಛಟುಸಿಂಗನ ವಿಷಯಕ್ಕೆ ಸ್ವಲ್ಪ ಸಂಶಯಬಂದುದರಿಂದ ಅವ

ನನ್ನು ಕೂಡಲೇ ಸೆರೆಹಿಡಿದರು. ಇವನು ಸರಕಾರದ ಮುಂದೆ ನ್ಯಾಯಾಸ್ಥಾನದಲ್ಲಿ ನಿಂತು ‘ ಈ ಬಂಡಾಯವನ್ನು ಆರಂಭಿಸಿದವನು ನಾನೇ; ಇದರಲ್ಲಿ ನಮ್ಮ ಸಂಸ್ಥಾನಿಕರ ಅಂಗವು ಸ್ವಲ್ಪಾದರೂ ಇಲ್ಲ. ’ ಎಂದು ತಾನೇ ಸಮ್ಮತಿದರ್ಶಕವಾದ ಉತ್ತರಕೊಟ್ಟನು. ಆಗ ಅವನನ್ನು ಜಮಖಂಡಿಯಲ್ಲಿಯೇ ಗಲ್ಲಿಗೇರಿಸಿದರು; ಮತ್ತು ಜಮಖಂಡಿಕರನು ನಿರ್ದೋಷಿಯೆಂದು ಅವನನ್ನು ಬಂಧಮುಕ್ತಮಾಡಿದರು.

ಇಲ್ಲಿ ಈ ಪ್ರಕಾರದ ಅವ್ಯವಸ್ಥೆಯಾಗಿ ಸ್ವಲ್ಪ ಶಾಂತತೆಯುಂಟಾದ ಸಮಯದಲ್ಲಿಯೇ ಧಾರವಾಡದ ಕಡೆಯ ಮುಂಡರಿಗಿಯ ಭೀಮರಾಯನು ಆ ಕಡೆಯಲ್ಲಿ ಬಂಡಾಯವನ್ನೆಬ್ಬಿಸಿದನು. ಅವನು ಸ್ವಲ್ಪೇ ಜನರನ್ನು ಕೂಡಿಸಿಕೊಂಡಿದ್ದರೂ ಸರಕಾರದವರಿಗೆ ಬಹಳ ತೊಂದರೆಕೊಟ್ಟನು. ಇವನು ಮೊದಲು ಕಂಪನಿಸರಕಾರದ ರಾಜ್ಯದೊಳಗೆ ಮಾಮುಲೇದಾರನಾಗಿದ್ದನು. ಆದರೆ ಯಾವದೋ ಕಾರಣದಿಂದ ಇವನಿಗೂ ಇವನ ವರಿಷ್ಠರಿಗೂ ವೈಮನಸ್ಯವುಂಟಾಯಿತು. ಕೊನೆಯಲ್ಲಿ ಒಂದು ಪ್ರಕರಣದಲ್ಲಿ ಇವನಿಗೆ ಶಿಕ್ಷೆಯಾಗುವ ಹೊತ್ತುಬಂತು. ಆಗ ಅವನು ಓಡಿಹೋಗಿ, ತಾನು ನಿರ್ದೋಷಿಯೆಂಬ ಭಾವನೆಯಿಂದ ಗುಪ್ತವಾಗಿದ್ದುಕೊಂಡು, ತನ್ನ ಅನುಯಾಯಿಗಳನ್ನೊಡಗೊಂಡು ಬಂಡಾಯವನ್ನು ಆರಂಭಿಸಿದನು. ಇರಲಿ.

ಇತ್ತ ನರಗುಂದದಲ್ಲಿ ದಾದಾಜಿಯ ಹಿರಿಯ ಮಗನಾದ ಭಾಸ್ಕರರಾವ ಅಥವಾ ಬಾಬಾಸಾಹೇಬನು ವಯಸ್ಸಿಗೆ ಬಂದನು. ದಾದಾಜಿಯ ಬಂಧುವಾದ ದಾಸರಾಯನು ಕ್ರಿ.ಶ. ೧೮೩೩ನೆಯ ವರ್ಷದಲ್ಲಿ ಸಂತತಿಯಿಲ್ಲದೆ ತೀರಿಹೋಗಿದ್ದನು. ದಾದಾಜಿರಾಯನು ಅವನ ಹೆಂಡತಿಗೆ ಪ್ರತಿವರ್ಷಕ್ಕೆ ೧೦೦೦ ರೂ. ಗಳನ್ನು ಪೋಟಗಿಕೊಡುತ್ತಿದ್ದನು ಆದರೆ ಬ್ರಾತೃವಿರಹವು ಅವನ ಮನಸ್ಸಿನಮೇಲೆ ಉದಾಸೀನತೆಯ ಪರಿಣಾಮವನ್ನು ಬಲವಾಗಿ ಉಂಟುಮಾಡಿತು. ಆದುದರಿಂದ ರಾಜ್ಯಕಾರಭಾರದ ವಿಷಯದಲ್ಲಿದ್ದ ಅವನ ಉತ್ಸುಕತೆಯೆಲ್ಲ ಹೊರಟುಹೋಯಿತು. ಕೊನೆಗೆ ದಾದಾಜಿ ಲಿಮಯೆ ಎಂಬವನಮೇಲೆ ಕಾರಭಾರವನ್ನೆಲ್ಲ ಒಪ್ಪಿಸಿ ತಾನು ಸ್ನಾನಸಂಧ್ಯೆ, ಪುರಾಣಶ್ರವಣ ಮೊದಲಾದ ಧಾರ್ಮಿಕಕಾರ್ಯಗಳಲ್ಲಿಯೇ ಮನಸ್ಸು ಹಾಕಿ ಕಾಲಕ್ಷೇಪ ಮಾಡಹತ್ತಿದನು. ಆದುದರಿಂದ ಕುಹಕರಿಗೆ ಆಸ್ಪದವು ದೊರೆಯಿತು. ರಾಜ್ಯದಲ್ಲಿ ಅವ್ಯವಸ್ಥೆಯಾಯಿತು; ಇಷ್ಟೇ ಅಲ್ಲ; ಸಂಸ್ಥಾನಕ್ಕೆ ಬಹಳೇ ಸಾಲವಾಯಿತು !!

ಈ ಕಾಲದಲ್ಲಿ ಭಾಸ್ಕರರಾಯನು ೨೮ ವರ್ಷದವನಾಗಿದ್ದು ಅವನು ಒಳ್ಳೇ ಜಾಣನಿದ್ದನು. ಅವನು ಯುಕ್ತಿಯಿಂದ ಎಲ್ಲ ನಿಜಸಂಗತಿಯನ್ನು ದಾದಾಜಿಯ ಕಿವಿಯಮೇಲೆ ಹಾಕಿದನು. ಅವನ ಮನಸ್ಸನ್ನು ಒಲಿಸಿಕೊಂಡನು; ಮತ್ತು ಕೊನೆಗೆ ಮೆಲ್ಲಮೆಲ್ಲನೆ ರಾಜ್ಯಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳುವ ಅಪೇಕ್ಷೆಯಲ್ಲಿದ್ದನು.

ರಾಜ್ಯದಲ್ಲಿದ್ದ ಅವ್ಯವಸ್ಥೆಯನ್ನು ಅವನು ಸ್ವಲ್ಪ ಉಪ್ಪುಕಾರ ಹಚ್ಚಿ ದಾದಾಜಿಗೆ ಹೇಳಿದನು; ಮತ್ತು ಮುದುಕತನದಲ್ಲಿ ಮಗನಿಂದ ಸೇವೆಮಾಡಿಸಿಕೊಳ್ಳುವದು ತಂದೆಗೆ ಭೂಷಣವು; ಪ್ರೌಢನಾದ ಮೇಲೆ ತಂದೆಯ ಭಾರವನ್ನು ತಾನು ಹೊತ್ತುಕೊಂಡು ತಂದೆಗೆ ಸುಖವಾಗುವಂತೆ ಆಚರಿಸುವದು ಪುತ್ರಧರ್ಮವು; ಈ ಪ್ರಕಾರ ಶಾಸ್ತ್ರವಿಧಿಯಿರುವಾಗ ಮಗನು ಎಲ್ಲ ಭಾರವನ್ನು ಹೊರಲು ಯೋಗ್ಯನೂ, ಅಪೇಕ್ಷೆಯುಳ್ಳವನೂ, ಉತ್ಸಾಹಿಯೂ ಆಗಿರುವಾಗ, ನೀವು ಅದನ್ನೆಲ್ಲ ಅವನಿಗೆ ಒಪ್ಪಿಸಿ ಯಾಕೆ ನಿಶ್ಚಿಂತರಾಗಬಾರದು? ಈ ತರದ ಮಾತುಗಳಿಂದ ದಾದಾಜಿರಾಯನ ಮನಸ್ಸನ್ನು ಒಲಿಸಿ ಭಾಸ್ಕರರಾಯನು ರಾಜ್ಯಕಾರಭಾರವನ್ನು ವಶಪಡಿಸಿಕೊಳ್ಳಲು ಯತ್ನಿಸಿದನು. ದಾದಾಜಿರಾಯನಿಗಾದರೂ ಆ ಮಾತು ಸಮಂಜಸವೆಂದು ತೋರಿತು. ಅವನು ದಾದಾಜಿ ಲಿಮಯೇನ ಕೈಯೊಳಗಿಂದ ಕಾರಭಾರವನ್ನು ಬಿಡಿಸಿ ಭಾಸ್ಕರರಾಯನಿಗೆ ಕೊಡುವ ಆಲೋಚನೆಯಲ್ಲಿದ್ದನು. ಆದರೆ ಆ ಕಾರಭಾರಿಯು ಬಹಳ ಧೂರ್ತನಾಗಿದ್ದನು. ಅವನು ಇಲ್ಲದುದೊಂದು ಸಲ್ಲದುದೊಂದು ದಾದಾಜಿರಾಯನಿಗೆ ಹೇಳಿ ಅವನ ಮನಸ್ಸನ್ನು ಕೆಡಿಸಿದನು; ಮತ್ತು ಕಾರಭಾರವು ತನ್ನ ಕೈಯಲ್ಲಿಯೇ ಇರುವಂತೆ ಮಾಡಿಕೊಂಡನು. ಹೀಗಾಗಿ ದಾದಾಜಿರಾಯನ ಮರಣಪರಿಯಂತರ ಕಾರಭಾರವು ಲಿಮಯೇನ ವಶದಲ್ಲಿಯೇ ಇತ್ತು. ದಾದಾಜಿರಾಯನು ಕ್ರಿ. ಶ. ೧೮೪೨ನೆಯ ವರ್ಷದಲ್ಲಿ ತೀರಿಕೊಂಡನು. ಅಂದಿನಿಂದಲೇ ಭಾಸ್ಕರರಾಯನು ನರಗುಂದದ ಒಡೆಯನಾದನು.

## ೨ನೆಯ ಪ್ರಕರಣ.

### ವೈಮನಸ್ಯವು.

ನರಗುಂದ ಸಂಸ್ಥಾನದ ಒಡೆಯನಾದ ಈ ಭಾಸ್ಕರರಾಯನು ಅಥವಾ ಬಾಬಾಸಾಹೇಬನು ನೋಡುವದಕ್ಕೆ ಬಹಳ ಕ್ರೂರನಂತೆ ತೋರುತ್ತಿದ್ದನು. ಆದರೆ ಅವನು ನಿಜವಾಗಿ ಅತಿಶಯ ದಯಾಲುವೂ ಶೂರನೂ ಆಗಿದ್ದನು. ಸಾಹಸದಲ್ಲಿ ಅವನನ್ನು ಹೋಲುವವರು ಯಾರೂ ಇದ್ದಿಲ್ಲ. ಸ್ವಾತಂತ್ರ್ಯಪ್ರಿಯತೆಯು ಅವನ ಹುಟ್ಟುಗುಣವಾಗಿತ್ತು. ಆದುದರಿಂದ ಎರಡನೆಯವರ ಅಧೀನದಲ್ಲಿ ಇರುವದು ಅವನಿಗೆ ಸೇರುತ್ತಿದ್ದಿಲ್ಲ. ಅದರಂತೆಯೇ ಅವನು ಆಜ್ಞಾಭಂಗವನ್ನು ಎಂದೂ ಸಹಿಸುತ್ತಿದ್ದಿಲ್ಲ. ತನ್ನ ಅಪ್ಪಣೆಯನ್ನು ಯಾರಾದರೂ ಮೀರಿದರೆ ಅವರಿಗೆ ಆ ಕ್ಷಣದಲ್ಲಿಯೇ ತಕ್ಕ ಶಾಸನವನ್ನು ವಿಧಿಸುತ್ತಿದ್ದನು. ಈ ರೀತಿಯಾಗಿ ಶೂರತ್ವದ ಬೀಜವು ಅವನಲ್ಲಿ ದೃಢವಾಗಿ ಮೊಳೆತಿದ್ದರೂ, ಬ್ರಾಹ್ಮಣಧರ್ಮದಂತೆ ಸ್ನಾನ, ಸಂಧ್ಯಾವಂದನೆ, ದೇವತಾರ್ಚನೆ, ಪಂಚಮಹಾಯಜ್ಞವೇ ಮೊದಲಾದ ಆಹ್ನಿಕ ಕರ್ಮಗಳನ್ನು ಜರುಗಿಸುವ ವಿಷಯದಲ್ಲಿ ಅವನು ಸಂಪೂರ್ಣ ಶ್ರದ್ಧೆಯುಳ್ಳವನಾಗಿದ್ದನು. ಆದುದರಿಂದ ಅವನು ತನ್ನ ದಿವಸದೊಳಗಿನ ಬಹುಭಾಗವನ್ನು ಮೇಲಿನಂತಹ ನಿತ್ಯನೈಮಿತ್ತಿಕ ಕರ್ಮಗಳಲ್ಲಿಯೇ ಕಳೆಯುತ್ತಿದ್ದನು. ಹೀಗಿದ್ದರೂ ಅವನು ರಾಜ್ಯಕಾರಭಾರದಲ್ಲಿಯೂ ಒಳ್ಳೇ ದಕ್ಷನಾಗಿದ್ದನು. ತನ್ನ ಕಾಲದಲ್ಲಿ ಅವನು ಬಹಳ ದಾನಧರ್ಮಗಳನ್ನು ಮಾಡಿದನು. ಅನೇಕ ದೇವಸ್ಥಾನಗಳಿಗೆ ಹೊಲಗಳನ್ನು ಉಂಬಳಿ ಹಾಕಿಕೊಟ್ಟನು. ಇವನಲ್ಲಿ ಇಂತಹ ಗುಣಗಳಿದ್ದುದರಿಂದ ಇವನ ಮೇಲೆ ಪ್ರಜೆಗಳ ವಿಶ್ವಾಸವು ಅತಿಶಯವಾಗಿತ್ತು; ದೇವರಂತೆ ಆತನ ವಿಷಯದಲ್ಲಿ ಅವರು ಭಕ್ತಿಯನ್ನು ತಳೆದಿದ್ದರು.

ಕಂಪನಿಸರಕಾರದ ಅಧಿಕಾರವು ನಮ್ಮ ದೇಶದಲ್ಲಿ ಸ್ಥಾಪಿತವಾದ ಬಳಿಕ ಭಾಸ್ಕರರಾಯನಂತಹ ಶೂರಸರದಾರರಿಗೆ ತಮ್ಮ ಪರಾಕ್ರಮವನ್ನು ತೋರಿಸುವದಕ್ಕೆ ಆಸ್ಪದವಿಲ್ಲದಂತಾಯಿತು. ಇದು ನರಗುಂದದ ಒಡೆಯನ ಮನಸ್ಸಿಗೆ ಬರಲಿಲ್ಲ.

ಮೊದಲನೆಯ ಪ್ರಕರಣದಲ್ಲಿ ಹೇಳಿದಂತೆ ಮುಂಡರಿಗಿಯ ಭೀಮರಾಯನು ಯುದ್ಧವಿದ್ಯೆಯಲ್ಲಿ ಒಳ್ಳೇ ನಿಪುಣನಾಗಿದ್ದನು. ಅಂತಹ ಶೂರರನ್ನು ಆ ಕಾಲದಲ್ಲಿ ಜನರು ಬಹಳ ಗೌರವಿಸುತ್ತಿದ್ದರು. ಆದರಲ್ಲಿಯೂ ಈ ಭೀಮರಾಯನ ಕೆಲಸ

ಗಳು ಹೊಗಳತಕ್ಕವಾಗಿದ್ದುವು. ಇವನು ಬೇಟೆಯಾಡುವ ಕಲೆಯಲ್ಲಂತೂ ಬಹಳೇ ನಿಷ್ಣಾತನಾಗಿದ್ದನು. ಇವನು ಬಳ್ಳಾರಿಯಲ್ಲಿ ಮಾಮಲೇದಾರನಾಗಿದ್ದಾಗ, ಇವನ ಕೆಲಸ ಮಾಡುವ ಪದ್ಧತಿಯನ್ನೂ, ಹುಲಿ ಹೊಡೆಯುವ ಚಾತುರ್ಯವನ್ನೂ, ಹಾರುವ ಹಕ್ಕಿಗಳನ್ನು ಗುರಿಯಿಟ್ಟು ಹೊಡೆಯುವ ಜಾಣತನವನ್ನೂ, ಇನ್ನೂ ಅನೇಕ ಪ್ರಕಾರದ ಶೂರತನದ ಕೆಲಸಗಳನ್ನೂ ನೋಡುವದಕ್ಕಾಗಿ ಇಂಗ್ಲಿಷ ಸರಕಾರದ ದೊಡ್ಡ ದೊಡ್ಡ ಅಧಿಕಾರಿಗಳು ಬುದ್ಧಿಪೂರ್ವಕವಾಗಿ ಬರುತ್ತಿದ್ದರು; ಮತ್ತು ಈತನ ಅದ್ಭುತವೂ ಆಶ್ಚರ್ಯಕರವೂ ಆದ ಹಸ್ತಲಾಘವವನ್ನು ನೋಡಿ ಬೆರಳು ಕಚ್ಚುತ್ತಿದ್ದರು. ಇಂತಹ ಶೂರಸರದಾರನು ಮೊದಲೇ ಬಂಡಾಯವನ್ನು ಹೂಡಿದ್ದನು.

ಲಾರ್ಡ ಡಾಲಹೌಸಿಯು ವ್ಹಾಯಿಸರಾಯನಿದ್ದಾಗ “ಹಿಂದುಸ್ಥಾನದೊಳಗಿನ ಸಂಸ್ಥಾನಿಕರು ತಮ್ಮ ಹೊಟ್ಟೆಯ ಮಕ್ಕಳಿಲ್ಲದಿದ್ದರೆ ದತ್ತಕಪುತ್ರರನ್ನು ಮಾಡಿಕೊಳ್ಳಕೂಡದೆಂ” ಬ ಒಂದು ಕಾಯದೆಯನ್ನು ಮಾಡಿದನು. ಈ ಕಾಯದೆಯಿಂದ ಇಲ್ಲಿರುವ ಎಲ್ಲ ಸಂಸ್ಥಾನಿಕರೂ ಜಹಾಗೀರದಾರರೂ ಮೊದಲಾದವರು ಬಹಳ ಕಳವಳಗೊಂಡರು. “ನಾವು ಸತ್ತಮೇಲೆ ಪರಲೋಕದಲ್ಲಿರುವ ನಮ್ಮನ್ನು ನಮ್ಮ ಮಕ್ಕಳು ತರ್ಪಣಾದಿಗಳಿಂದ ಸಂತೋಷಗೊಳಿಸಬೇಕೆಂಬುದು ನಮ್ಮ ಶಾಸ್ತ್ರವಿಧಿಯು; ಹೀಗಿದ್ದು ಸಾಯುವ ಕಾಲಕ್ಕೆ ನಮಗೆ ನೀರುಬಿಡುವವರು ಕೂಡ ಯಾರೂ ಇಲ್ಲದಂತಹ ಸ್ಥಿತಿಯು ಒದಗಿತಲ್ಲ! ಇದರ ಮೇಲಿಂದ ನಮ್ಮ ವಂಶವನ್ನು ಸಮೂಲವಾಗಿ ನಾಶಮಾಡಬೇಕೆಂಬುದೇ ಸರಕಾರದವರ ಮನಸ್ಸಿನಲ್ಲಿದ್ದಂತೆ ತೋರುತ್ತವೆ”. ಈ ವಿಧದ ವಿಚಾರಗಳು ನಿಪುತ್ರಿಕರಾದ ಸಂಸ್ಥಾನಿಕರು ಮೊದಲಾದವರ ಮನಸ್ಸಿನಲ್ಲಿ ಬಂದು ಅವರು ಬಹಳ ಉದಾಸೀನರಾದರು. ಇದೇ ತರದ ತಿಳಿವಳಿಕೆಯು ಭಾಸ್ಕರರಾಯನ ತಲೆಯಲ್ಲಿಯೂ ಸೇರಿತು. ಇವನಿಗೂ ಪುತ್ರಸಂತಾನವಿದ್ದಿಲ್ಲ. ಆದುದರಿಂದ ತನಗೆ ದತ್ತಕ ತೆಗೆದುಕೊಳ್ಳುವ ಅನುಮತಿಯು ದೊರೆಯಬೇಕೆಂದು ಇಂಗ್ಲಿಷಸರಕಾರಕ್ಕೆ ವಿಜ್ಞಪ್ತಿಯನ್ನು ಮಾಡಿಕೊಂಡನು. ಆದರೆ ಅನುಮತಿಯು ಸಿಕ್ಕಲಿಲ್ಲ. ಆದುದರಿಂದ ಅವನ ಮನಸ್ಸಿಗೆ ಅತ್ಯಂತ ವಿಷಾದವಾಯಿತು. “ನನ್ನ ಮರಣದ ಅನಂತರ ನಮ್ಮ ಹಿರಿಯರ ಕಾಲದಿಂದ ನಡೆದು ಬಂದ ದೇವತೆಗಳನ್ನು ಪೂಜಿಸುವವರೂ ಪಿತೃಗಳಿಗೆ ನಿವಾಪೋದಕಗಳನ್ನೂ ಹಾಕುವವರೂ ಯಾರು?” ಎಂಬ ವಿಚಾರವು ಅವನ ಮನಸ್ಸಿನಲ್ಲಿ ಬಂದು, ಅವನು ಆಗಾಗ್ಗೆ ದುಃಖಾಕ್ರಾಂತನಾಗಹತ್ತಿದ್ದನು. “ಈ ಪರಕೀಯರು ನಮ್ಮ ವಂಶವನ್ನು ನಿರ್ಮೂಲ ಮಾಡಬೇಕೆಂದು ನಿಶ್ಚಯಿಸಿದ್ದಾರೆ. ಇನ್ನು ನಮ್ಮ ವಂಶವು ನಾಶವಾಗುವದು. ನನ್ನ ತರುವಾಯ ನಮ್ಮ ಮನೆಯಲ್ಲಿ ನೈವೇದ್ಯ, ವೈಶ್ವದೇವ, ಮೊದಲಾ

ದವುಗಳ ಆಶೆಯು ಉಳಿಯಲಿಲ್ಲ." ಈ ಪ್ರಕಾರದ ಖೇದಜನಕ ವಿಚಾರಗಳಿಂದ ಭಾಸ್ಕರರಾಯನು ಅತ್ಯಂತ ವಿಹ್ವಲನಾದನು.

ನರಗುಂದದ ಒಡೆಯನು ಕೇವಲ ಸಂಸ್ಥಾನಿಕನಂತೆ ಎಣಿಸಲ್ಪಟ್ಟಿದ್ದಿಲ್ಲ. ಇಂಗ್ಲಿಷಸರಕಾರದಲ್ಲಿ ಒಬ್ಬಾನೊಬ್ಬ ದೊಡ್ಡ ಇನಾಮುದಾರನಂತೆ ಅವನಿಗೆ ಮಾನ ಮರ್ಯಾದೆಗಳು ಸಲ್ಲುತ್ತಿದ್ದುವು. ಆದರೂ ತನಗೆ ದತ್ತಕ ತೆಗೆದುಕೊಳ್ಳುವದಕ್ಕೆ ಅನುಜ್ಞೆಯು ದೊರೆಯದೆ ಇದ್ದುದು ಅನ್ಯಾಯ್ಯವೆಂದು ಅವನು ತಿಳಿದುಕೊಂಡನು. ಮತ್ತು 'ಶಂಠ್ಯಪ್ರತಿಶಾಠ್ಯಂ' ಎಂಬ ತತ್ವಾನುಸಾರವಾಗಿ ಅನ್ಯಾಯ್ಯವನ್ನು ಆಚರಿಸುವವರೊಡನೆ ಅನೀತಿಯಿಂದಲೇ ನಡೆಯಬೇಕೆಂದು ಅವನು ಸಂಕಲ್ಪ ಮಾಡಿದನು. ಸ್ವಭಾವಶೂರನಾದ ಭಾಸ್ಕರರಾಯನ ಮನದಲ್ಲಿ ಸ್ವಾಭಾವಿಕವಾಗಿಯೇ ಮೇಲಿನ ವಿಚಾರವು ತಲೆದೋರಿತು. ಆದುದರಿಂದ ತನಗೆ ದತ್ತಕ ತೆಗೆದುಕೊಳ್ಳಲು ಅನುಮತಿಯು ಸಿಗದೆ ಇದ್ದುದರ ಅನ್ಯಾಯ್ಯವನ್ನು ಮನಸ್ಸಿನಲ್ಲಿ ಹಿಡಿದುಕೊಂಡು ಇಂಗ್ಲಿಷರ ವಿರುದ್ಧವಾಗಿ ಬಂಡಾಯವನ್ನೆಬ್ಬಿಸಬೇಕೆಂದು ಆಲೋಚನೆ ಮಾಡಿದನು. ಆದುದರಿಂದ ಮೊದಲೇ ಬಂಡಾಯವನ್ನು ಆರಂಭಿಸಿದ ಮುಂಡರಿಗಿಯ ಭೀಮರಾಯನಿಗೆ ಇವನು ಸಹಾಯಕನಾದನು; ಮತ್ತು ತನ್ನ ನರಗುಂದದ ಕಿಲ್ಲೆಯಮೇಲೆ ಫಿರಂಗಿಗಳನ್ನು ಏರಿಸಿ, ಮದ್ದುಗುಂಡುಗಳನ್ನು ಸಿದ್ಧಬಡಿಸುವ ಕೆಲಸವನ್ನು ಆರಂಭಿಸಿದನು.

ಆಗ ನರಗುಂದದ ದುರ್ಗವು ಚೆನ್ನಾಗಿ ಭದ್ರವಾಗಿತ್ತು. ಯುದ್ಧಮಾಡುವವರಿಗೆ ಅದು ಬಹಳ ಅನುಕೂಲವಾಗಿತ್ತು. ಅದರ ಕಟ್ಟಡವು ಎಲ್ಲ ಬಗೆಯಿಂದಲೂ ಅಪ್ರತಿಮವಾಗಿದ್ದುದರಿಂದ, ಶತ್ರುಗಳ ಭಯವು ಅಲ್ಲಿರುವವರಿಗೆ ಸ್ವಲ್ಪಾದರೂ ಇದ್ದಿಲ್ಲ. ಬಹಳ ಹೇಳುವದೇನು? ಹನ್ನೆರಡು ವರ್ಷಗಳವರೆಗೆ ಶತ್ರುಗಳು ಪ್ರಯತ್ನಪೂರ್ವಕವಾಗಿ ಮುತ್ತಿಗೆಯನ್ನು ಹಾಕಿದರೂ, ಒಳಗಿರುವ ಜನರು ಅವರ ಕೈಗೆ ಸಿಗುವದು ದುರ್ಲಭವಾಗಿತ್ತು! ಅನ್ನನೀರುಗಳ ಸಂಗ್ರಹವು ಅಲ್ಲಿ ವಿಪುಲವಾಗಿತ್ತು. ಭಾಸ್ಕರರಾಯನು ಬಂಡಾಯದ ಸಿದ್ಧತೆಯನ್ನು ನಡೆಸಿದ್ದಾನೆಂಬ ಸುದ್ದಿಯು ಕೊಲ್ಹಾಪುರದ ಕಮೀಶನರನಾದ ಗ್ರ್ಯಾಂಟಜೇಕಬ್ ಸಾಹೇಬನಿಗೆ ಕ್ರಿ. ಶ. ೧೮೫೭ನೆಯ ವರ್ಷದಲ್ಲಿ ಗೊತ್ತಾಯಿತು. ಇದೇ ವರ್ಷದಲ್ಲಿ ದಕ್ಷಿಣಹಿಂದುಸ್ಥಾನದೊಳಗೆ ಬಂಡಾಯದ ಗದ್ದಲವು ಬಹಳ ಹರಡಿತ್ತು. ಅದನ್ನು ಗೊತ್ತುಹಚ್ಚಿ ನಿಲ್ಲಿಸಿಬಿಡುವದಕ್ಕಾಗಿ ಸರಕಾರದವರು ಗ್ರ್ಯಾಂಟಜೇಕಬ್ ಸಾಹೇಬನನ್ನು ಸ್ಪೆಶಲ್ ಕಮೀಶನರನನ್ನಾಗಿ ನಿಯಮಿಸಿದ್ದರು. ಇವನು ಉತ್ತರದಲ್ಲಿದ್ದ ಪಟವರ್ಧನ ಮೊದಲಾದವರ ಸೊಲ್ಲನ್ನು ಅಡಗಿಸುವದಕ್ಕಾಗಿ ಮ್ಯಾನ್‌ಸನ್ ಎಂಬವನನ್ನು ಕಳುಹಿಸಿದನು. ಈ ಮ್ಯಾನ್‌ಸನ್ ಸಾಹೇಬನು ಮೊದಲು

ಕೊಲ್ಹಾಪುರದ ಪೊಲಿಟಿಕಲ್ ಏಜಂಟನಾಗಿದ್ದನು. ಇವನು ಸಿಟ್ಟಿನ ಸ್ವಭಾವದವನೂ ಹಿಡಿದ ಹಟವನ್ನು ಬಿಡದೆ ಇರುವವನೂ ಆಗಿದ್ದನು. ಇವನ ಕಾರ್ಯಸಾಧಕತ್ವವೂ, ಮುತ್ಸದ್ದಿತನವೂ ಪ್ರಸಿದ್ಧವಾಗಿದ್ದವು. ಇವನ ಈ ಗುಣಗಳು ದಕ್ಷಿಣಹಿಂದುಸ್ಥಾನದ ಎಲ್ಲ ಸಂಸ್ಥಾನಿಕರ ನಿದರ್ಶನಕ್ಕೆ ಬಂದಿದ್ದುವು. ಆದುದರಿಂದ ಅವರೆಲ್ಲರೂ ಇವನನ್ನು ಸೇರುತ್ತಿದ್ದಿಲ್ಲ. ಇದಕ್ಕೆ ಇನ್ನೊಂದು ಕಾರಣವೂ ಇತ್ತು. ಇದಕ್ಕೂ ಮೊದಲು 'ಇನಾಮು ಕಮಿಶನ್' ಸ್ಥಾಪಿತವಾಗಿತ್ತು. ಈ ವ್ಯಾನ್‌ಸನ್ ಸಾಹೇಬನು ಅದರಲ್ಲಿ ಪ್ರಮುಖನಾಗಿದ್ದನು; ಮತ್ತು ದೇಶೀಯ ಸಂಸ್ಥಾನಿಕರ ಇನಾಮುಗಳನ್ನು ಮುಳುಗಿಸುವ ವಿಷಯದಲ್ಲಿ ಇವನು ಬಹಳ ಆತುರನಾಗಿದ್ದನು; ಮತ್ತು ದೇಶೀಯ ಸಂಸ್ಥಾನಿಕರ ಇನಾಮುಗಳನ್ನು ಮುಳುಗಿಸುವ ವಿಷಯದಲ್ಲಿ ಇವನು ಬಹಳ ಆತುರನಾಗಿದ್ದನು. ಆದುದರಿಂದ ಇವನು ಸ್ವಾಭಾವಿಕವಾಗಿಯೇ ಎಲ್ಲರಿಗೂ ಅಪ್ರಿಯನಾಗಿದ್ದನು.

ಭಾಸ್ಕರರಾಯನಿಗೆ ದತ್ತಕ ತೆಗೆದುಕೊಳ್ಳಲು ಅನುಮತಿಯು ದೊರೆಯಲಿಲ್ಲವೆಂಬ ಸಂಗತಿಯನ್ನು ಈ ಮೊದಲೇ ಹೇಳಿದೆಯಷ್ಟೇ? ಆದರೆ ಭಾಸ್ಕರರಾಯನು ಇಷ್ಟಕ್ಕೆ ಸುಮ್ಮನೆ ಕೂಡ್ರಲಿಲ್ಲ. ಅವನು ಈ ವಿಷಯದಲ್ಲಿ ತಾನು ಯಾವ ತರದಿಂದಲೂ ಅಪರಾಧಿಯಲ್ಲದ ಮೂಲಕ ತನಗೆ ಅನುಮತಿಯು ದೊರೆಯಬೇಕಾದುದು ನ್ಯಾಯ್ಯವಾಗಿದೆಯೆಂದು 'ಕೋರ್ಟ ಅಫ ಡಿರೆಕ್ಟರ'ರ ಕಡೆಗೆ ಮತ್ತೊಂದು ವಿಜ್ಞಾಪನೆಯನ್ನು ಮಾಡಿಕೊಂಡನು. ಈ ವಿಜ್ಞಾಪನೆಯಲ್ಲಿ ಅವನು ಇಲ್ಲಿ ತಮ್ಮ ಮೇಲೆ ಆಗುವ ದುರಾಗ್ರಹ ಮತ್ತು ಅನ್ಯಾಯ್ಯಗಳನ್ನು ಸಂಪೂರ್ಣವಾಗಿ ವಿವರಿಸಿದ್ದನು. ಅವನ ಈ ವಿಜ್ಞಪ್ತಿಯು 'ಕೋರ್ಟ' ನವರಿಗೆ ಸರಿದೋರಿತು. ಆದುದರಿಂದ ಅವರು ಅನುಮತಿಯನ್ನು ಕೊಡಬಹುದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ, ಈ ವಿಷಯವನ್ನು ಮತ್ತೊಮ್ಮೆ ವಿಚಾರಿಸಬೇಕೆಂದೂ ಬರೆದು ಭಾಸ್ಕರರಾಯನ ವಿಜ್ಞಪ್ತಿಯನ್ನು ಇನಾಮು ಕಮಿಶನ್‌ದವರ ಕಡೆಗೆ ಕಳಿಸಿದರು. ಆದರೆ ಅವರು ಈ ವಿಷಯದಲ್ಲಿ ಸಂಪೂರ್ಣ ವಿರುದ್ಧವಾದ ಅಭಿಪ್ರಾಯವನ್ನು ಕೊಟ್ಟದ್ದರಿಂದ "ದತ್ತಕ ತೆಗೆದುಕೊಳ್ಳುವದಕ್ಕೆ ಅಪ್ಪಣೆಯು ದೊರೆಯಲಾರದು" ಎಂಬರ್ಥದ ಕಟ್ಟಕಡೆಯ ಉತ್ತರವು ಭಾಸ್ಕರರಾಯನಿಗೆ ದೊರೆಯಿತು. ಈ ಕೆಲಸದಲ್ಲಿಯಾದರೂ ವ್ಯಾನ್‌ಸನ್ ಸಾಹೇಬನೇ ಮುಖ್ಯನಿರಬಹುದೆಂದು ತಿಳಿದು ಭಾಸ್ಕರರಾಯನು ಅವನ ವಿಷಯದಲ್ಲಿ ಮತ್ತಷ್ಟು ಕಲುಷಿತ ಮನಸ್ಕನಾದನು.

ವ್ಯಾನ್‌ಸನ್ ಸಾಹೇಬನು ಒಂದಿಲ್ಲೊಂದು ಆರೋಪಗಳನ್ನು ಮುಂದೆ ಮಾಡಿ, ಆದಷ್ಟುಮಟ್ಟಿಗೆ ಎಲ್ಲ ಸಂಸ್ಥಾನಿಕರ ಪ್ರಾಂತಗಳನ್ನು ಅಪಹರಿಸಬೇಕೆಂಬ ಆಲೋಚನೆಯಲ್ಲಿದ್ದಾನೆಂಬ ವರ್ತಮಾನವು ಕರ್ಣೋಪಕರ್ಣವಾಗಿ ಭಾಸ್ಕರರಾ

ಯನ ಕಿವಿಗೆ ಬಿತ್ತು. ಆಗಂತೂ ಶೂರನೂ ಉದಾರನೂ ಆದ ಅವನ ಮನಸ್ಸಿಗೆ ಸ್ವಲ್ಪವೂ ಸ್ವಾಸ್ಥ್ಯವಿಲ್ಲದೆ ಹೋಯಿತು. ಮ್ಯಾನ್‌ಶನ್ ಸಾಹೇಬನನ್ನು ಎಂದು ಕೊನೆಗಾಣಿಸುವೆನೋ ಎಂಬ ವಿಚಾರವನ್ನೇ ಮಾಡಹತ್ತಿದನು; ಮತ್ತು ಮನದಲ್ಲಿ ಆ ಪ್ರಕಾರದ ಘೋರವಾದ ಪ್ರತಿಜ್ಞೆಯನ್ನೇ ಮಾಡಿದ್ದನೋ ಏನೋ ಅನ್ನುವಹಾಗೆ ಮ್ಯಾನ್‌ಶನ್‌ನ ವಧೆಯಾಗುವವರೆಗೂ ಅವನು ಅಸ್ವಸ್ಥನಾಗಿಯೇ ಇದ್ದನಲ್ಲದೆ, ವಿಲಾಸೋಪಭೋಗಗಳ ಕಡೆಗೆ ಅವರ ಲಕ್ಷ್ಯವೇ ಇದ್ದಿಲ್ಲ.

ಮ್ಯಾನ್‌ಶನ್ ಸಾಹೇಬನ ಮರಣದ ತರುವಾಯ ಭಾಸ್ಕರರಾಯನು ತನ್ನ ಕೈಕೆಳಗಿನ ಜನರಿಗೆ ಸಾವಿರಾರು ರೂಪಾಯಿಗಳನ್ನು ಹಂಚಿಕೊಟ್ಟನು. ಇವನು ಹಿಂದೆ ಹೇಳಿದಂತೆ ಶೂರನೂ ಉದಾರನೂ ಆಗಿದ್ದುದಲ್ಲದೆ ದೂರದರ್ಶಿಯೂ ಆಗಿದ್ದನು. ಆಗಿನ ಕಾಲದ ಜನರೆಲ್ಲ ಭಾಸ್ಕರರಾಯನೆಂದರೆ ಒಂದು 'ಅತ್ಯುತ್ತಮವಾದ ರತ್ನ'ವೆಂದು ಅನ್ನುತ್ತಿದ್ದರು. ಆದರೆ ಈ ರತ್ನದ ಹೊಳಪು ಎಲ್ಲ ಕಡೆಗೂ ಹರಡುವಂತಹ ಪರಿಸ್ಥಿತಿಯನ್ನು ಕಾಲನು ಒದಗಿಸಿಕೊಡಲಿಲ್ಲ! ಇವನಲ್ಲಿದ್ದ ಇನ್ನೊಂದು ವಿಶೇಷಗುಣವೆಂದರೆ ಮನುಷ್ಯಪರೀಕ್ಷೆಯು. ಇತರರು ಆಡುವ ಸಾಮಾನ್ಯವಾದ ಮಾತುಗಳ ಮೇಲಿಂದ ಕೂಡ ಇವನು ಅವರ ಹೃದಯವನ್ನು ಕಂಡುಹಿಡಿಯುತ್ತಿದ್ದನು. ಈ ತರದ ಅಮೋಘವಾದ ಶಕ್ತಿಯು ಇವನಲ್ಲಿ ಇದ್ದುದರಿಂದ ಇವನ ಸಂಗಡ ವರ್ತಿಸುವ ಜನರು ಬಹಳೇ ಭಯಭಕ್ತಿಯಿಂದಿರುತ್ತಿದ್ದರು.

ಒಮ್ಮೆ ನರಗುಂದದ ಕಿಲ್ಲೆಯೊಳಗಿನ ಅಂತರಂಗವನ್ನೂ, ಪರಿಸ್ಥಿತಿಯನ್ನೂ ತಿಳಿದುಕೊಳ್ಳುವದಕ್ಕಾಗಿ ಶತ್ರುಗಳ ಕಡೆಯ ಒಬ್ಬ ಗುಪ್ತದೂತನು ಅಲ್ಲಿಗೆ ಬಂದಿದ್ದನಂತೆ. ಅವನು ಸಾಕ್ಷಾತ್ತಾಗಿ ಭಾಸ್ಕರರಾಯನನ್ನು ನೋಡುವದಕ್ಕೆ ಬಹಳ ಯತ್ನ ಮಾಡುತ್ತಿದ್ದನು. ಕೊನೆಯಲ್ಲಿ ಒಂದು ದಿವಸ ಅವನ ಇಷ್ಟವು ಕೈಗೂಡಿತು. ಅವನನ್ನು ನೋಡಿದ ಕೂಡಲೆ ಭಾಸ್ಕರರಾಯನು "ನೀವು ಎಲ್ಲಿ ಇರುತ್ತೀರಿ?" ಎಂದು ಪ್ರಶ್ನೆ ಮಾಡಿದನು. ಭಾಸ್ಕರರಾಯನ ಬಾಯಿಂದ ಹೊರಟ, ಮೇಲಿನ ಶಬ್ದಗಳಲ್ಲಿ ಕೇಳಿದೊಡನೆಯೇ ಆ ದೂತನ ಮೈಯಲ್ಲಿ ನಡುಗಹತ್ತಿತು; ಸರ್ವಾಂಗದಲ್ಲೆಲ್ಲ ಬೆವರು ಹುಟ್ಟಿ ಮೋರೆಯ ಮೇಲೆ ಸುರಿಯಹತ್ತಿತು. ಇಂತಹ ಸ್ಥಿತಿಯಲ್ಲಿ ಬಾಯಿಂದ ಶಬ್ದಗಳಾದರೂ ಹೇಗೆ ಹೊರಡಬೇಕು? ಅವನ ಈ ಸ್ಥಿತಿಯನ್ನು ಭಾಸ್ಕರರಾಯನು ಪ್ರತ್ಯಕ್ಷವಾಗಿ ನೋಡಿದನು. ಮತ್ತು ಆ ಗ್ರಹಸ್ಥನ ಬಾಯಿಂದ ಮಾತುಗಳು ಹೊರಡದೆ ಇದ್ದುದರಿಂದಂತೂ, ಮೊದಲೇ ಧೂರ್ತನಾದ ಭಾಸ್ಕರರಾಯನು ಅವನ ಕಾಪಟ್ಯವನ್ನು ಸಂಪೂರ್ಣವಾಗಿ ತರ್ಕಿಸಿದನು; ಮುಂದೆ ನಿಂತಿರುವ ಮನುಷ್ಯನು ಸಾಮಾನ್ಯನಾಗಿರದೆ ಶತ್ರುಗಳ ಕಪಟದೂತನಾಗಿದ್ದಾನೆಂಬ ವಿಷಯದಲ್ಲಿ ಅವನಿಗೆ ಸಂದೇಹವೇ ಉಳಿಯಲಿಲ್ಲ. ಆಗ ಅವನು ಕೂಡಲೆ "ಒಳ್ಳೆಯದು. ನೀವು ಗುಪ್ತರೀತಿಯಾಗಿ ನಮ್ಮ ಹುಳುಕುಗಳನ್ನು ತಿಳಿದುಕೊಂಡು ಹೋಗಲು ಇಲ್ಲಿಗೆ ಬಂದಿರುವಿರೆಂಬುದು ನನಗೆ ಗೊತ್ತಾಯಿತು. ನೀವು ಬಂದ ಕೆಲಸವು ಈಗ ಮುಗಿದಿದೆಯೋ ಇಲ್ಲವೋ ಹೇಳಿರಿ" ಎಂದನು. ಈ

ಪ್ರಕಾರದ ಮಾತುಗಳನ್ನಾಡುವಾಗ ಭಾಸ್ಕರರಾಯನ ಮುಖಚರ್ಯೆಯಲ್ಲಿ ಸ್ವಲ್ಪವೂ ಹೆಚ್ಚುಕಡಿಮೆಯಾಗಿದ್ದಿಲ್ಲ. ಮೊದಲಿನಂತೆ ಗಂಭೀರವಾಗಿಯೇ ಇತ್ತು; ಮೇಲಿನ ಮಾತುಗಳನ್ನು ಕೇಳಿದ ಕೂಡಲೆ ಆ ದೂತನು ಅಲ್ಲಿಯೇ ಸಾಷ್ಟಾಂಗವಾಗಿ ಭಾಸ್ಕರರಾಯನ ಪಾದಗಳ ಮೇಲೆ ಬಿದ್ದನು. ಮತ್ತು ಅತ್ಯಂತದೈನ್ಯದಿಂದ ದೊರೆಗಳೇ ನಾನು ಅಪರಾಧಿಯು. ದಯವಿಟ್ಟು ನನ್ನನ್ನು ಕ್ಷಮಿಸಬೇಕು. "ಎಂದು ಪರಿಪರಿಯಿಂದ ಬೇಡಿಕೊಳ್ಳಹತ್ತಿದನು. ಆಗ ಭಾಸ್ಕರರಾಯನು ಸ್ವಲ್ಪವೂ ಹೆದರುವ ಕಾರಣವಿಲ್ಲೆಂದು ಅವನಿಗೆ ಅಭಯವಚನವನ್ನಿತ್ತನು. ಮತ್ತು ಅವನ ಯೋಗ್ಯತೆಗೆ ತಕ್ಕಸತ್ಕಾರಗಳಿಂದ ಅವನನ್ನು ತನ್ನ ರಾಜ್ಯವನ್ನು ಬಿಡಿಸಿ ಹೊರಗೆ ಕಳುಹಿದನು. ಭಾಸ್ಕರರಾಯನ ಮುಖಮುದ್ರೆಯು ಉಗ್ರವಾಗಿತ್ತೆಂದು ಹಿಂದೆ ಹೇಳಿದೆಯಷ್ಟೆ? ಇವನು ರಾಜ್ಯಕಾರಭಾರಮಾಡುತ್ತಿದ್ದಾಗ ದೇಶದಲ್ಲಿ ಕೊಲೆ, ಸುಲಿಗೆ, ಕಳವು ಮೊದಲಾದ ಯಾವ ಉಪದ್ರಗಳ ಬಾಧೆಯೂ ತಮ್ಮದೇಶದಲ್ಲಿ ಇದ್ದಿಲ್ಲವೆಂದು ನರಗುಂದ ಸಂಸ್ಥಾನದ ಜನರು ಯಾವಾಗಲೂ ಹೇಳುತ್ತಿದ್ದರು.

ಭಾಸ್ಕರರಾಯನು ಮೇಲೆ ಹೇಳಿದಂತೆ ಸುಶೀಲನಾಗಿದ್ದರೂ, ಮ್ಯಾನ್‌ಶನ್ ಸಾಹೇಬನ ಸಂಗಡ ಮಾತ್ರ ಅವನು ಬಹಳೇ ಛಲದಿಂದ ವರ್ತಿಸುತ್ತಿದ್ದನು. ಇದರ ಕಾರಣಗಳನ್ನು ಈ ಮೊದಲೇ ಕೊಟ್ಟಿದ್ದೇವೆ. ಒಮ್ಮೆ ಅವರಿಬ್ಬರಿಗೂ ಭೆಟ್ಟಿಯಾದಾಗ ಸಾಹೇಬನು ರಾಯನನ್ನು ಕುರಿತು-" ಭಾಸ್ಕರರಾವ, ನೀವು ದೇವತಾರ್ಚನಗಳಿಗೂ, ಬ್ರಾಹ್ಮಣ ಭೋಜನಗಳಿಗೂ ಬಹಳ ದುಡ್ಡನ್ನು ವೆಚ್ಚ ಮಾಡುತ್ತೀರಿ. ಬೊಕ್ಕಸದೊಳಗಿನ ಹಣದ ಬಹುಭಾಗವು ಈ ಕಾರ್ಯಗಳಿಗೇ ಹೋಗುತ್ತದೆ. ಹೀಗಾಗಿ ನಿಮ್ಮಲ್ಲಿ ಶಿಲಕು ಬಹಳ ಕಡಿಮೆ ಇರುತ್ತದೆ. ಆದುದರಿಂದ ನಿಮ್ಮ ಪ್ರಾಂತದೊಳಗಿನ ಒಕ್ಕಲಿಗರೆಲ್ಲರೂ ಚಿಂತಾತುರರಾಗಿದ್ದಾರೆ!" ಎಂದನು. ಈ ಮಾತುಗಳನ್ನು ಕೇಳಿದ ಕೂಡಲೆ ಭಾಸ್ಕರರಾಯನು ಈ ಪ್ರಕಾರ ಉತ್ತರ ಕೊಟ್ಟನು—"ಒಕ್ಕಲಿಗರು ಉಪವಾಸ ಬಿದ್ದು ಸತ್ತರೂ ನೀವು ಅವರ ಕಡೆಗೆ ಲಕ್ಷ್ಯಗೊಡುವದಿಲ್ಲ; ಮತ್ತು ನಿಮ್ಮ ಜ್ಞಾತಿಗಳೊಡನೆ ವಿಲಾಸಗಳನ್ನು ಉಪಭೋಗಿಸುವದರಲ್ಲಿ ಪರ್ವತಪ್ರಾಯವಾದ ದುಡ್ಡನ್ನು ಸೂರೆಗೊಳ್ಳಲು ಹಿಂದೆ ಮುಂದೆ ನೋಡುವದಿಲ್ಲ. ಆದರೆ ನಾನು ಮಾತ್ರ ಹಾಗೇನೂ ಮಾಡುವದಿಲ್ಲ. ನಾನು ಮಾಡುತ್ತಿರುವ ವ್ಯಯವು ಒಕ್ಕಲಿಗರಿಗೆ ಬೇಕಾದುದೇ ಆಗಿದೆ; ಮತ್ತು ನಾನು ಎಷ್ಟೇ ಖರ್ಚು ಮಾಡಿದರೂ ಪರ್ಯಾಯದಿಂದ ಅದರ ಲಾಭವು ಒಕ್ಕಲಿಗರಿಗೆ ಮುಟ್ಟೇ ಮುಟ್ಟುತ್ತದೆ. ಆದರೆ ಒಂದು ಮಾತನ್ನು ಮಾತ್ರ ನಾನು ಒಡಂಬಡಬೇಕಾಗಿದೆ. ಅದೇನಂದರೆ ನಿಮ್ಮಂತಹರ ಆದರಾತಿಥ್ಯಕ್ಕಾಗಿ ನಾನು ಮಾಡುವ ವ್ಯಯವು ಮಾತ್ರ ನಿಷ್ಫಲವಾದುದು!" ಈ ಪ್ರಕಾರದ ನಿಷ್ಠುರ ವಚನಗಳನ್ನಾಲಿಸಿ ಸಾಹೇಬನು ಆಗ ಏನನ್ನೂ ಮಾತಾಡಲಿಲ್ಲ. ಈ ಪ್ರಸಂಗವು ಸಂಭವಿಸಿದಬಳಿಕ, ಸಾಹೇಬನಿಗೂ ರಾಯನಿಗೂ ಇಲ್ಲಿಯವರೆಗೆ ಪರಸ್ಪರವಾಗಿದ್ದ ದ್ವೇಷಾಗ್ನಿಯು ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ಒಳಗಿಂದೊಳಗೇ ಪ್ರಜ್ವಲಿತವಾಗಹತ್ತಿತು; ವೈಮನಸ್ಯವು ಬೆಳೆಯಿತು.

## ೩ನೆಯ ಪ್ರಕರಣ.

### ಮಾರುತಿಯ ಗುಡಿಯು.

ಹಿಂದೆ ಹೇಳಿದಂತೆ ಜೇಕಬ್ಬ ಸಾಹೇಬನ ಅಪ್ಪಣೆಯನ್ನನುಸರಿಸಿ ಮ್ಯಾನ್ಶನ್ ಸಾಹೇಬನು ಹೊರಟುಹೋದನು. ಇಷ್ಟರಲ್ಲಿ ಜನರಲ್ ಲೇಸ್ಟರ ಸಾಹೇಬನು ಜೇಕಬ್ಬಸಾಹೇಬನಿಗೆ ಒಂದು ತಂತಿಯ ಸುದ್ದಿಯನ್ನು ಕಳುಹಿದನು. " ನರಗುಂದದ ಒಡೆಯನು ಧಾರವಾಡದ ಕಡೆಗೆ ನಡೆದಿರುವ ಬಂಡಾಯಕ್ಕೆ ನಿಶ್ಚಯವಾಗಿಯೂ ನೆರವಾಗುತ್ತಿದ್ದಾನೆ. ನಮ್ಮ ಕಡೆಗೆ ಒಪ್ಪಿಸಿದ ತನ್ನ ಎಲ್ಲ ಶಸ್ತ್ರಗಳನ್ನೂ ಅವನ ಕಡೆಯವರು ನಮ್ಮವರ ಸಂಗಡ ಗುದಿಮುರಿಗೆಯನ್ನು ಹಾಕಿ ಅರ್ಧ ದಾರಿಯಿಂದಲೇ ತಿರುಗಿ ತೆಗೆದುಕೊಂಡು ಹೋದರು. ನಮ್ಮಲ್ಲಿಯ ಎಷ್ಟೋ ಜನರು ಗಾಯಹೊಂದಿದ್ದಾರೆ. ಈ ಅನರ್ಥಗಳನ್ನು ಉಂಟು ಮಾಡಿದವರಲ್ಲಿ ನರಗುಂದಕರನ ಪಕ್ಷದವರು ಬಹು ಜನರಿದ್ದಾರೆ " ಈ ಪ್ರಕಾರದ ವರ್ತಮಾನವು ಆ ತಂತಿಯಿಂದ ತಿಳಿಯಿತು. ಆಗ ಮ್ಯಾನ್ಶನ್ ಸಾಹೇಬನು ಕುರಂದವಾಡದಲ್ಲಿದ್ದನು. ಕೂಡಲೆ ಜೇಕಬ್ಬ ಸಾಹೇಬನು ಈ ಸಂಗತಿಯನ್ನು ಮ್ಯಾನ್ಶನ್ ಸಾಹೇಬನಿಗೆ ತಿಳಿಸಿ, ತಾನು ನರಗುಂದದ ಕಡೆಗೆ ಸೈನ್ಯವನ್ನು ಕಳಿಸುವ ವ್ಯವಸ್ಥೆಯನ್ನು ಮಾಡತೊಡಗಿದನು.

ಈ ಸುದ್ದಿಯು ಮ್ಯಾನ್ಶನ್ ಸಾಹೇಬನಿಗೆ ತಿಳಿದೊಡನೆಯೇ ಅವನು ಹತ್ತುಹನ್ನೆರಡು ಕುದುರೆಯ ಸವಾರರನ್ನೊಡಗೊಂಡು ರಾಮದುರ್ಗಕ್ಕೆ ಬಂದನು; ಮತ್ತು ಅಲ್ಲಿಂದ ಜೇಕಬ್ಬ ಸಾಹೇಬನಿಗೆ ಹೀಗೆ ಒಂದು ಪತ್ರವನ್ನು ಬರೆದನು. " ನರಗುಂದದ ಭಾಸ್ಕರರಾಯನು ನಮ್ಮ ವಿರುದ್ಧವಾಗಿ ಯುದ್ಧದ ಸಿದ್ಧತೆಯನ್ನು ಪೂರ್ಣವಾಗಿ ಮಾಡಿದ್ದಾನೆ. ನಮ್ಮ (ಇಂಗ್ಲಿಷರ) ಒಬ್ಬಾನೊಬ್ಬ ವ್ಯಕ್ತಿಯು ಅವನ ಕಣ್ಣಿಗೆ ಬಿದ್ದರೆ ಸಾಕು; ಅದನ್ನು ಆಗಲೇ ಕಡಿದು ತುಂಡು ಮಾಡುವ ಹವಣಿಕೆಯಲ್ಲಿ ಅವನಿದ್ದಾನೆ. ಈಗ ಅವನು ಯುದ್ಧಕ್ಕೆ ಯಾವದೊಂದು ನೆವವನ್ನು ಮಾತ್ರ ಹುಡುಕುತ್ತಿದ್ದಾನೆ. ಮೇಲಾಗಿ ಅವನ ಕಿಲ್ಲೆಯು ಯುದ್ಧ ಮಾಡುವದಕ್ಕೆ ಬಹಳೇ ಅನುಕೂಲತೆಯುಳ್ಳದ್ದಾಗಿದೆ. ಅದರಲ್ಲಿ ಇದ್ದುಕೊಂಡು ಯುದ್ಧ ಮಾಡುವವರಿಗೆ ಯಾವ ತರದ ಹೆದರಿಕೆಯೂ ಇಲ್ಲ; ಅದು ಅಷ್ಟುಭದ್ರವಾಗಿದೆ. ಇಂತಹ ನೊಡನೆ ನಾವು ಯುದ್ಧ ಮಾಡಬೇಕಾದರೆ, ನಮ್ಮ ಸಂಗಡ ಬಲವತ್ತರವಾದ

ಸೈನ್ಯವಿರಲಿಕ್ಕೇ ಬೇಕು. ಭಾಸ್ಕರರಾಯನು ರಾಪದುರ್ಗದ ಸಂಸ್ಥಾನಿಕನಿಗೆ ಅನೇಕ ಪತ್ರಗಳನ್ನು ಬರೆದಿದ್ದಾನೆ. ಅದರಲ್ಲಿ ನಮ್ಮ (ಇಂಗ್ಲಿಷರ) ವಿರುದ್ಧವಾಗಿ ಬಂಡಾಯ ಮಾಡುವದಕ್ಕೆ ತನಗೆ ನೆರವಾಗಬೇಕೆಂದು ಕೇಳಿಕೊಂಡಿದ್ದಾನೆ. ಆ ಪತ್ರಗಳ ಸಾರಾಂಶವನ್ನು ಇಲ್ಲಿ ಕೊಡುತ್ತೇನೆ.

"ಈ ಪರದೇಶೀಯರು ಕಾಲಕ್ರಾಂತರದಿಂದ ಇಲ್ಲಿಗೆ ಬಂದು, ನಮ್ಮ ಮೇಲೆ ಅಧಿಕಾರವನ್ನು ನಡೆಯಿಸಹತ್ತಿದ್ದಾರೆ. ಇಷ್ಟೇ ಅಲ್ಲ; ಮೊದಲಿನಿಂದ ನಡೆದು ಬಂದಿರುವ ನಮ್ಮ ಹಕ್ಕುಗಳನ್ನು ಮುಳುಗಿಸುವದಕ್ಕೂ, ನಮ್ಮನ್ನು ನಿರ್ಮೂಲರನ್ನಾಗಿ ಮಾಡುವದಕ್ಕೂ ಹವಣಿಸಹತ್ತಿದ್ದಾರೆ. ಅವರು ನಮ್ಮ ಸಂಗಡ ಮನಸ್ಸಿಗೆ ಬಂದಂತೆ ವರ್ತನ ಮಾಡಿ ನಮ್ಮ ಅಪಮಾನವನ್ನು ಮಾಡಿದರೂ, ನಾವು ಮಾತ್ರ ಮೂಕರಂತೆಯೂ ನಾಚಿಕೆಗೇಡಿಗಳ ಹಾಗೆಯೂ ಬಾಯಿ ಮುಚ್ಚಿಕೊಂಡು ಸುಮ್ಮನಿರುವದು ಉಚಿತವಲ್ಲ; ನಿಜವಾದ ಶೂರನೂ ದೇಶಾಭಿಮಾನಿಯೂ ಇದನ್ನು ಎಂದೂ ಸಹಿಸಲಿಕ್ಕಿಲ್ಲ. ಆದುದರಿಂದ ನಾವು ಅವಶ್ಯವಾಗಿ ಇವರ ಮುಯ್ಯವನ್ನು ತೀರಿಸಲಿಕ್ಕೇ ಬೇಕು. ಎರಡನೆಯವರ ಕೈಯಲ್ಲಿ ಸಿಕ್ಕ ನಮ್ಮ ದೇಶವನ್ನು ಅವರಿಂದ ಸೆಳೆದುಕೊಂಡು, ನಮ್ಮ ನಾಡಿನ ಒಡಹುಟ್ಟಿದವರ ಪೀಡೆಯನ್ನು ಪರಿಹರಿಸುವದು ನಮ್ಮ ಆದ್ಯ ಕರ್ತವ್ಯವು. ಈ ಕೆಲಸದಲ್ಲಿ ನಾವು ಧಾರಾತೀರ್ಥದ ಸ್ನಾನವನ್ನು ಅನುಭವಿಸುವ ಪ್ರಸಂಗವು ಬಂದರೂ ಅದು ನಮಗೆ ಶ್ರೇಯಸ್ಕರವೇ! ಹೇಡಿಗಳಂತೆ ಸುಮ್ಮನೆ ಕೈಕಟ್ಟಿಕೊಂಡು ನಾಚಿಕೆಯನ್ನು ಬಿಟ್ಟು ಕುಳಿತುಕೊಳ್ಳುವದು ಸರಿಯಲ್ಲ. ಆದುದರಿಂದ ಈ ಎಲ್ಲ ಮಾತುಗಳ ವಿಚಾರವನ್ನು ಮಾಡಿರಿ; ಮತ್ತು ನಿಮ್ಮ ಮನಸ್ಸಿದ್ದರೆ ಯುದ್ಧದ ಯೋಗ್ಯ ಸಿದ್ಧತೆಯನ್ನು ಮಾಡಿಕೊಂಡು ನಮ್ಮನ್ನು ಬಂದು ಕೂಡಿರಿ. ಈ ಯುದ್ಧದಲ್ಲಿ ಅನೇಕ ಸಂಸ್ಥಾನಿಕರು ನಮಗೆ ನೆರವಾಗಲು ಸಿದ್ಧರಿದ್ದಾರೆ. ಅವರು ಒಂದೆರಡು ದಿವಸಗಳಲ್ಲಿಯೇ ತಮ್ಮ ದಂಡುಗಳನ್ನು ಕೂಡಿಕೊಂಡು ಬರತಕ್ಕವರಿದ್ದಾರೆ. ಆದುದರಿಂದ ನಮ್ಮ ಮನೋಭೀಷ್ಟವು ಕೈಗೂಡುವದರಲ್ಲಿ ಸಂಶಯವೇ ಇಲ್ಲ. ನೀವು ಯಾವ ದಿವಸ ನಮ್ಮನ್ನು ಬಂದು ಕೂಡುವಿರೆಂಬುದನ್ನು ಕೂಡಲೆ ಉತ್ತರ ಬರೆದು ತಿಳಿಸಬೇಕು. ನಿಯಮಿತ ಅವಧಿಗೆ ಎಲ್ಲ ಸಂಸ್ಥಾನಿಕರೂ ಬಂದೇ ಬರುವರು. ಆದರೂ ಬರುವಾಗ ಪ್ರತಿಯೊಬ್ಬರು ತಮ್ಮ ತಮ್ಮ ಸ್ವಂತದ ಸಂರಕ್ಷಣೆಯನ್ನೂ ಚೆನ್ನಾಗಿ ಸಿದ್ಧಪಡಿಸಿಟ್ಟಿರಬೇಕು. ಯಾಕಂದರೆ ಶತ್ರುಗಳು ಯಾವಾಗ, ಹೇಗೆ, ಎಲ್ಲಿ ಬಂದು ಯುದ್ಧವನ್ನು ಹೂಡುವರೆಂಬ ನಿಯಮವು ಎಳ್ಳಷ್ಟೂ ಇಲ್ಲ. ಆದುದರಿಂದ ನಿಮಗೆ ಎಲ್ಲವನ್ನೂ ಮೊದಲೇ ತಿಳಿಸಿದ್ದೇವೆ. ನಿಮಗೆ ನಿಮ್ಮ ಕುಲ, ಧರ್ಮ ಹಾಗು ದೇಶ ಇವುಗಳ ಅಭಿಮಾನವಿದ್ದರೆ ಮತ್ತು ಪರಕೀಯರ ದಾಸ್ಯದೊಳಗಿಂದ ಮುಕ್ತರಾಗಬೇಕೆಂಬ ಅಪೇಕ್ಷೆಯಿದ್ದರೆ, ನೀವು ನಿಶ್ಚಯವಾಗಿಯೂ ಬಂದು ನಮಗೆ ನೆರವಾಗುವಿರೆಂದು ಪೂರ್ಣ ಆಶೆಯಿದೆ."

ಮ್ಯಾನ್‌ಶನ್ ಸಾಹೇಬನು ಮೇಲಿನಂತೆ ಜೇಕಬ್ಬ ಸಾಹೇಬನಿಗೆ ಪತ್ರ ಬರೆದು ಆದರ ಕೊನೆಯಲ್ಲಿ ಉಲ್ಲೇಖಿಸಿದುದೇನಂದರೆ:—"ನಾವು ನರಗುಂದದ ಸಂಸ್ಥಾನದಲ್ಲಿಯ ಕೆಲವು ಮುಖ್ಯರಾದ ಸೇವಕರನ್ನು ನಮ್ಮ ಕಡೆಗೆ ಒಲಿಸಿಕೊಂಡಿದ್ದೇವೆ. ಅವರಲ್ಲಿ ನರಗುಂದಕರನ ಕಾರಭಾರಿಯಾದ ಕೃಷ್ಣಾಜಿಪಂತ ಜೋಶಿ ಎಂಬವನು ಒಬ್ಬನು; ಮತ್ತು ಬನ್ಯಾಬಾಪು ಎಂಬವನು ಮತ್ತೊಬ್ಬನು. ಅವರಿಗೂ ನಮಗೂ ಗುಪ್ತವಾದ ಮಾತುಕತೆಗಳಾಗಿದ್ದು, ಅವರು ಭಾಸ್ಕರರಾಯನ ಸಿದ್ಧತೆಯನ್ನೆಲ್ಲ ಹಾಳು ಮಾಡುವ ಅಭಿವಚನವನ್ನು ಕೊಟ್ಟಿದ್ದಾರೆ. ಇಷ್ಟೇ ಅಲ್ಲ; ಅವನು ಸಿದ್ಧ ಮಾಡಿಟ್ಟ ಮದ್ದಿನಲ್ಲಿ ಸಗಣಿಯನ್ನು ಕಲಿಸಿ ಅದನ್ನು ನಿರುಪಯೋಗಿಯನ್ನಾಗಿ ಮಾಡಿದ್ದೇವೆಂದು ಬಹಳೇ ನಂಬುಗೆಯಿಂದ ಹೇಳಿದ್ದಾರೆ; ಮತ್ತು ಆ ಕೃಷ್ಣಾಜೀಪಂತನು ತನ್ನ ಒಂದು ಪತ್ರದಲ್ಲಿ ಹೀಗೆ ಬರೆದಿದ್ದಾನೆ. 'ನಮ್ಮ ಒಡೆಯನು ಯುದ್ಧದ ಸಿದ್ಧತೆಯಲ್ಲಿ ಮಗ್ನನಾಗಿರುವದರಿಂದ ಅವನಿಗೂ ನನಗೂ ಎಂಟೆಂಟು ದಿವಸಗಳಾದರೂ ಭೆಟ್ಟಿಯಾಗುವದಿಲ್ಲ. ನನ್ನನ್ನು ಅವನು ಈ ಕಾಲದಲ್ಲಿ ನೋಡಿದ್ದರೆ ಆ ಕ್ಷಣವೇ ನನ್ನ ತಪ್ಪನ್ನು ಕಂಡು ಹಿಡಿದು, ಇಷ್ಟರಲ್ಲಿಯೇ ಗುಂಡಿನ ಬಾಯಿಗೆ ಕೊಟ್ಟು ಬಿಡುತ್ತಿದ್ದನು. ಆದುದರಿಂದ ನೀವು ಸದ್ಯಕ್ಕೆ ಹೀಗೆ ಮಾಡಿರಿ. ಎಲ್ಲ ಸಂಸ್ಥಾನಿಕರೂ ಮುಂದಿನ ಗುರುವಾರ ದಿವಸ ಒಂದೇ ಕಡೆಯಲ್ಲಿ ಸೇರಬೇಕೆಂದು ಗೊತ್ತಾಗಿದೆ. ಅದಕ್ಕಿಂತ ಮೊದಲೇ ನೀವು ನಿಮ್ಮ ದಂಡಿನೊಡನೆ ಬಂದು ನರಗುಂದವನ್ನು ಮುತ್ತಿರಿ. ನೀವು ಬಂದ ಬಳಿಕ ನಾನು ಬೇರೊಂದು ದಾರಿಯಿಂದ ಊರಹೊರಗೆ ಬಂದು ನಿಮ್ಮನ್ನು ಕೂಡಿಕೊಳ್ಳುವೆನು."

ಮ್ಯಾನ್‌ಶನ್ ಸಾಹೇಬನು ತನ್ನ ಪತ್ರದಲ್ಲಿ ಇದರ ಮುಂದೆ ಇನ್ನೂ ಒಂದು ವಿಷಯವನ್ನು ಬರೆದಿದ್ದನು. ಅದೇನೆಂದರೆ:—"ಇತರ ಸಂಸ್ಥಾನಿಕರಿಂದ ಬಂದಂತಹ ಪತ್ರಗಳನ್ನು ನಮಗೆ ದೊರಕಿಸಿಕೊಡೆಂದು ಕೃಷ್ಣಾಜಿ ಪಂತನನ್ನು ನಾವು ಬಹು ಪರಿಯಿಂದ ಕೇಳಿದೆವು. ಆದರೆ ಅವನು ಹೇಳಿದುದೇನಂದರೆ:—'ಇತರ ಸಂಸ್ಥಾನಿಕರಿಂದ ಬರುವ ಖಾಸಗೀ ಪತ್ರಗಳನ್ನು ಬಾಬಾಸಾಹೇಬನು ತನ್ನ ಹತ್ತರದಲ್ಲಿಯೇ ಇಟ್ಟುಕೊಳ್ಳುತ್ತಾನೆ ಆದುದರಿಂದ ಅವು ಎರಡನೆಯವರ ಕೈಗೆ ಸಿಕ್ಕುವದೇ ಇಲ್ಲ.' ಇರಲಿ ನಾವಂತೂ ಅವರ ಸಿದ್ಧತೆಯಾಗುವದರೊಳಗಾಗಿಯೇ ಅಲ್ಲಿಗೆ ಹೋಗಿ ಅಭಿಯೋಗವನ್ನು ಮಾಡಲಿಕ್ಕೆಬೇಕು. ಈ ಬಂಡಾಯದಲ್ಲಿ ರಾಮದುರ್ಗಕರನು ಸೇರಿರುವದಿಲ್ಲ. ಅವನು ಭಾಸ್ಕರರಾಯನ ಪತ್ರಕ್ಕೆ ಉತ್ತರವನ್ನೇ ಬರೆದಿಲ್ಲ. ಆದುದರಿಂದ ತನ್ನ ಮೇಲೆ ಭಾಸ್ಕರರಾಯನು ಸಿಟ್ಟಾಗಿರಬಹುದೆಂದು ಅವನು ಹೆದರಿದ್ದಾನೆ. ರಾಮದುರ್ಗಕರನು ನನಗೆ ಆಗ್ರಹಪೂರ್ವಕವಾಗಿ ಹೇಳಿದುದೇನೆಂದರೆ:—ನೀವು ಒಬ್ಬರೇ ನರಗುಂದಕ್ಕೆ ಹೋಗಬೇಡಿರಿ; ಹಾಗೆ ಹೋದರೆ ನಿಮ್ಮ ಜೀವದಸುತ್ತ ಪ್ರಸಂಗವು ಬರಬಹುದು. ಹೀಗೆ ಅವನು ಅನೇಕ ವಿಧಗಳಿಂದ ನನಗೆ ಹೇಳಿದ ಮೂಲಕ ನಾನು ಇಲ್ಲಿಯೇ ತಳವೂರಿದ್ದೇನೆ; ಮತ್ತು

ನೀವು ದಂಡನ್ನು ಕಳುಹಿಕೊಡುವವರೆಗೆ ಇಲ್ಲಿಯೇ ಇರುವೆನು. ಈಗ ಸದ್ಯಕ್ಕೆ ನರಗುಂದ, ಸಾಂಗಲಿ ಮತ್ತು ಮಿರಜ ಈ ಮೂರು ಕಡೆಗೆ ಗೌರಸೈನ್ಯವೇ ಮೊದಲು ಹೋಗುವದು ಅತ್ಯವಶ್ಯವಾಗಿದೆ, ಆದುದರಿಂದ ತಪ್ಪದೆ ಅದನ್ನು ಕಳುಹಬೇಕು. ”

ಇಷ್ಟಾದ ಬಳಿಕ ಮ್ಯಾನ್‌ಶನ್ ಸಾಹೇಬನು ನರಗುಂದಕ್ಕೆ ಬರತಕ್ಕ ಸೈನ್ಯದ ದಾರಿಯನ್ನು ನೋಡಹತ್ತಿದ್ದನು; ಮತ್ತು ದಾರಿಯಲ್ಲಿಯೇ ಹೋಗಿ ಆ ಸೈನ್ಯವನ್ನು ಕೂಡಬೇಕೆಂದು ಹೊರಟನು. ನರಗುಂದಕರನ ಗುಪ್ತದೂತರು ಎಲ್ಲ ಕಡೆಯಲ್ಲಿಯೂ ಆಗ ಸಂಚರಿಸುತ್ತಿದ್ದರು. ಅವರು ಮ್ಯಾನ್‌ಶನ್ ಸಾಹೇಬನನ್ನು ನೋಡಿದರು. ಆದುದರಿಂದ ಮ್ಯಾನ್‌ಶನ್ ಸಾಹೇಬನು ಸುರೇಬಾನದವರೆಗೆ ಬಂದ ವರ್ತಮಾನವು ಭಾಸ್ಕರರಾಯನಿಗೆ ಕೂಡಲೇ ತಿಳಿಯಿತು. ಇದನ್ನು ಕೇಳಿದ ಕೂಡಲೇ ಭಾಸ್ಕರರಾಯನು ಅವರು ತನ್ನನ್ನು ಹಿಡಿಯುವುದಕ್ಕಾಗಿಯೇ ಬರುತ್ತಿರಬಹುದೆಂದು ಭಾವಿಸಿದನು; ಮತ್ತು ಎಂಟ ನೂರು ಸೈನಿಕರನ್ನು ತನ್ನೊಡನೆ ತೆಗೆದುಕೊಂಡು, ಆ ದಿವಸ ಇರುಳಿನಲ್ಲಿಯೇ ಮ್ಯಾನ್‌ಶನ್ ಸಾಹೇಬನನ್ನು ಹುಡುಕುವದಕ್ಕಾಗಿ ಹೊರಟನು. ಆಗಿನ ಪ್ರಸಂಗವು ಬಹಳೇ ಅದ್ಭುತವೂ ಭಯಪ್ರದವೂ ಆಗಿತ್ತು. ಭಾರತೀಯುದ್ಧದಲ್ಲಿ ಒಮ್ಮೆ ದುರ್ಯೋಧನನು ಜಲಸ್ತಂಭನವಿದ್ಯೆಯಿಂದ ಸರೋವರದ ನೀರನ್ನು ಸ್ತಂಭಿತವಾಗಿ ಮಾಡಿ ಒಳಹೊಕ್ಕು ಕುಳಿತಿದ್ದನು. ಆಗ ಭೀಮಸೇನನು ಅತ್ಯಂತ ಉತ್ಸುಕನಾಗಿ ಆತನ ಶೋಧವನ್ನು ಮಾಡುತ್ತಿದ್ದನು. ಭಾಸ್ಕರರಾಯನಾದರೂ ಸದ್ಯಕ್ಕೆ ಆ ಭೀಮಸೇನನ ಹಾಗೆಯೇ ಕಾಣುತ್ತಿದ್ದನು. ಶೂರನಾದ ಆ ಭಾಸ್ಕರರಾಯನು ದಾರಿಯಲ್ಲಿ ಕಂಡವರನ್ನೆಲ್ಲ ಕುರಿತು ಆ ಮ್ಯಾನ್‌ಶನ್‌ನು ಎಲ್ಲಿ ಇದ್ದಾನೆ? ನೀವು ನೋಡಿರುವಿರೇನು ? ಗೊತ್ತಿದ್ದವರು ಹೇಳಿರಿ ಯಾರು ನನಗೆ ಆ ಮ್ಯಾನ್‌ಶನ್‌ನನ್ನು ತೋರುವಿರೋ ಅವರಿಗೆ ಒಂದು ಸಾವಿರ ರೂಪಾಯಿ ಉತ್ಪನ್ನಬರುವ ಊರನ್ನೇ ಇನಾಮಾಗಿ ಕೊಡುತ್ತೇನೆ” ಹೀಗೆ ಮಾತಾಡುತ್ತಿದ್ದನು. ಹೀಗೆ ಪ್ರಶ್ನೆಗಳನ್ನು ಮಾಡುತ್ತಾ ಗಜಗಮನದಿಂದ ಹೋಗುತ್ತಿದ್ದ ಆ ಭಾಸ್ಕರರಾಯನು ಅಂದು ಸಾಕ್ಷಾತ್ ಕೃತಾಂತನಂತೆಯೇ ಕಾಣುತ್ತಿದ್ದನು. ಅಂದು ಅವನ ಮುಖದ ಮೇಲೆ ಅಪ್ರತಿಮವಾದ ವೀರಶ್ರೀಯ ಕಳೆಯು ಝುಳಪಿಸುತ್ತಿತ್ತು. ಹೀಗೆ ತನ್ನ ಮುತ್ಸದ್ದಿಗಳೊಡನೆ ಅವನು ಮ್ಯಾನ್‌ಶನ್ ಸಾಹೇಬನ ಶೋಧಮಾಡುತ್ತ ಮಾಡುತ್ತ ಸುರೇಬಾನದವರೆಗೆ ಬಂದನು. ಈ ಸುದ್ದಿಯನ್ನು ಕೇಳಿದ ಕೂಡಲೆ ಮ್ಯಾನ್‌ಶನ್ ಸಾಹೇಬನು ತನ್ನ ಜೀವಕ್ಕಾಗಿ ಹೆದರಿದನು. ‘ ಅಲ್ಪಸೈನ್ಯದೊಡನೆ ನಾನು ಈ ನರಗುಂದಕರನ ಸೀಮೆಯಲ್ಲಿ ಬಂದದ್ದು ಅವಿಚಾರದ ಕೆಲಸವಾಯಿತು; ನಾನು ವಂಚಿತನಾದೆನು. ಇನ್ನೇನು ಮಾಡಲಿ? ’ ಎಂ

ದು ಅವನು ಜೀವರಕ್ಷಣದ ಉಪಾಯವನ್ನು ಹುಡುಕಹತ್ತಿದನು. ಇವರು ಇಳಿದು ಕೊಂಡು ಸ್ಥಳವು ಸ್ವಲ್ಪವೂ ಸುರಕ್ಷಿತವಾಗಿದ್ದಿಲ್ಲ; ಒಂದು ಮುರುಕ ಧರ್ಮಶಾಲೆಯೂ ಚಿಕ್ಕದೊಂದು ಮಾರುತಿಯ ಗುಡಿಯೂ ಅವರ ಆಗಿನ ಆಶ್ರಯ ಸ್ಥಾನವಾಗಿದ್ದುವು. ಅದರಿಂದಂತೂ ಮ್ಯಾನ್‌ಶನ್ ಸಾಹೇಬನು ಬಹಳೇ ಹೆದರಿದನು. ಇಂದು ನಾನು ಹೇಗೆ ಬದುಕುವೆನೋ? ಎಂದು ಅವನು ಬಹಳ ಚಿಂತಾಕ್ರಾಂತನಾದನು.

ಹಿಂದೆ ಹೇಳಿದಂತೆ ಮ್ಯಾನ್‌ಶನ್ ಸಾಹೇಬನನ್ನು ಶೋಧಿಸುತ್ತಾ ಬರುತ್ತಿದ್ದ ಭಾಸ್ಕರರಾಯನೂ ಅವನ ಸಂಗಡಿಗರೂ, ಮ್ಯಾನ್‌ಶನ್ ಸಾಹೇಬನು ಇಳಿದು ಕೊಂಡಿದ್ದ ಸ್ಥಳಕ್ಕೇ ಬಂದರು. ಅವರು ಬಂದ ವರ್ತಮಾನವು ತಿಳಿದೊಡನೆಯೇ ಮ್ಯಾನ್‌ಶನ್ ಸಾಹೇಬನ ಹೌಹಾರಿಹೋಯಿತು. ಅವನು ತನ್ನ ಹತ್ತಿರದ ಪಿಸ್ತೂಲಿನಲ್ಲಿ ಗುಂಡುಗಳನ್ನು ತುಂಬಿದನು; ಮತ್ತು ಸ್ವಲ್ಪ ಮದ್ದು ಗುಂಡುಗಳ ಸಾಧನವನ್ನು ಸಂಗಡ ತೆಗೆದುಕೊಂಡು ಸಮೀಪದಲ್ಲಿದ್ದ ಮಾರುತಿಯ ದೇವಾಲಯವನ್ನು ಹೊಕ್ಕನು; ಮತ್ತು ಒಳಗಿಂದ ಬಾಗಿಲವನ್ನು ಇಕ್ಕಿಕೊಂಡು ಗುಡಿಯ ಒಂದು ಮೂಲೆಯಲ್ಲಿ ಹೋಗಿ ಅಡಗಿ ಕುಳಿತುಕೊಂಡನು. ಇಷ್ಟರಲ್ಲಿ ನರಗುಂದಕರನ ಅನುಯಾಯಿಗಳು ಅಲ್ಲಿಗೆ ಬಂದು 'ಮ್ಯಾನ್‌ಶನ್ ಸಾಹೇಬನು ಎಲ್ಲಿ ಇದ್ದಾನೆ?' ಎಂದು ಕೇಳ ಹತ್ತಿದರು. ಆದರೆ ಅವರೊಳಗಿನ ಒಬ್ಬನೂ ಅವರಿಗೆ ಉತ್ತರವನ್ನು ಕೊಡಲಿಲ್ಲ. ಹೇಳದೆ ಇದ್ದವರನ್ನೆಲ್ಲ ಭಾಸ್ಕರರಾಯನ ದಂಡಾಳುಗಳು ಕೊಂದು ಹಾಕಹತ್ತಿದರು. ಆದರೂ ಯಾರೂ ನಿಜವಾದ ವೃತ್ತಾಂತವನ್ನು ಹೇಳಲಿಲ್ಲ. ಕೊನೆಗೆ ಯಾವನೋ ಒಬ್ಬನು ಒದ್ದಾಡುತ್ತ ಒಂದು ಸ್ಥಳವನ್ನು ಹೇಳಿದನು. ಆದರೆ ಅದೂ ನಿಜವಾಗಿದ್ದಿಲ್ಲ.

ಶತ್ರುವು ತನ್ನ ರಾಜ್ಯದಲ್ಲಿ ಬಂದು ಸಂಪೂರ್ಣವಾಗಿ ತನ್ನ ಜನರ ಕೈಯಲ್ಲಿಯೇ ಸಿಕ್ಕಿದ್ದರೂ 'ಅವನು ಎಲ್ಲಿದ್ದಾನೆಂ' ಬುದು ಇನ್ನೂ ತಿಳಿಯಲಿಲ್ಲವೆಂದು ಭಾಸ್ಕರರಾಯನಿಗೆ ಖೇದವಾಯಿತು ಮಾನ್‌ಶನ್ ಸಾಹೇಬನ ಕಡೆಯವರಾರೂ, ಏನನ್ನುಮಾಡಿದರೂ ಸಾಹೇಬನ ಸುದ್ದಿಯನ್ನು ಹೇಳಲಿಲ್ಲ. ಕೊನೆಯಲ್ಲಿ ಭಾಸ್ಕರರಾಯನ ಕಡೆಯ ಜನರು ತಾವೇ ಸುತ್ತುಮುತ್ತಲೂ ಶೋಧಮಾಡತೊಡಗಿದರು. ಅವರೊಳಗಿನವನೊಬ್ಬನು 'ಮಾರುತಿಯ ಗುಡಿಯ ಬಾಗಿಲವು ಒಳಗಿನಿಂದ ಇಕ್ಕಿದೆ.' ಎಂಬ ಸುದ್ಧಿಯನ್ನು ತಂದನು. ಕೂಡಲೇ ಎಲ್ಲರೂ ಆ ಗುಡಿಯ ಕಡೆಗೆ ತಿರುಗಿದರು.

# ೪ ನೇಯ ಪ್ರಕರಣ.

## ಆನಂದವೂ, ಖೇದವೂ.

ಭಾಸ್ಕರರಾಯನೂ ಅವನ ಕಡೆಯ ಜನರೂ ಗಾಡಿಯ ಹೊರಭಾಗದಲ್ಲಿ ಬಂದುದರ ಸುಳಿವು ವ್ಯಾನ್ಶನ್ ಸಾಹೇಬನಿಗೆ ಹತ್ತಿದ ಕೂಡಲೆ ಅವನು ಗುಡಿಯ ಬಾಗಿಲಕ್ಕೆ ಒಳಗಡೆಯಿಂದ ಚಿಲಕವನ್ನು ಹಾಕಬೇಕೆಂದು ನೋಡಹತ್ತಿದನು. ಆದರೆ ದೇವರ ಗುಡಿಗೆ ಒಳಗಡೆಯಲ್ಲಿ ಚಿಲಕವು ಯಾಕೆ ಇರಬೇಕು? ಚಿಲಕವಿಲ್ಲದುವನ್ನು ನೋಡಿದ ಬಳಿಕ ಅವನ ಸ್ಥಿತಿಯು ವಿಚಿತ್ರವಾಯಿತು. ಆದರೂ ಅವನು ಎದೆಗುಂದಲಿಲ್ಲ. ಬಾಗಿಲಕ್ಕೆ ಬೆನ್ನು ಕೊಟ್ಟು, ಎಷ್ಟು ಶಕ್ತಿಯನ್ನು ಉಪಯೋಗಿಸಿದರೂ ತೆರೆಯಲಿಕ್ಕೆ ಬಾರದಂತೆ ಗಟ್ಟಿಯಾಗಿ ಆತುಕೊಂಡು ಧೈರ್ಯದಿಂದ ಕುಳಿತುಬಿಟ್ಟನು.

ಹಿಂದೆ ಹೇಳಿದಂತೆ ಭಾಸ್ಕರರಾಯನೂ ಅವನ ಜನರೂ ಅಲ್ಲಿಗೆ ಬಂದರು. ಮತ್ತು ಗುಡಿಯ ಬಾಗಿಲವು ಒಳಗಿನಿಂದ ಇಕ್ಕಿದುದನ್ನು ನೋಡಿ, ಅದನ್ನು ತೆರೆಯುವ ಪ್ರಯತ್ನವನ್ನು ನಡಿಸಿದರು. ಆದರೆ ಸಹಜವಾಗಿ ಬಾಗಿಲವನ್ನು ತೆರೆಯಲಿಕ್ಕೆ ಬರುವ ಲಕ್ಷಣವು ತೋರಲಿಲ್ಲ. ಆದುದರಿಂದ ಸಾಹೇಬನು ಆ ಗುಡಿಯಲ್ಲಿಯೇ ಇರಬೇಕೆಂದು ಎಲ್ಲರಿಗೂ ಮನವರಿಕೆಯಾಯಿತು. ಇಷ್ಟು ತಿಳಿದ ಮೇಲೆ ಬಾಗಿಲ ತೆರೆಯುವ ಪ್ರಯತ್ನವು ಚೆನ್ನಾಗಿ ಮನಃಪೂರ್ವಕವಾಗಿ ನಡೆಯಿತು. ಭಾಸ್ಕರರಾಯನ ಅನುಚರರಲ್ಲಿ ಪ್ರತಿಯೊಬ್ಬನ ಮುಖದ ಮೇಲೆ ವೀರಶ್ರೀಯು ಝಳಪಿಸಹತ್ತಿತು. ಅದರಲ್ಲಿಯೂ ಭಾಸ್ಕರರಾಯನ ವಿಶೇಷ ಪ್ರೀತಿಗೆ ಪಾತ್ರನಾದ ವಿಷ್ಣು ಕುಲಕರ್ಣಿ ಎಂಬವನು ಅತ್ಯಂತ ಆವೇಶದಲ್ಲಿದ್ದನು. ಅವನು ಎಲ್ಲರನ್ನೂ ಸರಿಸುತ್ತ ಮುಂದೆ ಬಂದು ಕ್ರೋಧಯುಕ್ತನಾಗಿ ವೀರಗರ್ಜನೆಯನ್ನು ಮಾಡುತ್ತ ಬಾಗಿಲವನ್ನು ನಾಲ್ಕೆರಡು ಸಾರೆ ಕಸುವಿನಿಂದ ಒದೆದನು, ಕೂಡಲೆ ಅದು ಮುರಿದು ತುಂಡಾಯಿತು! ಇದೇ ಸಮಯವೆಂದೆಣಿಸಿ ವ್ಯಾನ್ಶನ್ ಸಾಹೇಬನಾದರೂ ಒಳ್ಳೇ ಧೀರತನದಿಂದ ತನ್ನ ಪಿಸ್ತೂಲನ್ನು ತೆರೆದನು; ಮತ್ತು ಒಳಗೆ ನೂಗುತ್ತಿರುವ ಜನರ ಮೇಲೆ ಗುಂಡುಗಳನ್ನು ಸುರಿಸಹತ್ತಿದನು; ಆದರೆ ಅದರಿಂದ ತಕ್ಕಷ್ಟು ಉಪಯೋಗವಾಗಲಿಲ್ಲ. ಆದ್ದರಿಂದ ಮತ್ತೆ ಪಿಸ್ತೂಲನ್ನು ತುಂಬಬೇಕಾಯಿತು. ಅಷ್ಟರಲ್ಲಿ ಮೇಲೆ ಹೇಳಿದ ವಿಷ್ಣುವು ಅವನ ಮೇಲೆ ಏರಿ ಹೋದನು.

ಆ ಕಾಲದಲ್ಲಿ ಇಬ್ಬರಿಗೂ ನಡೆದ ಯುದ್ಧವು ಪ್ರೇಕ್ಷಣೀಯವೂ ಶೌರ್ಯವನ್ನು ಪ್ರಕಟಗೊಳಿಸುವಂತಹದೂ ಆಗಿತ್ತು. ಕೊನೆಗೆ ವಿಷ್ಣುವು ಮ್ಯಾನ್‌ಶನ್ ಸಾಹೇಬನನ್ನು ನೆಲಕ್ಕೆ ಕೆಡವಿ ಅವನ ಎದೆಯ ಮೇಲೆ ಕುಳಿತನು.

ಈ ಸಮಯದಲ್ಲಿ ವಿಷ್ಣುವು ಮ್ಯಾನ್‌ಶನ್ ಸಾಹೇಬನ ಹಿಂದಿನ ಕೃತಿಗಳನ್ನೆಲ್ಲ ಅವನಿಗೆ ನೆನಪು ಮಾಡಿಕೊಟ್ಟನು; ಮತ್ತು ನಿಂದಾಸೂಚಕವಾದ ಅನೇಕ ಕಟು ವಚನಗಳನ್ನಾಡಿ ಕೊನೆಯಲ್ಲಿ ನಿನ್ನ ಇಷ್ಟದೇವತೆಯನ್ನು ಪ್ರಾರ್ಥಿಸು. ಮರಣಕ್ಕೆ ಸಿದ್ಧನಾಗು, ಎಂದು ಹೇಳಿದ ಬಳಿಕ ಮಾತಾಡಲು ಸಂಧಿಯು ದೊರೆತುದರಿಂದ ಮ್ಯಾನ್‌ಶನ್ ಸಾಹೇಬನು ಹೀಗೆ ಹೇಳಿಕೊಂಡನುः—

"ಸದ್ಯಕ್ಕೆ ನಿಮ್ಮ ಹೊರತು ನನಗೆ ಯಾರೂ ಗತಿಯಿಲ್ಲ; ಈಗ ನನಗೆ ಸರ್ವಸ್ವವೂ ನೀವೇ ಆಗಿದ್ದೀರಿ; ನನ್ನನ್ನು ಬದುಕಿಸುವದಾಗಲಿ, ಕೊಲ್ಲುವದಾಗಲಿ ಸಂಪೂರ್ಣವಾಗಿ ನಿಮ್ಮ ಕೈಯಲ್ಲಿಯೇ ಇದೆ. ಆದುದರಿಂದ ನಾನು ಬೇರೆ ಯಾರನ್ನೂ ಪ್ರಾರ್ಥಿಸುವದಿಲ್ಲ. ನಿಮ್ಮನ್ನೇ ಅನನ್ಯಭಾವದಿಂದ ಬೇಡಿಕೊಳ್ಳುತ್ತೇನೆ ನನಗೆ ಈಗ ಪೂರ್ಣಪಶ್ಚಾತ್ತಾಪವಾಗಿದೆ. ನಿಮಗೆ ಶರಣುಬಂದಿದ್ದೇನೆ; ದಯಮಾಡಿ ನನಗೆ ಜೀವದಾನ ಕೊಡಿರಿ; ಇಂದಿನಿಂದ ನಾನು ನನ್ನ ವರ್ತನಕ್ರಮವನ್ನು ಬದಲಿಸುವೆನು; ಮತ್ತು ನಿಮ್ಮೆಲ್ಲರಿಗೂ ಹಿತಕರವೆನಿಸುವ ರೀತಿಯಲ್ಲಿಯೇ ಕಾರಭಾರವನ್ನು ಸಾಗಿಸುವೆನು. ಆದುದರಿಂದ ದಯಮಾಡಿ ನನ್ನ ಪ್ರಾಣವನ್ನು ಉಳಿಸಿರಿ.

ಈ ಮಾತುಗಳು ಕಿವಿಯಲ್ಲಿ ಬಿದ್ದಕೂಡಲೆ ಹತ್ತರದಲ್ಲಿದ್ದ ಭಾಸ್ಕರರಾಯನು ಒತ್ತರದಿಂದ ಮಾತನಾಡಿದನು. "ದುಷ್ಟಾ, ಈಗ ಸಾಯುವ ಹೊತ್ತು ಬಂತೆಂದು ಪಾಶ್ಚಾತ್ತಾಪವನ್ನು ಮುಂದೆ ಮಾಡುತ್ತೀಯಾ? ಮತ್ತು ಶರಣಾಗತನಾಗುತ್ತೀಯಾ? ನೀನು ಮಾಡಿದ ಕೃತ್ಯಗಳನ್ನು ನೆನಿಸಿಕೊಂಡರೆ 'ನೀನು ಮರಮರ ಮರಗುತ್ತ ನವೆದು ನವೆದು ಸಂಕಟಬಡುತ್ತ ಪ್ರಾಣವನ್ನು ಬಿಡಬೇಕು; ಆದರೂ ನೀನು ಬಹಳ ಹೇಳಿಕೊಳ್ಳುತ್ತೀಯಾದುದರಿಂದ ಅಂತಹ ಯಾತನೆಯನ್ನು ನಿನಗೆ ಕೊಡುವದಿಲ್ಲ; ಒಮ್ಮೆಲೆ ದೇಹಾಂತ ಶಿಕ್ಷೆಯನ್ನೇ ಕೊಡಿಸುತ್ತೇನೆ; ಸಾವಿಗೆ ಸಿದ್ಧನಾಗು. ಯಮಲೋಕದ ದಾರಿಯನ್ನು ನೋಡುತ್ತ ಮಾರ್ಗವನ್ನು ಕ್ರಮಿಸಲು ಸಜ್ಜಾಗು." ಈ ಮಾತುಗಳನ್ನು ಕೇಳಿದ ಕೂಡಲೆ ಮ್ಯಾನ್‌ಶನ್ ಸಾಹೇಬನು ಗಾಬರಿಯಾದನು. ಆತನ ಹೌಹಾರಿತು; ನಿರುಪಾಯನಾದನು; 'ಇನ್ನು ನಾನು ಬದುಕಲಾರೆನೆ' ಎಂದು ಅವನು ತಿಳಿದನು; ಆದರೂ ಮತ್ತೊಮ್ಮೆ ದೀನ ಸ್ವರದಿಂದ ಹೀಗೆ ಹೇಳಿಕೊಂಡನು. "ಭಾಸ್ಕರರಾವ, ಈ ಸಾರೆ ನೀವು ನನ್ನನ್ನು ಉಳಿಸಿದರೆ, ನಿಮ್ಮ ವಿಷಯಕ್ಕೆ ಉತ್ತ

ಮವಾದ ಅಭಿಪ್ರಾಯವನ್ನು ಬರೆದು ಕಳಿಸಿ, ನಿಮಗೆ ದತ್ತಕ ತೆಗೆದುಕೊಳ್ಳುವ ಅನುಮತಿಯನ್ನು ದೊರಕಿಸಿ ಕೊಡುವ ಪ್ರಯತ್ನ ಮಾಡುವೆನು. ನಿಮ್ಮ ರಾಜ್ಯವೂ ಅಧಿಕಾರವೂ ಬೆಳೆಯುವದಕ್ಕೆ ತಕ್ಕ ಅನುಕೂಲತೆಗಳನ್ನು ಒದಗಿಸಿ ಕೊಡುವೆನು, ಮತ್ತು ನಿಮ್ಮ ಎಲ್ಲ ಹಕ್ಕುಗಳನ್ನು ಅಬಾಧಿತವಾಗಿ ನಡೆಯಿಸಿಕೊಡುವೆನು."

ಭಾಸ್ಕರರಾಯನು ಕ್ರೋಧಾಂಧನಾಗಿ ಹೋಗಿದ್ದನು; ಸೇಡು ತೀರಿಸುವ ಭಾವನೆಯು ಅವನ ಸರ್ವಾಂಗದಲ್ಲಿಯೂ ವ್ಯಾಪಿಸಿತ್ತು. ಅವನು ಹೀಗೆ ಉತ್ತರ ಕೊಟ್ಟನು. "ಹಾವನ್ನು ಎಂದಾದರೂ ನಂಬಬಹುದೇ? ಸಾಯುವ ಹೊತ್ತು ಬಂದಾಗ ಅದಾದರೂ ಬಾಲವನ್ನು ಸುರುಳಿ ಮಾಡಿ ಶರಣು ಬಂದುದನ್ನು ಸೂಚಿಸುತ್ತದೆ; ಆದರೆ ಕೊಲ್ಲುವವನು ತನ್ನ ಮೋರೆಯನ್ನು ತಿರುಗಿಸಿದ ಕೂಡಲೆ, ಅದು ಕಡಿಯುವದಕ್ಕಾಗಿ ಅವನನ್ನು ಬೆನ್ನಟ್ಟುತ್ತದೆ. ನಿನ್ನ ಗುಣವಾದರೂ ಭಯಂಕರವಾದ ಕೃಷ್ಣಸರ್ಪದಂತೆಯೇ ಇದೆ. ಇಂತಹನ ಮೇಲೆ ದಯಮಾಡುವದೆಂದರೆ ನಮ್ಮನ್ನು ನಾವೇ ಹಾಳು ಮಾಡಿಕೊಂಡಂತೆಯೇ ಸರಿ" ಹೀಗೆ ಹೇಳುತ್ತ ಭಾಸ್ಕರರಾಯನು ಅವನ ರುಂಡವನ್ನು ಮುಂಡದಿಂದ ಬೇರೆ ಮಾಡಿದನು. ಆ ದಿವಸ ಮೇ ತಿಂಗಳ ೨೯ನೆಯ ತಾರೀಖು; ರಾತ್ರಿಯ ಹನ್ನೆರಡು ಗಂಟೆಯ ವೇಳೆಯು. ಭಾಸ್ಕರರಾಯನ ಸೈನಿಕರು ಜಯಜಯಕಾರವನ್ನು ಮಾಡಿದರು. ಎಲ್ಲರ ಮುಖದಲ್ಲಿಯೂ ಆನಂದವು ತುಂಬಿ ತುಳುಕುತ್ತಿತ್ತು. ಅವರು ಮ್ಯಾನ್‌ಶನ್ ಸಾಹೇಬನ ತಲೆಯನ್ನು ಸಂಗಡ ತೆಗೆದುಕೊಂಡು ಅದೇ ರಾತ್ರಿಯ ಎರಡು ಗಂಟೆಯ ಸುಮಾರಕ್ಕೆ ಅಲ್ಲಿಂದ ಹೊರಟು ನರಗುಂದದ ದಾರಿಯನ್ನು ಹಿಡಿದರು.

ನರಗುಂದದ ಕೃಷ್ಣಾಜಿಪಂತ ಜೋಶಿ ಮತ್ತು ಬನ್ಯಾ ಬಾಪು ಇವರು ಮ್ಯಾನ್‌ಶನ್ ಸಾಹೇಬನ ಕಡೆಗೆ ಒಡೆದಿದ್ದರೆಂಬುದನ್ನು ನಮ್ಮ ಪ್ರಿಯವಾಚಕರು ಮರೆತಿರಲಿಕ್ಕಿಲ್ಲ. ಅವರು ಮೊದಲಿನಿಂದಲೂ ಭಾಸ್ಕರರಾಯನ ಪ್ರತಿಯೊಂದು ವ್ಯಾಪಾರವನ್ನು ನಿರೀಕ್ಷಿಸುತ್ತಿದ್ದರು. ಮ್ಯಾನ್‌ಶನ್ ಸಾಹೇಬನು ನರಗುಂದದ ಸೀಮೆಯಲ್ಲಿ ಬಂದುದನ್ನೂ, ಭಾಸ್ಕರರಾಯನು ಸೈನ್ಯಸಹಿತನಾಗಿ ಅವನನ್ನು ಹೊಡೆಯುವದಕ್ಕಾಗಿ ಎದುರಿಸಿ ಹೋದುದನ್ನೂ ತಿಳಿದ ಕೂಡಲೆ ಅವರು ಮುಂದಿನ ಪರಿಣಾಮವನ್ನು ಊಹಿಸಿದರು; ಮತ್ತು ತಾವು ಇನ್ನು ಮೇಲೆ ನರಗುಂದದಲ್ಲಿ ಉಳಿದರೆ ತೋಫಿನ ಗುಂಡಿಗೆ ತುತ್ತಾಗಿ ಸಾಯುವದು; ಇಲ್ಲವೆ ಸಾಯುವತನಕ ಸೆರೆಮನೆಯಲ್ಲಿ ಕೊಳೆತು ಪ್ರಾಣವನ್ನು ಬಿಡುವದು; ಇವೆರಡೇ ತಮಗೆ ಬರತಕ್ಕ ಫಲಗಳೆಂಬುದನ್ನು ಅವರು ನಿರ್ಧರಿಸಿದರು. ಮತ್ತು ಜೀವ ರಕ್ಷಣಾರ್ಥವಾಗಿ ನರಗುಂದದ ಗಡಿಯನ್ನು ದಾಟಿ ಇಂಗ್ಲಿಷರ ಪ್ರಾಂತದಲ್ಲಿ ವಾಸವಾಗಿರುವದೇ ಸುರಕ್ಷಿತವೆಂದು ಆಲೋಚಿಸಿದರು. ಭಾಸ್ಕರರಾಯನು ಮ್ಯಾನ್‌ಶನ್ ಸಾಹೇಬನನ್ನು

ಕೊಂದ ಸುದ್ದಿಯು ತಿಳಿದ ಬಳಿಕಂತೂ ಅವರ ಜೀವವು ನೆತ್ತಿಯಿಂದಲೇ ಹೋಯಿತು. "ನಾವು ಮ್ಯಾನ್‌ಶನ್ ಸಾಹೇಬನಿಗೆ ಬರೆದ ಪತ್ರಗಳೆಲ್ಲ ಅವನ ಹತ್ತರ ಇರಬಹುದು; ಅವು ಭಾಸ್ಕರರಾಯನ ಕೈಗೆ ಸಿಕ್ಕವೆಂದರೆ ತೀರಿತು; ನಮ್ಮ ಆವತಾರವು ಮುಗಿದಂತಾಯಿತು ಭಾಸ್ಕರರಾಯನು ನಮ್ಮನ್ನಷ್ಟೇ ಗೊತ್ತಿಗೆ ಹಚ್ಚಿ ಬಿಡತಕ್ಕವನಲ್ಲ. ನಮ್ಮ ಪೀಳಿಗೆಯನ್ನೇ ಇಲ್ಲದಂತೆ ಮಾಡಿ ಬಿಡುವನು." ಈ ತರದ ವಿಚಾರಗಳು ಅವರ ಮನಸ್ಸಿನಲ್ಲಿ ಬಂದುವು. ಕೊನೆಗೆ ಅವರು ಸಕುಟುಂಬ ಸಪರಿವಾರವಾಗಿ ನರಗುಂದವನ್ನು ಬಿಡಬೇಕೆಂದು ನಿಶ್ಚಯಿಸಿದರು; ಮತ್ತು ಕೂಡಲೆ ಅಲ್ಲಿಂದ ಹೊರಟು ಹೋದರು.

ಭಾಸ್ಕರರಾಯನು ಮೊದಲು ಕಾಳಗದ ಸಿದ್ಧತೆಯನ್ನು ಆರಂಭಿಸಿದಾಗ ತನ್ನ ಮುಖ್ಯ ಅನುಯಾಯಿಗಳೆಲ್ಲರಿಂದಲೂ ಆಣೆ, ಪ್ರತಿಜ್ಞೆಗಳನ್ನು ಮಾಡಿಸಿಕೊಂಡಿದ್ದನು. ನರಗುಂದಕರನ ವಿಶೇಷಪ್ರೀತಿಯ ಆಳಾದ ಬನ್ಯಾ ಬಾಪುವೂ, ಪ್ರೇಮಾಸ್ಪದನಾದ ಕೃಷ್ಣಾಜಿಪಂತ ಕಾರಭಾರಿಯೂ ಭಾಸ್ಕರರಾಯನ ಪಾದಗಳನ್ನು ಮುಟ್ಟಿ ಆಣೆಮಾಡಿದ್ದರು; ಈ ಸುದ್ದಿಯನ್ನು ನಾವು ಎಂದೂ ಹೊರಗೆ ತಿಳಿಯಗೊಡುವದಿಲ್ಲವೆಂದೂ, ಒಡಕು ಹುಟ್ಟಲು ಅಸ್ಪದವಿಲ್ಲದಂತೆ ನಡೆಯುವೆವೆಂದೂ ಅಭಿವಚನವನ್ನು ಕೊಟ್ಟಿದ್ದರು. ಹೀಗಿದ್ದು ಇವರೇ 'ಉಂಡಮನೆಯ ಗಳ ಎಣಿಸುವವರಾದರು. ಮತ್ತು ಹಿಂದೆ ಹೇಳಿದಂತೆ ಇಂಗ್ಲಿಷರಿಗೆ ಅನುಕೂಲರೂ ನರಗುಂದದ ಸಂಪೂರ್ಣನಾಶಕ್ಕೆ ಕಾರಣವೂ ಆದರು. ಈ ದುಷ್ಟರೇ ಮೋಸಮಾಡಿ ಕಿಲ್ಲೆಯ ಮೇಲೆ ಸಾಕಷ್ಟು ಮದ್ದುಗುಂಡುಗಳನ್ನು ಕೂಡ ಏರಿಸಗೊಡದೆ, ಅವ್ಯವಸ್ಥೆಯನ್ನುಂಟುಮಾಡಿದ್ದರು. ಇರಲಿ.

ಭಾಸ್ಕರರಾಯನು ಮ್ಯಾನ್‌ಶನ್ ಸಾಹೇಬನನ್ನು ವಧಿಸಿದ ಬಳಿಕ ಹಿಂದೆ ಹೇಳಿದಂತೆ ನರಗುಂದಕ್ಕೆ ಬಂದು ಮುಟ್ಟಿದನು. ಅವನ ಸೈನಿಕರು ಕೃತಕಾರ್ಯರಾಗಿದ್ದದರಿಂದ, ಭಾರವನ್ನಿಳಿಸಿದವರಂತೆ ಆನಂದಿತರಾಗಿದ್ದರು. ಅನೇಕರು ತಮ್ಮ ತಮ್ಮೊಳಗೆ ಅಲ್ಲಿಯ ಸುದ್ದಿಗಳನ್ನು ಮಾತಾಡುತ್ತಿದ್ದರು. ಆದರೆ ಮುಖ್ಯ ಜನರು ತಮ್ಮ ತಮ್ಮ ಮುಂದಿನ ಕರ್ತವ್ಯಗಳಲ್ಲಿ ತೊಡಗಿದ್ದರು. ಮ್ಯಾನ್‌ಶನ್ ಸಾಹೇಬನ ಹತ್ತರ ಸಿಕ್ಕ ಎಲ್ಲ ಒಡವೆಗಳನ್ನು ಪರೀಕ್ಷಿಸುವದು ಒಂದು ಮಹತ್ವದ ಕರ್ತವ್ಯವಾಗಿತ್ತು. ಅವನ ಹತ್ತರಿದ್ದ ಎಷ್ಟೋ ಪತ್ರಗಳು ಇವರ ಹಸ್ತಗತವಾಗಿದ್ದವು. ಭಾಸ್ಕರರಾಯನು ಅವುಗಳನ್ನೆಲ್ಲ ನಿರೀಕ್ಷಿಸುತ್ತಿದ್ದನು. ಇಷ್ಟರಲ್ಲಿ ಬನ್ಯಾ ಬಾಪು ಮತ್ತು ಕೃಷ್ಣಾಜಿಪಂತ ಇವರ ಹಸ್ತಲಿಖಿತ ಪತ್ರಗಳು ಇವನ ಕಣ್ಣಿಗೆ ಬಿದ್ದವು. ಕೂಡಲೆ ಅವನು ಅವುಗಳನ್ನು ಬಹಳ ಲಕ್ಷ್ಯಪೂರ್ವಕವಾಗಿ ಓದಹತ್ತಿದನು.

ಅವನು ಈ ಪತ್ರಗಳನ್ನೋದುವುದರಲ್ಲಿ ಅಷ್ಟೊಂದು ವ್ಯಾಪೃತನಾದುದನ್ನು ನೋಡಿ ಅವನ ಸುತ್ತಲಿದ್ದವರ ಲಕ್ಷ್ಯವೆಲ್ಲವೂ ಅತ್ತ ಹೋಯಿತು. ಆಗ ಭಾಸ್ಕರರಾಯನ ಮುಖಚರ್ಯೆಯು ಅತ್ಯಂತ ಗಂಭೀರವಾಗಿತ್ತು. ಆದರೆ "ಭಾಸ್ಕರರಾಯನು ಸಿದ್ಧಮಾಡಿಟ್ಟ ಮದ್ದಿನಲ್ಲಿ ಸಗಣಿಯನ್ನು ಕಲಿಸಿ ಅದನ್ನು ನಿರುಪಯೋಗಿಯನ್ನಾಗಿ ಮಾಡಿದ್ದೇವೆ." ಎಂಬ ವಾಕ್ಯವನ್ನು ಓದಿದ ಕೂಡಲೆ ಅವನ ಮೋರೆಯಮೇಲಿನ ಕಳೆಯು ಒಮ್ಮೆಲೆ ಇಳಿಯಿತು; ಬಾಯಿಂದ 'ಹಾಯ್! ಘಾತವಾಯಿತು! ಘಾತವಾಯಿತು!' ಎಂಬ ಉದ್ಗಾರವು ಹೊರಟಿತು. ಭಾಸ್ಕರರಾಯನ ಮುಖಮುದ್ರೆಯನ್ನೂ, ಬಾಯಿಂದ ಹೊರಟ ಉದ್ಗಾರಗಳನ್ನೂ ಕೇಳಿದ ಕೂಡಲೆ ಹತ್ತರದಲ್ಲಿದ್ದ ಮುತ್ಸದ್ದಿಗಳು ಚಿಂತಾಕ್ರಾಂತರಾದರು; ಆಶ್ಚರ್ಯಚಕಿತರಾದರು; ಪತ್ರದೊಳಗಿನ ಸಂಗತಿಯ ವಿಷಯದಲ್ಲಿಯೂ, ಮುಂದಿನ ಸ್ಥಿತಿಯ ವಿಷಯದಲ್ಲಿಯೂ ಅನೇಕ ಕಲ್ಪನೆಗಳು ಅವರ ಮನದಲ್ಲಿ ಬರಹತ್ತಿದುವು.

ಮೊದಮೊದಲು ಭಾಸ್ಕರರಾಯನ ಮೋರೆಯ ಮೇಲಿನ ಕಳೆಯೇನೋ ಇಳಿದಿತ್ತು. ಆದರೆ ಕೂಡಲೆ ಕ್ರೋಧವು ಅವನ ಸರ್ವಾಂಗವನ್ನು ವ್ಯಾಪಿಸಿತು. ಅವನು ಸಂತಪ್ತನಾದನು. ನಿಜಸ್ಥಿತಿಯನ್ನು ನಡುಗುವ ದನಿಯಿಂದಲೇ ಅಲ್ಲಿದ್ದ ಎಲ್ಲರಿಗೂ ತಿಳಿಸಿದನು. ಮತ್ತು ಭೀಮಗರ್ಜನೆಯಿಂದ ಈಪ್ರಕಾರ ಮಾತಾಡಿದನು:—'ಆ ಕೃತಘ್ನನೂ ನೀಚನೂ ಆದ ಕೃಷ್ಣಾಜಿ ಮತ್ತು ಬನ್ಯಾ ಇವರನ್ನು ಹಿಡಿದು ತಂದು ನನ್ನ ಮುಂದೆ ಇಟ್ಟವರಿಗೆ ಹತ್ತು ಸಾವಿರ ರೂಪಾಯಿಗಳ ಉತ್ಪನ್ನದ ಊರನ್ನು ಉಂಬಳಿ ಕೊಡುವೆನು.' ಹೀಗೆ ಹೇಳಿ ಎಲ್ಲರಿಗೂ ಹೀಗೆ ಸಾಮಾನ್ಯವಾದ ಆದೇಶವನ್ನು ಕೊಟ್ಟನು. 'ಕೃಷ್ಣಾಜಿಪಂತ ಮತ್ತು ಬನ್ಯಾ ಬಾಪು ಇವರ ವಂಶಜರಲ್ಲಿ ಯಾರು ಕಣ್ಣಿಗೆ ಬಿದ್ದರೂ ಅವರನ್ನು ಆಗಿಂದಾಗಲೇ ಕಡಿದು ತುಂಡರಿಸಿ ಚಲ್ಲಬೇಕು.' ಇವರಿಬ್ಬರೂ ಮನೆಮುರುಕರು. ಹೀಗೆ ಅಗತ್ಯದ ವೇಳೆಯಲ್ಲಿ ಘಾತಮಾಡಿದರು! ಉಪಾಯವಿಲ್ಲ. ಆದರೂ ಗತಿಸಿ ಹೋದುದನ್ನು ಚಿಂತಿಸುವದರಲ್ಲಿಯೇ ಮತಿಯನ್ನು ವೆಚ್ಚ ಮಾಡುವದು ಜಾಣತನವಲ್ಲ. ಇದ್ದ ಸ್ಥಿತಿಯನ್ನೇ ಮಾರ್ಪಡಿಸಿಕೊಳ್ಳುವದು ಮೇಲ್ಮೆಯಾಗಿದೆ; ಹೀಗೆ ವಿಚಾರ ಮಾಡಿ, ಬೇರೆ ತರದ ಉತ್ತಮವಾದ ಮದ್ದನ್ನು ಸಿದ್ಧಪಡಿಸುವ ವ್ಯವಸ್ಥೆಯನ್ನು ಮಾಡಿದನು; ಮತ್ತು ಕೆಟ್ಟುಹೋದ ಮದ್ದನ್ನು ಹುಗಿದು ಬಿಡಬೇಕೆಂದು ಹೇಳಿದನು. ಈ ಸಮಯಕ್ಕೆ ಸೂರ್ಯೋದಯವಾಯಿತು. ಆಗ ಎಲ್ಲರೂ ತಮ ತಮಗೆ ಉಚಿತವಾದ ಅಪ್ಪಣೆಗಳನ್ನು ತಲೆಯಲ್ಲಾಂತು, ಅವುಗಳನ್ನು ನೆರವೇರಿಸುವ ವಿಷಯದಲ್ಲಿ ತತ್ಪರರಾಗಿ ಭಾಸ್ಕರರಾಯನ ನಿರೋಪವನ್ನು ತೆಗೆದುಕೊಂಡು ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಮನೆಮಂಚುಕರಿಬ್ಬರ ಶೋಧವೂ ಒಳ್ಳೇ ಕಸುವಿನಿಂದ ಸಾಗಿತು. ಆದರೂ ಎಲ್ಲಿಯೂ ಸುದ್ದಿಯು ಹತ್ತಲಿಲ್ಲ. ಆದುದರಿಂದ ಭಾಸ್ಕರರಾಯನಿಗೆ ಕೆಡಕೆನಿಸಿತು. ಮ್ಯಾನ್‌ಶನ್ ಸಾಹೇಬನಂಥ ಮುಖ್ಯಶತ್ರುವನ್ನು ಕೊಂದು ಬಂದೆನು. ಆದರೆ ಮನೆಯೊಳಗಿನ ಈ ಕೃತಘ್ನರು ನನಗೆ ಟಂಗು ತಿನಿಸಿ ಓಡಿ ಹೋದರಲ್ಲ ಎಂಬ ಮಾತು ಆವನ ಮನಸ್ಸಿಗೆ ಬಹಳ ಹತ್ತಿತು; ಮೇಲಾಗಿ ಮದ್ದಿನ ರಾಶಿಯು ಕೆಟ್ಟು ಹೋದುದರಿಂದಂತೂ ಅವನಿಗೆ ಬಹಳೇ ಖೇದವಾಯಿತು. ಮ್ಯಾನ್‌ಶನ್ ಸಾಹೇಬನ ವಧದಿಂದ ಆನಂದವಾಗಿದ್ದರೂ ಮದ್ದು ಕೆಟ್ಟು ಹೋದುದರಿಂದಲೂ ಮನೆಮುರುಕರ ಶೋಧವು ಬೇಗನೆ ಆಗದ್ದರಿಂದಲೂ ಭಾಸ್ಕರರಾಯನ ಖೇದವೇ ಹೆಚ್ಚುತ್ತ ಹೋಯಿತು!

---

## ೫ನೆಯ ಪ್ರಕರಣ.

"ತಾನೊಂದ ಬಗೆದರೆ ದೈವವೊಂದ ಬಗೆಯಿತು."

ನರಗುಂದದಲ್ಲಿ ವೆಂಕಟೇಶ ದೇವರದೊಂದು ದೊಡ್ಡಗುಡಿಯಿದೆ. ಅದು ಬಹಳೇ ಜಾಗೃತವಾದ ದೇವಸ್ಥಾನವೆಂದು ಮೊದಲಿನಿಂದಲೂ ಪ್ರಸಿದ್ಧವಾಗಿದೆ. ಅದರಂತೆಯೇ ಭಕ್ತರ ಕೋರಿಕೆಗಳನ್ನು ಈಡೇರಿಸುವಲ್ಲಿಯೂ ಆ ದೇವರ ಖ್ಯಾತಿಯು ಬಹಳವುಂಟು. ಭಾಸ್ಕರರಾಯನು ಸ್ವಧರ್ಮದಲ್ಲಿ ಅತ್ಯಂತ ನಿಷ್ಠನಾಗಿದ್ದನೆಂಬ ಸಂಗತಿಯನ್ನು ಹಿಂದೆ ತಿಳಿಸಿದ್ದೇವಷ್ಟೇ? ಈ ವೆಂಕಟೇಶ ದೇವರನ್ನು ಸಾಮಾನ್ಯವಾಗಿ ಭಾವೆ ಮನೆತನದವರೆಲ್ಲರೂ ಭಕ್ತಿಪೂರ್ವಕವಾಗಿ ಆರಾಧಿಸುತ್ತಿದ್ದರು. ಅದರಂತೆಯೇ ರಾಮದುರ್ಗದಲ್ಲಿಯೂ ಒಂದು ವೆಂಕಟೇಶನ ದೊಡ್ಡ ದೇವಾಲಯವಿದ್ದು, ಅಲ್ಲಿಯ ಸಂಸ್ಥಾನಿಕರಾದರೂ ಆ ದೇವರಿಗೆ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಇರಲಿ. ಭಾಸ್ಕರರಾಯನಂತೂ ಈ ದೇವರ ವಿಷಯದಲ್ಲಿ ಅನಿವಾರವಾದ ಭಕ್ತಿಯನ್ನು ತಿಳಿದಿದ್ದನೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಎಂದಮೇಲೆ ಕೇಳುವದೇನು? ಅರಸನಂತೆಯೇ ಪ್ರಜೆಗಳು. ಸ್ವತಃ ರಾಜನೇ ಭಕ್ತಿಪೂರ್ವಕನಾಗಿ ವೆಂಕಟೇಶನ ಉಪಾಸನೆಯನ್ನು ಮಾಡಹತ್ತಿದ ಬಳಿಕ ಪ್ರಜೆಗಳು ಅದರಂತೆಯೇ ಮಾಡುತ್ತಿರುವುದೇನಾಶ್ಚರ್ಯ? ಹೀಗಾಗಿ ವೆಂಕಟೇಶನ ಉಪಾಸನೆಯೂ, ಉತ್ಸವವೂ ಚೆನ್ನಾಗಿ ನಡೆಯುತ್ತಿದ್ದುವು.

ಮ್ಯಾನಶನ್ ಸಾಹೇಬನನ್ನು ಕೊಲ್ಲುವ ಪೂರ್ವದಲ್ಲಿಯೇ ಭಾಸ್ಕರರಾಯನು ಇಷ್ಟ ಸಾಧ್ಯರ್ಥವಾಗಿ ವೆಂಕಟೇಶ ದೇವರ ಆರಾಧನೆಯನ್ನು ಆರಂಭಿಸಿದ್ದನು. ಅದಕ್ಕಾಗಿ ಅವನು ಸುಮಾರು ಇನ್ನೂರು ಜನ ಬ್ರಾಹ್ಮಣರನ್ನು ನಿಯಮಿಸಿ ಗುಡಿಯಲ್ಲಿ ನಿತ್ಯವಾಗಿ ಅಭಿಷೇಕಾನುಷ್ಠಾನಗಳನ್ನು ಮೊದಲು ಮಾಡಿದ್ದನು. ಮ್ಯಾನ್‌ಶನ್ ಸಾಹೇಬನನ್ನು ಕೊಂದ ಬಳಿಕ ಗುಡಿಯಲ್ಲಿ ಬ್ರಾಹ್ಮಣಭೋಜನಕ್ಕೆ ಆರಂಭವಾಯಿತು. ಸಾವಿರಾರು ಜನರು ದಿನಾಲು ಸುಗ್ರಾಸಭೋಜನದಿಂದ ಸಂತೃಪ್ತರಾಗಹತ್ತಿದರು. ಬ್ರಾಹ್ಮಣರಂತೆಯೇ ಅನ್ನೋತ್ಸುಕರಾದ ಬೇರೆ ಜನರೂ ಕೂಡ ಊಟ ಮಾಡಿ ತಣಿಯಹತ್ತಿದರು. ಹೀಗೆ 'ಇತರ' ಜನರೆಲ್ಲರೂ ಮೃಷ್ಟಾನ್ನದ ಸವಿಯಲ್ಲಿ ಮಗ್ನರಾಗಿದ್ದರು. ಆದರೆ ಪ್ರಮುಖರು ಮಾತ್ರ ಯುದ್ಧಸಿದ್ಧತೆಯಲ್ಲಿ ಮುಳುಗಿಹೋಗಿದ್ದರು.

ಭಾಸ್ಕರರಾಯನು ಮಂತ್ರಿಗಳೊಡನೆ ಕೆಲವೊಂದು ಮಹತ್ವದ ವಿಷಯವನ್ನು ವಿಚಾರಮಾಡುತ್ತ ಕುಳಿತಿದ್ದನು. ಇಷ್ಟರಲ್ಲಿ ಒಬ್ಬ ದೂತನು ಅಲ್ಲಿ ಲಗುಬಗೆಯಿಂದ ಬಂದು ನಮಸ್ಕಾರ ಮಾಡಿದನು. ವರ್ತಮಾನವೇನೆಂದು ಬೆಸಗೊಳ್ಳಲು ' ಮಹಾರಾಜರೇ ಯುದ್ಧಮಾಡುವದಕ್ಕಾಗಿ ಸರ್ವಸನ್ನಾಹದೊಂದಿಗೆ ಇಂಗ್ಲಿಷರ ಸೈನ್ಯವು ಸಮೀಪದಲ್ಲಿಯೇ ಬರುತ್ತಿದೆ. ' ಎಂದು ಕಂಪಿತ ಸ್ವರದಿಂದ ಹೇಳಿಹೇರನು ಸುಮ್ಮನಾದನು. ಈ ಸುದ್ದಿಯನ್ನು ಕೇಳಿ ಎಲ್ಲರ ಮೋರೆಗಳು ಬೆಳ್ಳಗಾದವು. ಒಬ್ಬರೊಬ್ಬರು ಒಬ್ಬರೊಬ್ಬರ ಮೊಗವನ್ನು ನೋಡತೊಡಗಿದರು. ಸಹಾಯಾರ್ಥವಾಗಿ ಬರತಕ್ಕ ಸಂಸ್ಥಾನಿಕರ ನಿಯಮಿತದಿನವು ಇನ್ನೂ ನಾಲ್ಕುದಿವಸ ಮುಂದೆ ಇತ್ತು. ಹೀಗೆ ಇರುವಾಗ ಅಕಸ್ಮಾತ್ತಾಗಿ ಶತ್ರುವು ಬಲವಾದ ಸೈನ್ಯದೊಡನೆ ಬಂದೇ ಬಿಟ್ಟದರಿಂದ ಎಲ್ಲರೂ ಗಾಬರಿಯಾದರು. ಅದರಲ್ಲಿಯೂ ತಮ್ಮಲ್ಲಿದ್ದ ಮದ್ದಿನ ಸಂಗ್ರಹವೆಲ್ಲ ನಿರುಪಯೋಗಿಯಾಗಿದ್ದ ಸ್ಥಿತಿಯನ್ನು ನೆನಿಸಿಕೊಂಡು ಅವರ ಕೈಕಾಲೇ ಹೋದುವು. ಇತರ ಸಂಸ್ಥಾನಿಕರು ನಿಶ್ಚಯವಾಗಿ ಸಹಾಯಕ್ಕೆ ಬರುವರೆಂಬ ನಂಬಿಗೆಯೇನೋ ಇತ್ತು. ಆದರೂ ಅವರು ಬರುವ ವರೆಗಾದರೂ ಕಾಲೂರಿ ನಿಲ್ಲಬೇಕಲ್ಲವೇ ? ಎಂಬ ಚಿಂತೆಯೂ ಎಲ್ಲರ ಮನಸ್ಸಿನಲ್ಲಿಯೂ ಹುಟ್ಟಿತು. ಹೀಗೆ ಎಲ್ಲರೂ ಚಿಂತಾಕ್ರಾಂತರಾಗಿದ್ದ ಸಮಯದಲ್ಲಿಯೇ ಮತ್ತೊಬ್ಬ ದೂತನು ಓಡುತ್ತ ಓಡುತ್ತ ಅಲ್ಲಿಗೆ ಬಂದನು. ಮತ್ತು "ಮಹಾರಾಜರೇ ಶತ್ರುಗಳ ಸನ್ಮಾನಕ್ಕಾಗಿ ತೋಪಿನ ಬತ್ತಿಯನ್ನು ಹಚ್ಚಿದರು." ಎಂಬ ಸುದ್ದಿಯನ್ನು ಹೇಳಿದನು. ಆಗ ಮಾತ್ರ ಎಲ್ಲರಿಗೂ ವಿದ್ಯುತ್ತಿನ ಆಘಾತವಾದಂತಾಯಿತು. ಎಲ್ಲರ ನಡುವೆ, ಎಲ್ಲರಂತೆಯೇ ಆಲೋಚನೆಯಲ್ಲಿ ಮಗ್ನನಾದ ಭಾಸ್ಕರರಾಯನು, ಎರಡನೆಯ ದೂತನ ಬಾಯಿಂದ ಹೊರಟ ನುಡಿಗಳನ್ನು ಕೇಳಿದ ಕೂಡಲೆ, ಎಲ್ಲ ಆಲೋಚನೆಯನ್ನು ಬದಿಗೊತ್ತಿದನು; ಅವನ ಮುಖದ ಮೇಲೆ ವೀರಾವೇಶವು ತುಂಬಿತು; ತಟ್ಟನೆ ಕುಳಿತ ಸ್ಥಳದಿಂದೆದ್ದು ಎಲ್ಲರನ್ನೂ ಉದ್ದೇಶಿಸಿ ಹೀಗೆ ಮಾತಾಡಿದನು. "ವೀರರೇ, ಹೆದರಬೇಡಿರಿ. ಹೆದರಬೇಡಿರಿ. ಭೀತಿಯು ಶೂರನನ್ನು ಎಂದೂ ಸೋಂಕಲಾರದು. ನಮ್ಮ ಸ್ಥಿತಿಯು ಚೆನ್ನಾಗಿಲ್ಲ; ಇದ್ದ ಸೈನ್ಯವೂ ತೀರ ಕಡಿಮೆಯಿದೆ; ಇದೆಲ್ಲವೂ ನಿಜ; ಆದರೂ ಶತ್ರುವು ಸನ್ನದ್ಧನಾಗಿ ಸಡ್ಡು ಹೊಡೆದು ಮುಂದೆ ನಿಂತಿರುವಾಗ ಭಯವಿಹ್ವಲರಾಗಿ ಕೈಕಾಲು ಸಹ ಅಲ್ಲಾಡಿಸದೆ ಕುಳಿತುಕೊಳ್ಳುವದು ವೀರರಿಗೆ ಭೂಷಣವಿಲ್ಲ. ಆದುದರಿಂದ ವೀರಬಂಧುಗಳೇ, ಏಳಿರಿ; ಇದ್ದುದರಲ್ಲಿ ಸಾವರಿಸಿಕೊಂಡು ಎದುರಾದ ಶತ್ರುವನ್ನು ಪ್ರತಿಭಟಿಸುವದೇ ನಮ್ಮ ಈಗಿನ ಕರ್ತವ್ಯವು. ಶತ್ರುವು ಎಷ್ಟೇ ಬಲಿಷ್ಠನಾಗಿದ್ದರೂ ನಾವು ಒಮ್ಮನದಿಂದಲೂ ಹುರುಪಿನಿಂದಲೂ ಎದುರಾದೆವೆಂದರೆ ಅವನ ಆಟವನ್ನೇನೂ ನಡೆಯಗೊಡುವದಿಲ್ಲ. ಇದು ನಿಶ್ಚಯವು. ಯಾಕಂದರೆ ಜೀವದ ಹಂಗುದೊರೆದು ಕಾದುವ ಒಬ್ಬ

ವೀರನನ್ನು ಗೆಲ್ಲುವದು ನೂರಾರು ಜನರಿಗೆ ಸಹ ಅಸಾಧ್ಯವಾಗುವದು. ಆದುದರಿಂದ ಇನ್ನು ತಡಮಾಡಿ ಉಪಯೋಗವಿಲ್ಲ. ಆಲೋಚನೆ ಮಾಡುತ್ತ ಕೂಡ್ರುವ ಸಮಯವೂ ಇದಲ್ಲ. ಸ್ವರ್ಗದ ಬಾಗಿಲವು ತಾನಾಗಿಯೇ ತೆರೆದಿದೆ. ನಿಜವಾದ ಶೂರನು ಅದರಲ್ಲಿ ಹಾಯ್ದು ಒಳಗೆ ಪ್ರವೇಸಿಶುವನು. ಏಳಿರಿ. ಇನ್ನು ಮೇಲೆ ಮುಂದಿನ ಕೆಲಸಕ್ಕೆ ತೊಡಗುವಾ." ಈ ಮಾತುಗಳನ್ನು ಭಾಸ್ಕರರಾಯನು ಮುಗಿಸುವದರೊಳಗಾಗಿಯೇ ಎಲ್ಲರೂ ಹುರುಪಿನಿಂದ ಎದ್ದು ಮುಂದಿನ ಸಿದ್ಧತೆಗೆ ಉದ್ಯುಕ್ತರಾದರು.

ಆ ಮೇಲೆ ಭಾಸ್ಕರರಾಯನು ನೆಟ್ಟಗೆ ಹೋಗಿ, ತನ್ನ ಕುಲದೇವರಾದ ಶ್ರೀ ವೆಂಕಟೇಶನ ದರ್ಶನವನ್ನು ತೆಗೆದುಕೊಂಡನು, ಮತ್ತು ವೈಮೇಲೆ ಬಂದ ಸಂಕಟವನ್ನು ವಿದಿತಗೊಳಿಸಿ, ಅದರೊಳಗಿಂದ ತನ್ನನ್ನು ಕಾಪಾಡಬೇಕೆಂದು ಪ್ರಾರ್ಥಿಸಿಕೊಂಡನು. ಅಲ್ಲಿಂದ ಅವನು ಕಿಲ್ಲೆಯ ಮೇಲೆ ಹೋಗುವಷ್ಟರಲ್ಲಿಯೇ ಯುದ್ಧಕ್ಕೆ ಮೊದಲಾಯಿತು. ಎಲ್ಲ ಕಡೆಯಿಂದಲೂ ಶತ್ರುಗಳ ಸಿಂಹನಾದವು ಮೇಘಗರ್ಜನೆಯಂತೆ ಕೇಳಬರಹತ್ತಿತು. ಆದರೂ ನರಗುಂದಕರನ ಕಿಲ್ಲೆಯು ಮೊದಲೇ ಹೇಳಿದಂತೆ ಸುರಕ್ಷಿತವಾಗಿದ್ದ ಮೂಲಕ ಅವನ ಕಡೆಯವರು ಹೆದರಲಿಲ್ಲ. ಧೈರ್ಯದಿಂದ ಯುದ್ಧ ಮಾಡಹತ್ತಿದರು. ಕಿಲ್ಲೆಯ ಮೇಲಿಂದ ಹೊರಡುವ ಒಂದು ಗುಂಡು ಹೊರಗಿನಿಂದ ಬರುವ ಅನೇಕ ಗುಂಡುಗಳಿಗಿಂತ ಬಲವತ್ತರವಾಗಿತ್ತು; ಹೆಚ್ಚಿನ ಪರಿಣಾಮವನ್ನುಂಟು ಮಾಡುತ್ತಿತ್ತು. ಯುದ್ಧಕ್ಕೆ ಹೋಗುವವರ ಸಲುವಾಗಿ ಅನ್ನದ ರಾಶಿಯನ್ನೇ ಭಾಸ್ಕರರಾಯನು ಸಿದ್ಧಗೊಳಿಸಿ ಇಟ್ಟಿದ್ದನು. ಸಾವಿರಾರು ಜನರು ಉಂಡು ಯುದ್ಧಕ್ಕೆ ನಡೆದಿದ್ದರು. ಕಾಳಗದ ಅಂಜಿಕೆಯಿಂದ ಓಡಿಹೋಗುವ ಪ್ರಸಂಗವು ಊರವರಿಗೆ ಬರಬಾರದೆಂದೂ ಹೊರಗಿನ ಜನರು ಊರೊಳಗೆ ಪ್ರವೇಶಿಸಲು ಆಸ್ಪದವುಂಟಾಗಬಾರದೆಂದೂ ಅಗಸೆ ಬಾಗಿಲುಗಳನ್ನು ಇಕ್ಕಿಬಿಟ್ಟಿದ್ದರು.

ಕ್ರಿ. ಶ ೧೮೫೭ ನೆಯ ವರ್ಷದ ಜೂನ ತಿಂಗಳ ೧ನೆಯ ತಾರೀಖಿನ ದಿವಸ ಕರ್ನಲ್ ಮಾಲಕಮ್ ಸಾಹೇಬನು ಭಾಸ್ಕರರಾಯನೊಡನೆ ಯುದ್ಧವನ್ನು ಆರಂಭಿಸಿದನು. ಭಾಸ್ಕರರಾಯನಿಂದ ನಿಯಮಿತವಾದ ದಿವಸಕ್ಕಿಂತಲೂ ನಾಲ್ಕು ದಿವಸ ಮುಂಚಿತವಾಗಿಯೇ ಕಾಳಗವು ಆರಂಭವಾಯಿತೆಂದು ಹಿಂದೆ ಹೇಳಿದೆಯಷ್ಟೇ? ಆದುದರಿಂದ ಇತರ ಯಾವ ಸಂಸ್ಥಾನಿಕನ ಸಾಹಾಯ್ಯವೂ ಇನ್ನೂ ಬಂದಿದ್ದಿಲ್ಲ- ಹೀಗೆ ಒಮ್ಮಿಂದೊಮ್ಮೆಲೆ ಯುದ್ಧವು ಉಪಸ್ಥಿತವಾಗಿ, ನರಗುಂದಕರನ ಅಲ್ಪ ಸೈನ್ಯವೇ ಹೋರಾಡುವ ಹೊತ್ತು ಬಂತು. ಆದರೂ ಆ ಕಾಳಗವು ವರ್ಣನೀಯವೇ ಆಗಿತ್ತು. ಎಲ್ಲಿಯ ವರೆಗೆ ಉತ್ತಮಪ್ರಕಾರದ ಮದ್ದಿನ ಸಂಚಯವು

ಇತ್ತೋ ಅಲ್ಲಿಯು ವರೆಗೆ ಅವರು ಇಂಗ್ಲಿಷರ ಸೈನ್ಯವನ್ನು ಬಲವಾಗಿಯೇ ಎದುರಿಸಿದರು. ಆದರೆ ಆ ಮದ್ದು ತೀರಿದ ಬಳಿಕ ಮಾತ್ರ ದಂಡಾಳುಗಳ ಆಟವು ಸಾಗದಂತಾಯಿತು; ಸ್ವಲ್ಪ ಹೊತ್ತಿನಲ್ಲಿಯೇ ಭಾಸ್ಕರರಾಯನ ಸೋಲಿನ ಲಕ್ಷಣಗಳು ಕಾಣತೊಡಗಿದವು ಇಂಗ್ಲಿಷರ ಅಪರಮಿತವಾದ ಸೈನ್ಯದ ಭಯಂಕರವಾದ ಆಘಾತವನ್ನು, ಮದ್ದು ಗುಂಡುಗಳು ಸಹ ಇಲ್ಲದ ನರಗುಂದದ ಅಲ್ಪಸೈನ್ಯವು ಹೇಗೆ ಸಹಿಸಬೇಕು? ಕ್ಷಣಕ್ಷಣಕ್ಕೆ ಇಂಗ್ಲಿಷರ ಹೆಜ್ಜೆಯು ಮುಂದೆ ಬೀಳಹತ್ತಿತು. ನರಗುಂದಕರನ ಪರಾಭವವು ನಿಶ್ಚಿತವೆಂಬ ಲಕ್ಷಣಗಳು ಇನ್ನೂ ಸ್ಪಷ್ಟವಾಗ ತೊಡಗಿದವು.

ಭಾಸ್ಕರರಾಯನಾದರೂ ಅಲ್ಲಿಯೇ ಇದ್ದು ಜಯಾಪಜಯದ ಲಕ್ಷಣಗಳನ್ನು ನಿರೀಕ್ಷಿಸುತ್ತಲೇ ಇದ್ದನು. ತನ್ನ ದಂಡು ಸೋಲಹತ್ತಿತೆಂಬದನ್ನು ತಿಳಿದ ಕೂಡಲೆ, ಮುಂದಿನ ಪರಿಣಾಮದ ವಿಚಾರಗಳು ಅವನ ತಲೆಯಲ್ಲಿ ಬರಹತ್ತಿದವು ಆಗ ಅವನು ಆಲೋಚಿಸಿದುದೇನಂದರೆ:— "ನಾನು ಅನೇಕ ವಿಧದಿಂದ ಶತ್ರುಗಳ ವಿರುದ್ಧವಾಗಿ ನಡೆದಿದ್ದೇನೆ: ಅವರಿಗೆ ತೊಂದರೆ ಕೊಟ್ಟಿದ್ದೇನೆ; ಮತ್ತು ಹಲವು ಬಗೆಯಿಂದ ಅವರ ಮನಸ್ಸನ್ನು ನೋಯಿಸಿದ್ದೇನೆ. ಆದುದರಿಂದ ನಾನು ಪರಾಜಿತನಾಗಿ ಅವರು ಒಳಹೊಕ್ಕ ಕೂಡಲೆ ನನ್ನ ಮತ್ತು ನನ್ನ ಕುಟುಂಬದ ಜನರ ಗೋಳಾಟಕ್ಕೆ ಎಣೆಯಿಲ್ಲದಂತಾಗುವದು ಸಾಹಜಿಕವದೆ. ನನ್ನ ಹತ್ತರಿದ್ದ ಪತ್ರಗಳೆಲ್ಲವನ್ನೂ, ನಾನೀಗ ಸುಟ್ಟು ಬಿಡಲಿಕ್ಕೆಬೇಕು. ಯಾಕಂದರೆ ಉಳಿದ ಸಂಸ್ಥಾನಿಕರು ನನ್ನ ಸಹಾಯಕ್ಕೆ ಬರುತ್ತೇವೆಂದು ಬರೆದಿರುವ ಪತ್ರಗಳು ಒಂದು ವೇಳೆ ವೈರಿಯ ಕೈಯಲ್ಲಿ ಸಿಕ್ಕರೆ, ಪಾಪ! ಆ ಬಡ ಸಂಸ್ಥಾನಿಕರ ಹಾಡಾದರೂ ನನ್ನಂತೆಯೇ ಆಗುವದರಲ್ಲಿ ಸಂದೇಹವಿಲ್ಲ. ಆದುದರಿಂದ ಅವೆಲ್ಲವನ್ನೂ ನಾಶಮಾಡಲಿಕ್ಕೆ ಬೇಕು. ಮತ್ತು ಅವ್ವನನ್ನೂ ಹೆಂಡತಿಯನ್ನೂ ಕರೆದು, ಅವರಿಗೆ ನಿಜಸ್ಥಿತಿಯನ್ನು ನಿವೇದಿಸಿ ಪ್ರಾಪ್ತಕಾಲವನ್ನು ಅನುಸರಿಸಬೇಕೆಂದು ಅವರಿಗೆ ಹೇಳಿ ನಾನಾದರೂ ಶತ್ರುವಿನ ಕೈಯಲ್ಲಿ ಸಿಗದಂತೆ ಇಲ್ಲಿಂದ ಹೊರಟು ಎಲ್ಲಿಯಾದರೂ ಮಾಯವಾಗಬೇಕು."

ಹೀಗೆಂದು ನಿರ್ಧರಿಸಿ, ಭಾಸ್ಕರರಾಯನು ದಂಡಾಳುಗಳ ಅಡಿಗೆಯ ಸ್ಥಳದ ಹತ್ತರ ಬಂದನು; ಮತ್ತು ಅಲ್ಲಿದ್ದ ಬೆಂಕಿಯಲ್ಲಿ ಗುಪ್ತವಾದ ರಾಜ್ಯಕಾರಸ್ಥಾನದ ಎಲ್ಲ ಪತ್ರಗಳನ್ನೂ ಚೆಲ್ಲಿ ಸುಟ್ಟು ಬಿಟ್ಟನು ಎಲ್ಲ ಕಾಗದ ಪತ್ರಗಳೂ ಸುಟ್ಟು ಬೂದಿಯಾಗುವತನಕ ಭಾಸ್ಕರರಾಯನು ಅಲ್ಲಿಯೇ ಇದ್ದನು. ಆ ಮೇಲೆ ಸ್ವಲ್ಪ ಹೊತ್ತು ಸ್ತಬ್ಧನಾಗಿ ಏನೋ ವಿಚಾರ ಮಾಡುತ್ತ ಮತ್ತೆ ಅರಮನೆಯು ಒಳಗೆ ಹೋದನು.

ಇತ್ತ ಭಾಸ್ಕರರಾಯನ ತಾಯಿಯಾದ ಯಮುನಾಬಾಯಿಯೂ, ಹೆಂಡತಿಯಾದ ಸಾವಿತ್ರೀಬಾಯಿಯೂ ಉದ್ವಿಗ್ನರಾಗಿ ಕುಳಿತುಕೊಂಡು ದೇವರನ್ನು ಬೇಡಿಕೊಳ್ಳುತ್ತಿದ್ದರು. ಹೊರಗೆ ಯುದ್ಧ ನಡೆದ ಸಂಗತಿಯು ಅವರಿಗೆ ಗೊತ್ತಿತ್ತು. ಆದುದರಿಂದ ಅವರು ಗೆಲವು ದೊರೆಯಬೇಕೆಂದು ದೇವರಿಗೆ ಹರಕೆಗಳನ್ನು ಹಾಕುತ್ತಿದ್ದರು. ಇಷ್ಟರಲ್ಲಿ ಭಾಸ್ಕರರಾಯನು ಕಿಲ್ಲೆಗೆ ಬಂದನು. ಭಾಸ್ಕರರಾಯನ ಆಗಮನವನ್ನು ತಿಳಿದಕೂಡಲೆ ಸಾಧ್ವಿಯಾದ ಸಾವಿತ್ರಿಯು ಎದ್ದು ನಿಂತುಕೊಂಡಳು; ಮತ್ತು ತಾಯಿಯಾದ ಯಮುನಾಬಾಯಿಯು ಪ್ರೇಮಪೂರಿತವಾದ ದನಿಯಿಂದ ಮಾತನಾಡಿದಳು:— "ಮಗು, ಕಾಳಗವು ಹೇಗೆ ನಡೆದಿದೆ? ಮತ್ತು ಜಯಾಪಜಯದ ಲಕ್ಷಣವು ಹೇಗಿದೆ?" ಈ ಪ್ರಶ್ನೆಗಳನ್ನು ಕೇಳಿ ಭಾಸ್ಕರರಾಯನು ಅತ್ಯಂತ ದುಃಖದಿಂದ ಉತ್ತರಕೊಟ್ಟನು. "ಅವ್ವಾ, ನಾವು ಸೋಲುವ ಹೊತ್ತು ಬಂದಿದೆ. ಈ ಯುದ್ಧದಿಂದ ನಮ್ಮ ಉದ್ದೇಶವೇನೂ ಕೊನೆಗಾಣುವದಿಲ್ಲ. ಶತ್ರುವಿನ ಅಮಿತವಾದ ಸೈನ್ಯದ ಮುಂದೆ ನಮ್ಮ ಅಲ್ಪ ಸ್ವಲ್ಪ ಸೈನ್ಯದ ಆಟವು ಎಳ್ಳಷ್ಟಾದರೂ ನಡೆಯುವ ಹಾಗಿಲ್ಲ. ಇನ್ನು ಸ್ವಲ್ಪ ವೇಳೆಯಲ್ಲಿಯೇ ನಮ್ಮ ಆಟವು ನಿಂತು ಹೋಗುವದು. ಆದುದರಿಂದಲೇ ನಿಮಗೆ ಈ ಸಂಗತಿಯನ್ನು ಹೇಳುವದಕ್ಕಾಗಿಯೇ ನಾನೀಗ ಇಲ್ಲಿ ಬಂದಿರುವೆನು. ವೈರಿಯ ಕೈಯಲ್ಲಿ ಸಿಕ್ಕು ಅವಮಾನವನ್ನು ಸಹನಮಾಡುವದಕ್ಕಿಂತ, ಎಲ್ಲಿಯಾದರೂ ಮೋರೆ ತಪ್ಪಿಸಿ ಓಡಿ ಹೋಗುವದ ಮೇಲು. ನನಗೆ ಈ ಮಾರ್ಗವೇ ಒಳ್ಳೆಯದೆಂದು ತೋರಿದ ಮೂಲಕ ನಿಮಗೆ ತಿಳಿಸುವದಕ್ಕಾಗಿ ಬಂದೆನು. ಶತ್ರುವಿನ ಕೈಯಲ್ಲಿ ಸಿಕ್ಕ ಬಳಿಕ ನಮ್ಮ ವಿಯೋಗವಾಗುವದಂತೂ ನಿಶ್ಚಯವೇ! ಆದುದರಿಂದ ಅದಕ್ಕೂ ಮೊದಲೇ, ನಮ್ಮ ಗೌರವವನ್ನೂ ಪ್ರಾಣವನ್ನೂ ಉಳಿಸಿಕೊಂಡು, ಈಶ್ವರನು ಯಾವ ದಾರಿಯನ್ನು ತೋರಿಸುವನೋ ಅದನ್ನನುಸರಿಸಿ ಹೊರಟು ಹೋಗುವದೇ ಲೇಸೆಂದು ನನಗೆ ತೋರುತ್ತದೆ. ಭಯಂಕರವಾದ ಕಟ್ಟಡವಿಯೊಳಗಿಂದ ಹಾಯ್ದು ಹೋಗುವಾಗ ಕಾಡಮೃಗಗಳು ನಮ್ಮನ್ನು ಮುರಿದು ತಿಂದರೂ ತಿನ್ನಲಿ; ಹಗೆಗಳ ವಶರಾಗುವದಕ್ಕಿಂತಲೂ ಅದು ನನಗೆ ಮೇಲೆಂದು ತೋರುತ್ತದೆ. ನನ್ನ ಈ ತಿಳಿವಳಿಕೆಯಂತೆ ನಾನಂತೂ ಇನ್ನು ಹೊರಬೀಳುವೆನು. ನೀವಾದರೂ ನಿಮನಿಮಗೆ ಯೋಗ್ಯವೆಂದು ತೋರಿದ ಹಾದಿಯನ್ನು ಹಿಡಿಯಿರಿ. ನಿಮ್ಮ ಜೀವವನ್ನೂ, ಧರ್ಮವನ್ನೂ, ಗೌರವವನ್ನೂ ಉಳಿಸಿಕೊಳ್ಳಬೇಕೆಂಬ ಬಯಕೆ ಇದ್ದರೆ, ಈಗಿಂದೀಗಲೇ ಅರಮನೆಯನ್ನು ಬಿಟ್ಟು ಹೊರಹೊರಡಿರಿ. ಒಬ್ಬರೊಬ್ಬರ ಆಶೆಯಿಂದ ಇಲ್ಲಿಯೇ ಇರಬೇಕೆಂಬ ಹವ್ಯಾಸವು ಸದ್ಯಕ್ಕೆ ಉಪಯೋಗವಿಲ್ಲ. ವೇಳೆಯು ಬದಲಿಸಿ ಹೋಯಿತು; ಹೆಚ್ಚು ಉದ್ದವಾಗಿ ಹೇಳುತ್ತ ಕೂಡ್ರುವದಕ್ಕೆ ಸಹ ಇದು ಸಮಯವಲ್ಲ."

ಮೇಲಿನ ಮಾತುಗನ್ನು ಕೇಳಿ ಆ ಅಬಲೆಯರಿಬ್ಬರ ಮನಸ್ಸಿನ ಸ್ಥಿತಿಯೂ ಹೇಗಾಗಿರಬಹುದೆಂಬದನ್ನು ವಾಚಕರೇ ಊಹಿಸಲಿ. ಆಕಾಶವೇ ಅಕಸ್ಮಾತ್ತಾಗಿ ಆ ಸಾಧ್ವಿಯರ ಮೇಲೆ ಕಡಕೊಂಡು ಬಿದ್ದಂತಾಯಿತು. ಭಾಸ್ಕರರಾಯನ ಹೆಂಡತಿಯ ಬಾಯಿಂದಂತೂ ಒಂದಕ್ಷರವು ಕೂಡ ಹೊರ ಹೊರಡಲಿಲ್ಲ. ಪಾಪ! ಆ ಬಡ ಪ್ರಾಣಿಯು ಬಿಕ್ಕಿ ಬಿಕ್ಕಿ ಒಂದೇ ಸವನೆ ಅಳತೊಡಗಿದಳು; ಮತ್ತು ಅಸ್ಪಷ್ಟವಾದ ಕಂಪಿತ ಸ್ವರದಿಂದ “ ದೇವಾ ವೆಂಕಟೇಶಾ ! ಇಷ್ಟರಲ್ಲಿಯೇ ನಮ್ಮ ಮೇಲೆ ಇಷ್ಟೊಂದು ಸಿಟ್ಟೇಕೆ, ನಾವು ಅಂತಹ ಯಾವ ತಪ್ಪನ್ನು ಮಾಡಿದ್ದೆವು;” ಎಂಬ ಒಂದೇ ಒಂದು ಉದ್ಗಾರವನ್ನು ತೆಗೆದು, ಮುಂದಿನ ಪರಿಣಾಮದ ವಿಷಯವಾಗಿ ಆಲೋಚನೆಯನ್ನು ಮಾಡಹತ್ತಿದಳು. ಭಾಸ್ಕರರಾಯನ ತಾಯಿಯಾದರೂ ಅತ್ಯಂತ ದುಃಖಿತೆಯಾಗಿದ್ದಳು; ಆದರೂ ಅಷ್ಟರಲ್ಲಿಯೇ ಅವಳು ಆ ದುಃಗುಡವನ್ನು ತಡೆದುಕೊಂಡು, ಅಳುವದನ್ನು ಬಿಟ್ಟು ಮಾತನಾಡಿದಳು. ‘ ಮಗೂ ಬಾಬಾ, ಉಳಿದ ಸಂಸ್ಥಾನಿಕರೆಲ್ಲರೂ ನಿನಗೆ ನೆರವಾಗುವರೆಂದು ಹೇಳುತ್ತಿದ್ದೆ! ಅವರದೇನಾಯಿತು? ಅವರೆಲ್ಲರೂ ನಿನ್ನನ್ನು ಒಬ್ಬನನ್ನೇ ಮುಂದೆ ಮಾಡಿ ಮೋರೆ ತಪ್ಪಿಸಿದ್ದರಿಂದಲೇ ನಿನ್ನ ಹಾಡು ಹೀಗಾಯಿತೇನು? ನಿಜವನ್ನು ಹೇಳು. ದೇವರು ನಮಗೆ ಯಾವ ಸ್ಥಿತಿಯನ್ನು ಕೊಡುವನೋ ಅದು ಉತ್ತಮವೆಂದು ತಿಳಿದು ಅದರಲ್ಲಿಯೇ ಸಂತೋಷದಿಂದಿರವದು ನಮ್ಮ ಧರ್ಮವೇ ಆಗಿದೆ. ಆದರೂ ದಿಟವಾದ ವರ್ತಮಾನವು ಗೊತ್ತಿರಬೇಕೆಂದು ಕೇಳುತ್ತೇನೆ. ”

ಇದನ್ನು ಕೇಳಿ ಭಾಸ್ಕರರಾಯನು ಮಾತನಾಡಿದನು. “ ಅವ್ವಾ, ಅವರು ನನ್ನ ಸಾಹಾಯ್ಯಕ್ಕೆ ಒರಬೇಕಾದರೆ ಇನ್ನೂ ನಾಲ್ಕು ದಿನಗಳು ಬೇಕು. ಗೊತ್ತು ಮಾಡಿದ ದಿನಕ್ಕಿಂತಲೂ ಮೊದಲೇ ಅಕಸ್ಮಾತ್ತಾಗಿ ಯುದ್ಧವು ಆರಂಭವಾಯಿತು. ಆದದರಿಂದ ಅವರ ಆಶೆಯಂತೂ ತಪ್ಪಿಹೋಯಿತು. ಇನ್ನು ಅವರು ಬರುವ ವರೆಗೆ ನಾವು ಹೇಗಾದರೂ ಯುದ್ಧವನ್ನು ಮಾಡಬಹುದಾಗಿತ್ತು; ಆದರೆ ಆ ಕೃತಘ್ನರಾದ ನೀಚ ಸೂಳೇಮಕ್ಕಳು ಮದ್ದಿನಲ್ಲಿ ಸಗಣಿಯನ್ನು ಕಲಿಸಿ ನಿರುಪಯೋಗಿಯನ್ನಾಗಿ ಮಾಡಿದ್ದಾರೆ. ಆದುದರಿಂದ ನಮಗೆ ಎರಡನೆಯ ಉಪಾಯವೇ ಇಲ್ಲ. ಅದರಿಂದಲೇ ಇಷ್ಟೆಲ್ಲ ಅನರ್ಥವಾಯಿತು. ಆ ಕೃಷ್ಣಾಜಿ ಜೋಶಿ ಮತ್ತು ಬನ್ಯಾ ಬಾಪು ಈ ನೀಚರು ನಮ್ಮ ಅನ್ನ ತಿಂದು ನಮ್ಮ ಮೇಲೆಯೇ ತಿರುಗಿ ಬಿದ್ದರು. ಮೊದಲಿನಿಂದಲೂ ಅವರು ಇಂಗ್ಲಿಷರಿಗೆ ಅನುಕೂಲರಾಗಿ ನಮ್ಮ ಆಲೋಚನೆಗಳನ್ನೆಲ್ಲ ಅವರಿಗೆ ತಿಳಿಸಿದ್ದಾರೆ; ಮತ್ತು ನಮ್ಮ ಯುದ್ಧದ ಸಾಧನಗಳನ್ನೆಲ್ಲ ಹದಗೆಡಿಸಿ ಕೆಲಸಕ್ಕೆ ಬಾರದಂತೆ ಮಾಡಿ ಇಟ್ಟಿದ್ದಾರೆ. ಆದುದರಿಂದ ಈ ವೇಳೆಯಲ್ಲಿ ಒಬ್ಬರೊಬ್ಬರು ಇನ್ನೊಬ್ಬರ ವಿಚಾರವನ್ನು ಮಾಡುತ್ತ ಕೂಡ್ರುವದು ಉಪಯೋಗವಿಲ್ಲ. ದೇವರ ದಯೆಯಿಂದ ಯಾರಿಗೆ ಯಾವ ಹಾದಿಯು ಯುಕ್ತ

ವೆನಿಸುವದೋ, ಅದನ್ನು ಅವರು ಅವಲಂಬಿಸಬೇಕು. ಮುಖ್ಯವಾಗಿ ಗೌರವವನ್ನೂ, ಧರ್ಮವನ್ನೂ ಉಳಿಸಿಕೊಳ್ಳುವದೇ ಪ್ರತಿಯೊಬ್ಬರ ಕರ್ತವ್ಯವಾಗಿದೆ. ಅನ್ಯರ ಕೈಯಲ್ಲಿ ಸಿಕ್ಕು ಅವಮಾನವನ್ನು ಹೊಂದಿ ದೈನ್ಯ ವೃತ್ತಿಯಿಂದ ಜೀವಿಸುವದಕ್ಕಿಂತ ಓಡಿ ಹೋಗುವದೇ ಹಿತಕರವು ಆದರಂತೆ ನಾನಂತೂ ಓಡಿ ಹೋಗುವೆನು. ಆದರೆ ನಿಮ್ಮೆಲ್ಲರನ್ನು ಸಂಗಡ ಕರೆದುಕೊಂಡು ಹೋಗುವದಕ್ಕೆ ಈಗ ಕಾಲವು ಅನುಕೂಲವಿಲ್ಲ. ಆದುದರಿಂದ ನನ್ನನ್ನು ತಡೆಯಬೇಡಿರಿ. ಮತ್ತು ನೀವಾದರೂ ನಿಮಗೆ ಉಚಿತವೆಂದು ತೋರಿದ ಮಾರ್ಗವನ್ನು ಈಗಲೇ ಅನುಸರಿಸಿರಿ. ಇದಕ್ಕಿಂತಲೂ ಹೆಚ್ಚಾಗಿ ನಾನು ಏನನ್ನೂ ಹೇಳಲಾರೆನು; ಮತ್ತು ಇನ್ನು ಹೆಚ್ಚಾಗಿ ಮಾತಾಡುತ್ತ ಕೂಡ್ರಲು ಸದ್ಯಕ್ಕೆ ವೇಳೆಯೂ ಇಲ್ಲವೇ ಇಲ್ಲ. ಅರಮನೆಯ ಹೊರಗೆ ಜನರು ಹಾದಿ ನೋಡುತ್ತ ಕುಳಿತ್ತಿದ್ದಾರೆ. ಅವ್ವಾ, ನೀನು ಇಷ್ಟನ್ನಾದರೂ ಮಾಡು. ನೀನೂ ಈಕೆಯೂ ಕೂಡಿ ಈಗಿಂದೀಗಲೇ ಹೊರಬೀಳಿರಿ; ಮತ್ತು ದೇವರನ್ನು ನೆನೆಸುತ್ತ ನಿಮಗೆ ಯೋಗ್ಯವೆಂದು ತೋರಿದ ದಾರಿಯನ್ನು ಹಿಡಿಯಿರಿ. ನೀವು ನಮ್ಮ ಮನೆತನದ ಹೆಂಗಸರಾದುದರಿಂದ ಹೆಚ್ಚಾಗಿ ಹೇಳಬೇಕಾದದೇನು? ಮಾನವೇ ನಮ್ಮ ಧನವು. ಹೀಗೆಯೇ ಚಿಂತೆಮಾಡುತ್ತ ಕುಳಿತಿರೆಂದರೆ, ವೈರಿಯ ಕೈಯಲ್ಲಿ ಸಿಕ್ಕು ಅಪಮಾನಕ್ಕೂ ನಿಂದೆಗೂ ಗುರಿಯಾಗುವಿರಿ. ಆದುದರಿಂದ ಇನ್ನೂ ಒಮ್ಮೆ ನಾನು ನಿಮಗೆ ಸಾರಿ ಸಾರಿ ಹೇಳುವದೇನಂದರೆ:— ಈಗ ನಾವು, ನಮ್ಮ ಆಪ್ತರು, ನಮ್ಮ ಇಷ್ಟರು, ನಮ್ಮ ಹೊಲ ಮನೆ ಬಂಧು ಬಳಗ ಈ ತರದ ಮಮತೆಯನ್ನು ಸಂಪೂರ್ಣವಾಗಿ ಬಿಟ್ಟುಬಿಡಿರಿ. ಮತ್ತು ದೇವರ ಧ್ಯಾನಮಾಡುತ್ತ ಹೊರಹೊರಡಿರಿ. ಅವ್ವಾ, ಇದೇ ನಿನಗೆ ನನ್ನ ಈ ಕಡೆಯ ನಮಸ್ಕಾರವು. ಆದುದರಿಂದ ನನಗೆ ಕಲ್ಯಾಣಕರವಾದ ಆಶೀರ್ವಾದವನ್ನು ಕೊಟ್ಟು ಇವಳನ್ನು ಸಂಗಡ ಕರಕೊಂಡು ನೀನು ಬೇಕಾದಲ್ಲಿ ಹೊರಟು ಹೋಗು. ಮತ್ತು ನನಗಾದರೂ ಬೇಗ ಅಪ್ಪಣೆಕೊಡು.

ಹೀಗೆ ಹೇಳಿ ಭಾಸ್ಕರರಾಯನು ತನ್ನ ಪೂಜ್ಯ ಮಾತೆಯ ಪಾದಾರವಿಂದಗಳಲ್ಲಿ ಮಸ್ತಕವನ್ನಿಟ್ಟನು. ಆ ಕಾಲಕ್ಕೆ ಯಮುನಾಬಾಯಿಯ ಕುತ್ತಿಗೆಯು ಬಿಗಿಯಿತು. ನರಗಳು ಉಬ್ಬಿ ನಿಂತವು; ಬಾಯಿಂದ ಅಕ್ಷರಗಳು ಹೊರಡದಂತಾದವು. ಹೊಟ್ಟೆಯಲ್ಲಿ ತುಂಬಿದ ದುಃಖವು ಹಿಡಿಸಲಾರದೆ ಕಣ್ಣೀರುಗಳ ರೂಪದಿಂದ ಒಂದೇ ಸವನೆ ಪ್ರವಹಿಸುತ್ತಿತ್ತು. ಕಾಲುಗಳ ಮೇಲೆ ತಲೆಯನ್ನಿಟ್ಟ ಮಗನನ್ನು ಎಬ್ಬಿಸಿ ಮಮತೆಯಿಂದ ಎದೆಗವಚಿಕೊಂಡಳು. ಮತ್ತು ಆತನ ಮಸ್ತಕವನ್ನು ಆಘ್ರಾಣಿಸಿ ಕೊನೆಯಲ್ಲಿ ಆ ವೀರಮಾತೆಯು ನಿರುಪಾಯವಾಗಿ ಮಾತಾಡತೊಡಗಿದಳು:— “ಮಗುವೇ, ಹೊರಡು. ವೆಂಕಟೇಶ ದೇವರು ನಿನಗೆ ಕಲ್ಯಾಣ ಮಾಡಲಿ. ನಮಗಾದರೂ ಇನ್ನು ಅವನೇ ದಾರಿಯನ್ನು ತೋರಿಸಬೇಕು. ನೀನು ಇಲ್ಲಿಂದ

ಹೊರಟಿಯೆಂದರೆ. ಅಬಲೆಯರಾದ ನಮ್ಮನ್ನು ಅವನ ಹೊರತು ಯಾರು ಸಲುಹ ಬೇಕು? ಆವನೇ ನಮಗೆ ಸರಿಯಾದ ದಾರಿಯನ್ನು ತೋರಿಸಿ ನಮ್ಮ ಮಾನವ ನ್ನೂ ಧನವನ್ನೂ ಉಳಿಸಲಿ. ಈಗ ನಿನಗೆ ಪ್ರತಿಬಂಧವನ್ನುಂಟು ಮಾಡಿ ಎಲ್ಲರಿ ಗೂ ಬಿಕ್ಕಟ್ಟಿನ ಪ್ರಸಂಗವನ್ನುಂಟುಮಾಡುವದು ನನಗೆ ಸರಿದೋರುವದಿಲ್ಲ. ನೀನು ಇಲ್ಲಿಂದ ಹೊರಟಕೂಡಲೇ ನಾವೂ ಹೊರಡುವೆವು.

ವಾಚಕರೇ ಎಷ್ಟಾದರೂ ಅದು ತಾಯಿಯ ಕರುಳು. ಯಮುನಾಬಾಯಿ ಯು 'ಹೊರಡೆಂದು' ಭಾಸ್ಕರರಾಯನಿಗೆ ಹೇಳಿದ್ದೇನೋ ನಿಜ. ಆದರೆ ಅಪ್ಪಿಕೊಂಡ ಮಗನನ್ನು ಬಿಡುವದು ಅವಳಿಂದಾಗಲಿಲ್ಲ. ಕಣ್ಣೀರುಗಳು ಒಂದೇ ಸಮನೆ ಸುರಿಯುತ್ತಿದ್ದವು. ಆದರೂ ಆ ವೀರಮಾತೆಯು, ಇನ್ನು ಮುಂದೆ ಏನು ಮಾಡಬೇಕು. ? ನಮ್ಮ ಪರಿಣಾಮವೇನಾಗಬಹುದು ? ಎಂಬುದಾಗಿ ಆಲೋ ಚಿಸುತ್ತಲೇ ಇದ್ದಳು. ಇಷ್ಟರಲ್ಲಿ ಭಾಸ್ಕರರಾಯನು ಆವಳ ಅಪ್ಪಿನೊಳಗಿಂದ ಹೊ ರಬಿದ್ದನು ಮತ್ತು "ಅವ್ವಾ, ಇನ್ನು ಮೇಲೆ ನಿನಗೆ ಹೆಚ್ಚಾಗಿ ಹೇಳಬೇಕಾ ದ್ದೇನೂ ಉಳಿದಿಲ್ಲ. ಇನ್ನು ನಾನು ಹೊರಡುವೆನು. ನೀವಿಬ್ಬರೂ ಇಲ್ಲಿ ಕಾ ಲಕಳೆಯದೆ ಆದಷ್ಟು ಬೇಗನೆ ಹಾದಿಯನ್ನು ಹಿಡಿದರೇ ನಿಮ್ಮ ಮಾನವು ಉಳಿಯು ವದು." ಎಂದು ಹೇಳಿ ಹೊರಡಲನುವಾದನು. ಇಷ್ಟರಲ್ಲಿಯೇ ಇದು ಕಟ್ಟಕ ಡೆಯ ಸಮಯವೆಂದು, ಇಲ್ಲಿಯವರೆಗೆ ಸುಮ್ಮನಿದ್ದ ಸಾಧ್ವಿಯಾದ ಸಾವಿತ್ರೀಬಾ ಯಿಯು ಪ್ರಿಯಪತಿಯ ಕಂಠವನ್ನು ಆಲಿಂಗಿಸಿದಳು, ಮತ್ತು ದೊಡ್ಡ ದನಿಯಿಂದ ಅಳಹತ್ತಿದಳು. ಆ ಕಾಲದಲ್ಲಿ ಮಾತ್ರ ಭಾಸ್ಕರರಾಯನ ಧೈರ್ಯವು ಒಂದು ಕ್ಷಣ ಹೊತ್ತಾದರೂ ಸಂಪೂರ್ಣವಾಗಿ ಹೊರಟು ಹೋಯಿತು. ಏನುಮಾಡ ಬೇಕೆಂಬುದು ಆವನಿಗೆ ತಿಳಿಯದಂತಾಯಿತು! ಸ್ವಲ್ಪ ಕಾಲ ಸ್ತಬ್ಧನಾಗಿದ್ದು ಆ ಮೇಲೆ ಎಲ್ಲವನ್ನೂ ಆವರಿಸಿಕೊಂಡು ಆಧೀರಾಗ್ರಣಿಯು ಮಾತಾಡಿದನು "ಪ್ರಿಯೇ, ಏನಿದು ? ಹೀಗೇಕೆ ಮಾಡುತ್ತೀ ? ನೀನು ಹೀಗೆ ಮಾಡಹತ್ತಿದೆ ಯೆಂದರೆ ನಾನು ಒಂದು ಹೆಜ್ಜೆಯನ್ನಾದರೂ ಮುಂದೆ ಇಡಬಲ್ಲೆನೇನ? ಒಳ್ಳೇ ದು ಇಲ್ಲಿಂದ ಹೊರಡದೆ ಇಲ್ಲಿಯೇ ನಿಂತುಕೊಂಡೆನೆಂದರೆ ಎಲ್ಲರೂ ಶತ್ರುಗಳ ಕೈಗೆ ಸಿಕ್ಕ ಅಪಮಾನಕ್ಕೆ ಈಡಾಗುವೆವು! ಅಂತಹ ಸ್ಥಿತಿಯು ಉಂಟಾಗಬಾರ ದೆಂದು ಎಚ್ಚರಿಸುವದಕ್ಕಾಗಿಯೇ ನಾನಿಲ್ಲಿಗೆ ಬಂದೆನು. ಹೀಗಿದ್ದು ನೀನು ಈ ಪ್ರಕಾರ ಮಾಡಿದರೆ ನಾನೇನು ಹೇಳಲಿ? ಇಂತಹ ಬಿಕ್ಕಟ್ಟಿನ ಪ್ರಸಂಗದಲ್ಲಿ 'ಏನು ಮಾಡಬೇಕು?' ಎಂದು ನಿನ್ನಷ್ಟಕ್ಕೆ ನೀನೇ ವಿಚಾರ ಮಾಡಿನೋಡು. ಅಂದರೆ 'ಒಬ್ಬರನ್ನೊಬ್ಬರು ಆಗಲಿಹೋಗುವದೇ ಒಳ್ಳೆಯದು' ಎಂದು ನಿನಗೆ ತಿಳಿಯದಿರಲಾರದು. ಆದುದರಿಂದ ಹೀಗೆ ಹುಚ್ಚಿಯ ಹಾಗೆ ಮಾಡಬೇಡ. ನನಗೆ ಅಪ್ಪಣೆಕೊಡು. ಮತ್ತು ಅವ್ವನು ಹೇಗೆ ಹೇಳುತ್ತಾಳೋ, ಹಾಗೆ ಕೇಳಿಕೊಂಡು

ಅವಳೊಡನೆ ಸಂಕಟದೊಳಗಿಂದ ಪಾರಾಗಿ ಹೋಗುವ ಮಾರ್ಗವನ್ನು ಹಿಡಿ. ನೀನೂ ತಿಳಿದವಳು. ಆದುದರಿಂದ ನಿನಗಾದರೂ ಇದಕ್ಕೂ ಹೆಚ್ಚಾಗಿ ನಾನೇನು ಹೇಳಲಿ? " ಹೀಗೆಂದು ಭಾಸ್ಕರರಾಯನು ಪತ್ನಿಯ ತೆಕ್ಕೆಯೊಳಗಿಂದ ಹೊರಗೆ ಬರಬೇಕೆಂದು ನೋಡಿದನು ಆದರೆ ಆ ಆಶ್ಲೇಷಕ್ಕೆ ಪ್ರೇಮಬಂಧನವಿತ್ತು. ಕಬ್ಬಿಣದ ಸಳಿಗಳನ್ನು ಕೂಡ ಹರಿದು ಹಾಕುವ ಭಾಸ್ಕರರಾಯನು ಪ್ರೇಮಬಂಧನದಿಂದ ಮಾತ್ರ ಬಿಡಿಸಿಕೊಳ್ಳಲು ಶಕ್ತನಾಗಲಿಲ್ಲ. ಸಾವಿತ್ರೀಬಾಯಿಯು ಮೊದಲಿನಂತೆಯೇ ಗಂಡನನ್ನು ಗಟ್ಟಿಯಾಗಿ ಅಪ್ಪಿಕೊಂಡು ಶೋಕವಿವ್ಹಲಸ್ವರದಿಂದ ಮಾತನಾಡಿದಳು. " ಮೊದಲು ತಮ್ಮ ಕೈಯಿಂದಲೇ ನನಗೆ ಸ್ವರ್ಗವನ್ನು ಕೊಡಿಸಿರಿ. ಆ ಮೇಲೆ ತಾವು ಬೇಕಾದಲ್ಲಿ ಹೊರಡಿರಿ. ಇಲ್ಲವಾದರೆ ತಾವು ಯಾವ ಕಡೆಗೆ ಹೋಗುವಿರೋ ಅಲ್ಲಿ ದಾಸಿಯಾದ ನಾನೂ ಬರುವೆನು. ಅನುಮತಿಯನ್ನಾದರೂ ದಯಪಾಲಿಸಿರಿ. " ವಾಚಕರೇ ನೋಡಿದಿರಾ, ಸ್ಥಿತಿಯನ್ನು! ಆಡಿದ ಮಾತುಗಳೇನೋ ಎರಡೇ! ಆದರೂ ಕಜ್ಜೆದೆಯವನಾದ ಭಾಸ್ಕರರಾಯನ ಹೃದಯವು ಆ ಎರಡೇ ಎರಡು ಮಾತುಗಳಿಂದ ಕರಗಿ ನೀರಾಯಿತು. ಇತ್ತ ಸಾವಿತ್ರೀಬಾಯಿಯ ಕಣ್ಣೀರುಗಳಿಂದ ಅವನ ಸರ್ವಾಂಗಕ್ಕೂ ಸ್ನಾನವಾಗುತ್ತಲೇ ಇತ್ತು. ಆದರೂ ಆ ವೀರ ಶಿರೋಮಣಿಯು ಪ್ರಸಂಗವನ್ನು ನೆನೆಸಿಕೊಂಡು ಸಾವಧಾನದಿಂದ ಮಾತನಾಡಿದನು. " ಎಲೈ ಪ್ರಿಯೇ, ಹೀಗೆ ಶೋಕಮಾಡಲಿಕ್ಕೆ ನೀನೇನು ತೀರ ಸಾಮಾನ್ಯಳೇ? ವೀರಕನ್ಯೆಯೂ ವೀರಪತ್ನಿಯೂ ಆದ ನಿನ್ನಂಥವರು ಎಂದೂ ಶೋಕ ಮಾಡುವದಿಲ್ಲ. ಪ್ರಸಂಗಾವಧಾನದಿಂದ ನಡೆದು ಪ್ರಾಪ್ತಸಂಕಟವನ್ನು ಪರಿಹರಿಸಿಕೊಳ್ಳುವರು. ದೇವರ ದಯೆಯಿದ್ದರೆ ನಾವೆಲ್ಲರೂ ಪುನಃ ಒಂದೇ ಸ್ಥಳದಲ್ಲಿ ಕೂಡಬಹುದು, ಎಲ್ಲರೂ ಕೂಡಿ ಆನಂದದಿಂದ ಕಾಲಕಳೆಯುವ ವೇಳೆಯು ಬರಬಹುದು. " ಇಷ್ಟರಲ್ಲಿ ಸಾವಿತ್ರೀಬಾಯಿಯು ಮತ್ತೆ ಮಾತನಾಡಿದಳು. " ತಮಗೆ ನಾನು ಎಷ್ಟು ಸಾರೆ ಹೇಳಿಕೊಳ್ಳಲಿ. ನಿಮ್ಮ ಉಪದೇಶವು ನನ್ನನ್ನು ವಿರಹಾಗ್ನಿಯಲ್ಲಿ ನೂಕುತ್ತದೆ. ಆದುದರಿಂದ ಅದನ್ನು ನಾನೊಲ್ಲೆನು, ತಮ್ಮ ಮೇಲೆ ದೇವರು ಇಂತಹ ದುರ್ಘಟವನ್ನು ತಂದಿದ್ದಾನೆ ಆದದರಿಂದ ನಮ್ಮನ್ನು ಗೊತ್ತಿಗೆ ಹಚ್ಚಿ ಹೋದರೆ ಒಂದು ರೀತಿಯಿಂದ ನೀವೂ ನಿಶ್ಚಿಂತರಾಗುವಿರಿ, ಆ ಮೇಲೆ 'ನನ್ನವರ ಗತಿಯು ಏನಾಗಬಹುದು?' ಎಂದು ಚಿಂತೆಮಾಡುವ ಕಾರಣವೂ ಉಳಿಯುವದಿಲ್ಲ. ವಿಯೋಗಾಗ್ನಿಯಲ್ಲಿ ಉರಿಯುತ್ತ ನಿಂತುಕೊಳ್ಳುವದಕ್ಕಿಂತ, ನನಗಂತೂ ಮರಣವು ಸಾವಿರ ಪಾಲು ಒಳ್ಳೆಯದು. "

ಈ ಮಾತುಗಳನ್ನು ಕೇಳಿ ಭಾಸ್ಕರರಾಯನು ಮತ್ತೆ ಧೈರ್ಯಗಲಿತನಾದನು. ಯಾವ ರೀತಿಯಿಂದ ಅವಳನ್ನು ಸಮಾಧಾನಗೊಳಿಸಬೇಕೆಂಬುದು ಅವನಿಗೆ ತಿಳಿ

ಯುದಾಯಿತು. ಅವನ ತಾಯಿಯಾದರೂ ಶೋಕವಿಹ್ವಲೆಯಾಗಿ, ಆ ಕರುಣರಸಪೂರ್ಣವಾದ ದೃಶ್ಯದ ಕಡೆಗೆ ಎವೆಯಿಕ್ಕದ ದೃಷ್ಟಿಯನ್ನಿಟ್ಟು ಸ್ತಬ್ಧವಾಗಿ ನಿಂತುಕೊಂಡಿದ್ದಳು ಆಕೆಯ ಕಣ್ಣೊಳಗಿಂದ ಧಾರಾಪ್ರವಾಹವು ಅವಿಚ್ಛಿನ್ನವಾಗಿ ನಡೆದೇ ಇತ್ತು. ಈ ಪ್ರಕಾರ ಮೂವರ ಮನಃಸ್ಥಿತಿಯೂ ಅತ್ಯಂತ ಉದಾಸವಾಗಿದ್ದವು. ಆಗ ಮೂವರೂ ಕ್ಷಣಕಾಲ ಸ್ತಬ್ಧರಾದರು. ಆದರೆ ಸ್ತಬ್ಧತೆಯು ಕೇವಲ ಒಂದೇ ಒಂದು ಕ್ಷಣಕಾಲವಿತ್ತು. ಸಾವಿತ್ರೀಬಾಯಿಯು ದುಃಖದ ಒಂದು ದೀರ್ಘವಾದ ನಿಶ್ವಾಸವನ್ನು ಬಿಟ್ಟು ಮಾತನಾಡಿದಳು. “ಇಷ್ಟೊಂದು ವಿಚಾರ ಮಾಡಲಿಕ್ಕೆ ಇದರಲ್ಲೇನಿದೆ? ಹಿಂದಕ್ಕೆ ಒಬ್ಬ ಬ್ರಾಹ್ಮಣನು ಬಂದಾಗ, ರಜಪೂತರ ‘ಜೋಹಾರ’ದ ಕಥೆಯನ್ನು ಹೇಳಿದ್ದನಲ್ಲವೇ? ಅದು ತಮ್ಮ ನೆನಪಿನಲ್ಲಿರಬಹುದು. ಆ ರಣಶೂರರು ತಾವು ಜೀವದಿಂದಿರುವಾಗಲೇ ತಮ್ಮ ಹೆಂಡರು ಮಕ್ಕಳ ವ್ಯವಸ್ಥೆಯನ್ನು ಹೇಗೆ ಮಾಡುತ್ತಿದ್ದರೋ’ ಅದರಂತೆಯೇ ತಾವಾದರೂ ಯಾಕೆ ಮಾಡಬಾರದು?”

ಹೆಂಡತಿಯ ಬಾಯಿಂದ ಹೊರಟ ವೀರಶ್ರೀಯಿಂದ ಕೂಡಿದ ಮೇಲಿನ ಮಾತುಗಳನ್ನು ಕೇಳಿ ಭಾಸ್ಕರರಾಯನ ಮೈಮೇಲೆ ರೋಮಾಂಚಗಳೆದ್ದವು. ಆಗ ಅವನು ಹೆಂಡತಿಯನ್ನು ಕುರಿತು ಹೀಗೆ ಹೇಳಿದನು. “ಪ್ರಿಯೇ, ಇದನ್ನು ನನಗೇನು ಕಲಿಸುತ್ತೀ? ಈ ವಿಷಯದಲ್ಲಿ ಏನಾದರೂ ಸ್ವಲ್ಪ ವಿಚಾರ ಮಾಡಿರುವಿಯಾ? ಆ ನಿರ್ದಯರಾದ ರಜಪೂತರು ತಮ್ಮ ಹೆಂಡರು ಮಕ್ಕಳನ್ನೆಲ್ಲ ದೊಡ್ಡದೊಂದು ಚಿತೆಯಲ್ಲಿ ಹಾಕಿ ಕೊಂದು, ಸೂತಕದ ಹಳದೀ ಬಟ್ಟೆಗಳನ್ನುಟ್ಟುಕೊಂಡು, ಕೇವಲ ಸಾಯುವದಕ್ಕಾಗಿಯೇ ಸಮರಾಂಗಣಕ್ಕೆ ಹೋಗುತ್ತಿದ್ದರು. ಅಂತಹ ಸ್ಥಿತಿಯು ನಮ್ಮದಿಲ್ಲ; ಮತ್ತು ನಾವು ಅಷ್ಟು ನಿರ್ದಯರೂ ಅಲ್ಲ. ಇಲ್ಲಿಂದ ಓಡಿಹೋದಬಳಿಕ ಮತ್ತೆ ನಾವು ಒಳ್ಳೆಯ ದಿವಸಗಳನ್ನು ಕಂಡೇ ಕಾಣುವೆವೆಂಬುದನ್ನು ಖಂಡಿತವಾಗಿ ಹೇಳಲಾಗುವದಿಲ್ಲೆಂಬುದೇನೋ ನಿಜ, ಆದರೂ ಅವರಂತಹ ಕಾಟಕತನವು ನಮ್ಮಿಂದಾಗದು. ನಾವು ಕೋಮಲ ಮನಸ್ಸಿನ ಬ್ರಾಹ್ಮಣರು. ಆದುದರಿಂದ ಕೇವಲ ಯುಕ್ತಿಯಿಂದ ಸಾಧಿಸಬಹುದಾದ ಕೆಲಸಗಳು ಮಾತ್ರ ನಮ್ಮಿಂದಾಗುವವು. ರಜಪೂತರಂತೆ ಘೋರಕರ್ಮಗಳನ್ನು ಮಾಡಿ ನಾನೇನು ಮಾಡಲಿ? ಛೀ, ಅದು ನನ್ನಿಂದ ಎಂದೂ ಆಗದು. ಪ್ರಿಯೇ, ನೀನು ವಿಚಾರಶೀಲೆಯಾಗಿದ್ದೀ. ಆದುದರಿಂದ ಚೆನ್ನಾಗಿ ವಿಚಾರಮಾಡು. ಮತ್ತು ನಾನು ಹೋಗುವವಕ್ಕೆ ಅನುಮತಿಯನ್ನು ಕೊಡು. ನಿನ್ನನ್ನು ದುಃಖಸಮುದ್ರದಲ್ಲಿ ನೂಕಲಿಕ್ಕೂ, ಅಗಲಿ ಹೋಗಲಿಕ್ಕೂ ನನ್ನ ಮನಸ್ಸಿಲ್ಲ. ಆದರೂ ಹಾಗೆ ಮಾಡಿದ ಹೊರತು ಗತ್ಯಂತರವಿಲ್ಲ. ಆದುದರಿಂದ ಈಗ ನಾವು ವಿಯೋಗದುಃಖವನ್ನು ಅನುಭವಿಸಲೇಬೇಕು. ನೀನು ಹೀಗೆಯೇ ದುಃಖಿಸುತ್ತ ಹೆಚ್ಚು ಹೆಚ್ಚು

ವೇಳೆಯನ್ನು ಇಲ್ಲಿಯೇ ಕಳೆಯ ಹಚ್ಚಿದೆಯೆಂದರೆ' ಈಗಿಂದೀಗಲೇ ಎಂತಹ ಪ್ರಸಂಗವು ಬರಬಹುದೋ ಏನೋ ಹೇಳಲಾಗುವದಿಲ್ಲ. ಮದ್ದು ಗುಂಡುಗಳೆಲ್ಲ ತೀರಿಹೋಗಿರುವದರಿಂದ ನಮ್ಮ ಸೈನಿಕರು ಕೈಸಾಗದೆ ತಳಮಳಿಸುತ್ತಿದ್ದಾರೆ; ಮತ್ತು ಶತ್ರುಗಳು ಆವೇಶದಿಂದಲೂ, ವೇಗದಿಂದಲೂ ಒಂದೊಂದು ಹೆಜ್ಜೆ ಮುಂದೆ ಬರತೊಡಗಿದ್ದಾರೆ. ಅವರು ಒಳಗೆ ಬರುವದರೊಳಗಾಗಿಯೇ ನಾವು ಓಡಿಹೋಗಲಿಕ್ಕೆ ಬೇಕು. ಒಮ್ಮೆ ಅವರು ಒಳ ಹೊಕ್ಕು ಎಲ್ಲ ದ್ವಾರಗಳಲ್ಲಿಯೂ ತಮ್ಮ ಸೈನ್ಯವನ್ನಿಟ್ಟರೆಂದರೆ, ಮುಂದೆ ಅದಕ್ಕೂ ಅವಕಾಶವು ದೊರೆಯದೆ ಹೋಗುವದು. ಆದುದರಿಂದ ಇನ್ನು ಮೇಲೆ ನನ್ನನ್ನು ಇಲ್ಲಿ ತಡೆಯುವಂತಹ ಯಾವ ಮಾತನ್ನೂ ಆಡಬೇಡ." ಹೀಗೆಂದು ಅವನು ಪತ್ನಿಯ ಬಾಹುಪಾಶದಿಂದ ಬಿಡುಗಡೆ ಹೊಂದಿ ಹೊರಡುವ ಆಲೋಚನೆಯಲ್ಲಿದ್ದನು; ಇಷ್ಟರಲ್ಲಿಯೇ ಸಾವಿತ್ರೀಬಾಯಿಯು ಮೂರ್ಛಿತೆಯಾಗಿ ದೊಪ್ಪನೆ ಭೂಮಿಯ ಮೇಲೆ ಬಿದ್ದಳು ಆಗ ಭಾಸ್ಕರರಾಯನು ಹೊರಟು ಹೋಗಬೇಕೆಂಬ ದೃಢನಿಶ್ಚಯವನ್ನು ಮಾಡಿದ್ದದೇನೋ ನಿಜ; ಆದರೂ ಹೆಂಡತಿಯ ಆ ಅವ್ಯವಸ್ಥೆಯನ್ನು ನೋಡಿ ಅವನ ಕಾಲುಗಳೇ ಮುಂದಕ್ಕೆ ಚಲಿಸಲಿಲ್ಲ. ಎಚ್ಚರತಪ್ಪಿ ಬಿದ್ದಿರುವ ಧರ್ಮಪತ್ನಿಯನ್ನು ನೋಡುತ್ತ ಚಿತ್ರದೊಳಗಿನ ಗೊಂಬೆಯಂತೆ ಭಾಸ್ಕರರಾಯನು ನಿಶ್ಚಲನಾಗಿ ನಿಂತನು. ಈ ಅವಧಿಯಲ್ಲಿ ಯಮುನಾಬಾಯಿಯು ಸಾವಧಾನದಿಂದ ಸಾವಿತ್ರೀಯ ಕಣ್ಣಿಗೆ ನೀರು ಹಚ್ಚಿ ಎಚ್ಚರಿಸಿ ಸಮಾಧಾನಪಡಿಸಹತ್ತಿದಳು. ಸಾವಿತ್ರೀಬಾಯಿಯು ಎಚ್ಚತ್ತಕೂಡಲೆ ತನ್ನಿಂದ ದೂರದಲ್ಲಿದ್ದ ಪತಿಯನ್ನು ನೋಡಿ "ಕೊನೆಗೆ ನನ್ನನ್ನಗಲಿ ಹೊರಡುವದನ್ನೇ ನಿಶ್ಚಯಿಸಿದ್ದಾರೆ!" ಎಂಬ ಉದ್ಗಾರವನ್ನು ತೆಗೆದಳು; ಕೂಡಲೇ ಅವಳ ಕಣ್ಣುಗಳು ಮತ್ತೆ ಬೆಳ್ಳಗಾದುವು. ಆಗ ಭಾಸ್ಕರರಾಯನು ಅವಳ ಹತ್ತಿರ ಹೋಗಿ, ಪ್ರೇಮಪೂರ್ಣವಾದ ತನ್ನ ಕರಸ್ಪರ್ಶದಿಂದ ಅವಳನ್ನು ಸಮಾಧಾನಪಡಿಸುತ್ತ ಮಾತನಾಡಿದನು. "ಪ್ರೀಯೇ, ನಿನ್ನ ಕಣ್ಣೆದುರಿಗೆ ನಮ್ಮೆಲ್ಲರ ಅವಮಾನವಾಗಬೇಕೆಂದು ನಿನ್ನ ಮನಸ್ಸಿನಲ್ಲಿದ್ದಂತೆ ತೋರುತ್ತದೆ ಹಾಗಿಲ್ಲದಿದ್ದರೆ ನೀನು ಹೀಗೇಕೆ ಹುಚ್ಚತನವನ್ನು ಮಾಡುತ್ತಿದ್ದೆ? ನೀನು ಮೂರ್ಛಿತೆಯಾಗಿ ಬಿದ್ದಿರುವಾಗ ನಾನು ಇಲ್ಲಿಂದ ಹೋಗಬಲ್ಲೆನೆಂದು ನೀನು ತಿಳಿಯುತ್ತಿಯೊ?" ಸಾವಿತ್ರೀಬಾಯಿಯು ಕೂಡಲೇ ಮಾತನಾಡಿದಳು "ಹಾಗಾದರೆ ನನ್ನನ್ನೂ ತಮ್ಮ ಸಂಗಡ ಕರೆದುಕೊಂಡು ನಡೆಯಿರಿ. ಎಷ್ಟೇ ಎಡರುಗಳು ದಾರಿಯಲ್ಲಿ ಒದಗಿದರೂ ನಾನು ಅವುಗಳನ್ನು ಸಂತೋಷದಿಂದ ಅನುಭವಿಸುವೆನು. ಆದರೆ ತಮ್ಮ ವಿಯೋಗವನ್ನು ಸಹಿಸುವ ಧೈರ್ಯವು ಮಾತ್ರ ನನಗೆ ಇಲ್ಲ.'

ಸೊಸೆಯ ಮಾತುಗಳನ್ನು ಕೇಳಿ ಯಮುನಾಬಾಯಿಯು ಮಾತಾಡಿದಳು:— 'ಮಗು ಹೀಗೆ ಹಟಹಿಡಿದು ಅವನನ್ನು ತಡೆಯುವದಕ್ಕೆ ಇದು ಯೋಗ್ಯ ಸಮಯವಲ್ಲ. ಅವನನ್ನು ಬಿಡು. ದೇವರ ದಯೆಯಿಂದ ಮತ್ತೆ ನಮ್ಮೆಲ್ಲರ

ಭೆಟ್ಟಿಯು ಎಂದು ಆಗುವದೋ ಅದೇ ಸುದಿನವೆಂದು ತಿಳಿಯೋಣ. ಈ ಕಾಲದಲ್ಲಿ ನಾವು ಧೈರ್ಯದಿಂದ ನಡೆದರೆ, ಎರಡೂ ಕುಲದ ಮರ್ಯಾದೆಯು ಉಳಿಯುವದು. ಈಗ ನೀನು ಹೀಗೆ ಕಾಲವಿಲಂಬ ಮಾಡಿ ಅವನನ್ನು ಹೋಗಗೊಡದಿದ್ದರೆ ಶತ್ರುಗಳು ಬಂದು ನಮ್ಮೆಲ್ಲರನ್ನು ಸೆರೆಹಿಡಿಯುವರು. ಆಗ ಪ್ರತಿಯೊಬ್ಬರು ಪರಸ್ಪರರ ಅವಮಾನವನ್ನು ಕಣ್ಣಿಟ್ಟು ನೋಡಿ ನೋಡಿ ಸಹಿಸಬೇಕಾಗುವ ಪ್ರಸಂಗವು ಬರಬಹುದು. ಆ ದುಃಖವು ಹೆಚ್ಚಿನದೋ ವಿರಹ ದುಃಖವು ಹೆಚ್ಚಿನದೋ? ಚೆನ್ನಾಗಿ ವಿಚಾರ ಮಾಡು. ಅವನನ್ನು ಹೋಗಗೊಡು. ದೇವರು ಸಂಕಟವನ್ನು ಕೊಟ್ಟಿದ್ದಾನೆ. ಅಂದಮೇಲೆ ಅದನ್ನು ಅನುಭವಿಸಲೇಬೇಕು- ಇಲ್ಲವೆಂದರೆ ಹೇಗೆ ನಡೆದೀತು? ಆದುದರಿಂದ ಅವನು ಹೋಗಲಿ ಬಿಡು.

ಭಾಸ್ಕರರಾಯ:— ಪ್ರಿಯೆ, ನಿಜವಾಗಿಯೂ ಹೇಳುತ್ತೇನೆ. ಈ ವೇಳೆಯಲ್ಲಿ ಅಪ್ಪನು ಹೇಳುತ್ತಿರುವ ಮಾತುಗಳನ್ನು ನೀನು ಕೇಳು.

ಕೊನೆಗೆ ಆ ಸಾಧ್ವಿಯು ಕೈಯನ್ನು ಸಡಿಲಿಸಿದಳು. ಮತ್ತು ಪ್ರಾಣಪ್ರಿಯನ ಪಾದಗಳಿಗೆ ನಮಸ್ಕಾರ ಮಾಡಿ ಹೀಗೆ ನುಡಿದಳು. "ದೇವತೆಗಳು ಬ್ರಾಹ್ಮಣರು ಮತ್ತು ಅಗ್ನಿ ಇವರೆಲ್ಲರ ಸಾಕ್ಷಿಯಿಂದ ನನ್ನನ್ನು ನನ್ನ ತಂದೆತಾಯಿಗಳು ನಿಮಗೆ ಒಪ್ಪಿಸಿದ್ದರು; ಮತ್ತು ಇಂದಿನ ವರೆಗೆ ನೀವಾದರೂ ಈ ದಾಸಿಯ ಮೇಲೆ ನಿಃಸೀಮಪ್ರೇಮವನ್ನು ಇಟ್ಟು ಕಾಪಾಡಿದಿರಿ. ದೇವರು ಈ ಸುಖದ ದಿವಸಗಳನ್ನೇ ಕೊನೆಯವರೆಗೂ ನಡೆಸುವನೆಂಬು ಈ ದೀನೆಯು ತಿಳಿದುಕೊಂಡಿದ್ದಳು. ಆದರೆ ಆತನ ಇಚ್ಛೆಯು ಬೇರೆಯಾಗಿದೆ. ನಾನು ವಿಯೋಗವನ್ನು ಅನುಭವಿಸಲೇ ಬೇಕೆಂಬುದು ಅವನ ಸಂಕಲ್ಪವಾಗಿದೆ. ಅದುದರಿಂದ ಉಪಾಯವಿಲ್ಲ. ತಾವು ಹೋದ ಮೇಲೆ ಈ ದೇಹದಲ್ಲಿ ಪ್ರಾಣವಿರುವದೆಂಬ ನಿಯಮವಿಲ್ಲ. ಆದರೂ ತಾವು ಯಾವ ಚಿಂತೆಯನ್ನೂ ಮಾಡದೆ ಹೊರಡಬಹುದು. ನಾನು ತಮಗೆ ಪ್ರತಿಬಂಧವನ್ನುಂಟು ಮಾಡುವದಿಲ್ಲ."

ಪತ್ನಿಯ ಈ ಮಾತುಗಳನ್ನು ಕೇಳಿ, ಅಂತಹ ದುಃಖದ ಸ್ಥಿತಿಯಲ್ಲಿಯೂ ಭಾಸ್ಕರರಾಯನಿಗೆ ಆನಂದವಾಯಿತು. ಆದರೆ ಕಣ್ಣೊಳಗಿನ ಅಶ್ರುಪ್ರವಾಹವು ಮಾತ್ರ ಒಂದೇ ಸವನೆ ಹರಿಯುತ್ತಿತ್ತು. ಅಂತಹಸ್ಥಿತಿಯಲ್ಲಿಯೇ ಅವನು ಮತ್ತೊಮ್ಮೆ ತಾಯಿಯ ಅಡಿದಾವರೆಗಳಿಗೆರಗಿದನು. ಮತ್ತು ಅಪ್ಪಣೆಯನ್ನು ಬೇಡಿಕೊಂಡನು. ಆ ವೀರಮಾತೆಯಾದರೂ ಧೈರ್ಯದಿಂದ "ಮಗೂ, ಆಯುಷ್ಮಂತನಾಗು; ಎಲ್ಲಿದ್ದರೂ ಏನು ಮಾಡಬೇಕಾಗಿದ್ದರೂ ಜೀವದ ಎಚ್ಚರಿಕೆಯಿಂದಿರು; ಯೋಗ್ಯವಾದದ್ದನ್ನೇ ಮಾಡು." ಎಂದು ಆಶೀರ್ವದಿಸಿ ಅಪ್ಪಣೆಯನ್ನು

ಕೊಟ್ಟಳು. ಆ ಮೇಲೆ ಭಾಸ್ಕರರಾಯನು ಮತ್ತೊಮ್ಮೆ ಹೆಂಡತಿಯನ್ನು ಕುರಿತು:- "ಅಪ್ಪನ ಸಂಗಡಲೇ ಇರು. ಮತ್ತು ಇಬ್ಬರಿಗೂ ಯೋಗ್ಯವೆಂದು ತೋಚಿದಂತೆಯೇ ನಡೆಯುವದನ್ನು ಮರೆಯಬೇಡ." ಎಂದು ಹೇಳಿ ಅಲ್ಲಿಂದ ಹೊರಟನು. ಅವನು ಅರಮನೆಯಿಂದ ಹೊರಟ ಕೂಡಲೆ ಆ ಇಬ್ಬರು ಅಬಲೆಯರಿಗೂ ಹೇಳಕೂಡದಷ್ಟು ದುಃಖವಾಯಿತು. ಭಾಸ್ಕರರಾಯನ ಹೆಂಡತಿಯಂತೂ ಅದು ಚಿರವಿಯೋಗವೆಂದೇ ತಿಳಿದಳು; ಮತ್ತೆ ಮೂರ್ಛೆಯನ್ನು ಹೊಂದಿದಳು. ಆಗ ಯಮುನಾಬಾಯಿಯು ಅವಳನ್ನು ಶೈತ್ಯೋಪಚಾರದಿಂದ ಎಚ್ಚರಿಸಿ ವಾತ್ಸಲ್ಯದಿಂದ ಅಪ್ಪಿಕೊಂಡು ಎದೆಗವಚಿಕೊಂಡಳು.

ಭಾಸ್ಕರರಾಯನೂ, ಅವನ ಆಪ್ತಜನರೂ ಅರಮನೆಯಿಂದ ಹೊರಬಿದ್ದು ಯಾವಕಡೆಗೆ ಹೊರಟರೆಂಬದು ಯಾರಿಗೂ ತಿಳಿಯಲಿಲ್ಲ. ಅವನು ಹೊರಟು ಹೋದ ಬಳಿಕ ಯಮುನಾಬಾಯಿ ಮತ್ತು ಸಾವಿತ್ರೀಬಾಯಿ ಇವರಾದರೂ ಹೊರಟರು. ಅವರು ತಮ್ಮ ಸಂಗಡ ತಮ್ಮ ಆಪ್ತರೊಳಗಿನವನೊಬ್ಬನಾದ ರಾಮಚಂದ್ರನೆಂಬವನನ್ನು ಸಂಗಡ ಕರೆದುಕೊಂಡರು. ಮತ್ತು ಯಾರಿಗೂ ತಿಳಿಯದ ಹಾಗೆ ಅರಮನೆಯಿಂದ ಹೊರಬಿದ್ದರು. ಅವರು ಹೊರಟು ಹೋದ ಎರಡು ಗಳಿಗೆಗಳ ಅನಂತರ ಇಂಗ್ಲಿಷರ ಸೈನ್ಯವು ಊರ ಒಳಗೆ ಬರಲು ಪ್ರಯತ್ನಮಾಡ ಹತ್ತಿತು. ಮತ್ತು ಅಲ್ಪಾವಕಾಶದಲ್ಲಿಯೇ ಅವರಿಗೆ ಅನಾಯಾಸವಾಗಿ ಯಶಸ್ಸೂ ದೊರೆಯಿತು.

---

*

# ೬ ನೆಯ ಪ್ರಕರಣ.

## ಮುಂದೆ ಏನಾಯಿತು?



ತ್ರಮಗೆ ಅಪಜಯವಾಗಿ ಇಂಗ್ಲಿಷರಿಗೆ ಜಯದೊರೆಯಿತೆಂದು ನರಗುಂದದ ಜನರು ಕೂಡಲೆ ತಿಳಿದರು; ಮತ್ತು ಆ ಸುದ್ದಿಯನ್ನು ಕೇಳಿದ ಕೂಡಲೆ ಎಲ್ಲ ಜನರು ತಮ್ಮ ತಮ್ಮ ಪ್ರಾಣರಕ್ಷಣೆಯ ಉಪಾಯವನ್ನು ಹುಡುಕಹತ್ತಿದರು. ಹೀಗೆ ಎಲ್ಲ ಜನರು ಊರ ಬಿಟ್ಟು ಹೊರಬೀಳಹತ್ತಿದಕೂಡಲೆ ಸಣ್ಣ ಸಣ್ಣ ಹುಡುಗರೂ, ಹೆಂಗಸರೂ, ಶಕ್ತಿಹೀನರಾದ ಮುದುಕರೂ ಭಯವಿಹ್ವಲರಾದರು. ಆಗ ಒಬ್ಬನು ಮತ್ತೊಬ್ಬನ ಗತಿಯು ಏನಾದೀತೆಂಬುದನ್ನು ವಿಚಾರಿಸುವಂತೆಯೇ ಇದ್ದಿಲ್ಲ. ಊರೊಳಗೆ ಗರ್ಭಿಣಿಯರಾದ ಅನೇಕ ಸ್ತ್ರೀಯರಿದ್ದರು. ಅವರಲ್ಲಿ ಹಲವರು ಈ ವಿಲಕ್ಷಣವಾದ ಸ್ಥಿತಿಯನ್ನು ತಿಳಿದ ಕೂಡಲೆ ಹಲಿವುಳಿದರು! ತುಂಬಿದ ಮನೆಯನ್ನು ಇದ್ದಕ್ಕಿದ್ದ ಹಾಗೆ ಬಿಟ್ಟು, ಒಮ್ಮಿಂದೊಮ್ಮೆಲೆ ಉಟ್ಟ ಬಟ್ಟೆಯಿಂದ ಮಾತ್ರ ಹೊರಬೀಳುವ ಹೊತ್ತು ಬಂದದ್ದರಿಂದ ಅಲ್ಲಿಯ ಪ್ರತಿಯೊಬ್ಬನಿಗೆ ಎಷ್ಟು ಕಷ್ಟವಾಗಿರಬಹುದೆಂಬದನ್ನು ವಾಚಕರೇ ತರ್ಕಿಸಲಿ! ಬಹಳ ಹೇಳುವದೇನು? ಆ ಸಮಯದಲ್ಲಿ ಯಾರಿಗೆ ಯಾವ ಮಾರ್ಗವು ಒಳ್ಳೆಯದಾಗಿ ತೋರಿತೋ, ಅವರು ಅದನ್ನು ಅನುಸರಿಸಿ ತಮ್ಮ ತಮ್ಮ ಜೀವರಕ್ಷಣೆಯನ್ನು ಮಾತ್ರ ಮಾಡಿಕೊಂಡರು. ನಡೆಯಲಾರದ ಗರ್ಭವತಿಯರೂ ಅಬಲೆಯರೂ ಮಾರ್ಗ ನಡೆದು ಆಯಾಸಪಟ್ಟು ನಡುದಾರಿಯಲ್ಲಿಯೇ ಉಸ್ಸೆಂದು ಕುಳಿತುಕೊಂಡು, "ದೇವಾ, ಎಂತಹ ಹೊತ್ತು ತಂದೆ!" ಎಂದು ಕಳವಳಿಸುತ್ತಿದ್ದರು. ಆದರೆ ಬಹಳ ಹೊತ್ತು ಅಲ್ಲಿಯೇ ಕುಳಿತರೆ ತಮ್ಮ ಗತಿಯು ನೆಟ್ಟಗಾಗಲಿಕ್ಕಿಲ್ಲವೆಂಬ ವಿಚಾರವು ಮನಸ್ಸಿನಲ್ಲಿ ಬಂದೊಡನೆಯೇ ತಟ್ಟನೆ ಎದ್ದು ಬೀಳುತ್ತ ಏಳುತ್ತ ಕಷ್ಟದಿಂದ ಮುಂದೆ ಸಾಗುತ್ತಿದ್ದರು. ಕೋಲೂರುತ್ತ ಕಾಲಿಡುವ, ಮತ್ತು ಜೇನೆಯಿಂದ ಹಣ್ಣಾಗಿರುವ ವೃದ್ಧರು ಕೂಡ ಜೀವದ ಆಶೆಯಿಂದ ಹೊರಹೊರಟಿದ್ದರು: ಮತ್ತು ಶಕ್ಯವಿದ್ದ ಮಟ್ಟಿಗೆ ಓಡುತ್ತಲೇ ಇದ್ದರು. ಸಾರಾಂಶವೇನಂದರೆಃ— ಆ ವೇಳೆಯಲ್ಲಿ ಒಬ್ಬನು ಮತ್ತೊಬ್ಬನ ಮೇಲೆ ಪ್ರೀತಿಯನ್ನಾಗಲಿ ಮಮತೆಯನ್ನಾಗಿ ತೋರಿಸುವಂತೆಯೇ ಇದ್ದಿಲ್ಲ. ಪ್ರತಿಯೊಬ್ಬನು ತನ್ನ ಜೀವರಕ್ಷಣೆಯ ಉಪಾಯವನ್ನು ನೋಡಿಕೊಳ್ಳುವದಕ್ಕೇ ಸಾಕುಬೇಕಾಗುತ್ತಿತ್ತು. ಬಹಳ ಹೇಳುವದೇನು? ಆಗ ಗಂಡನು

ಹೆಂಡತಿಯು ಮೇಲಿನ ಮೋಹವನ್ನು ಬಿಟ್ಟನು; ತಾಯಿಯು ಮಕ್ಕಳ ವಿಷಯದಲ್ಲಿದ್ದ ಅಕ್ಕರತೆಯನ್ನು ತೊರೆದಳು! ಎಂದ ಮೇಲೆ ಇನ್ನು ಉಳಿದವರನ್ನು ಕುರಿತು ಹೇಳುವದೇನಿದೆ? ಊಟಕ್ಕೆ ಕುಳಿತಿದ್ದವರು ಬಡಿಸಿದ ಎಲೆಯನ್ನು ಹಾಗೆಯೇ ಬಿಟ್ಟು ಓಡಲಾರಂಭಿಸಿದರು! ಅಡಿಗೆಯನ್ನು ಮಾಡುತ್ತಿದ್ದವರು ಒಲೆಯ ಮೇಲಿನ ಪಾತ್ರೆಯನ್ನು ಕೂಡ ಕೆಳಗೆ ಇಳಿಸದೆ ಪಲಾಯನಮಾಡಹತ್ತಿದರು! ಇಂತಹ ಸ್ಥಿತಿಯಲ್ಲಿ ಮನೆಯೊಳಗಿನ ಅಶಕ್ತ ಜನರನ್ನು ಹೆಂಗಸರನ್ನೂ ಹುಡುಗರನ್ನೂ ಕೇಳುವರಾರು? 'ನನ್ನ ಜೀವವು ಹೇಗೆ ಉಳಿದೀತು?' ಎಂಬ ಚಿಂತೆಯೇ ಪ್ರತಿಯೊಂದು ವ್ಯಕ್ತಿಯನ್ನು ಆಗ ಆವರಿಸಿತ್ತು. ಆದುದರಿಂದ ಪ್ರತಿಯೊಬ್ಬನು ಸಿಕ್ಕ ಹಾದಿಯನ್ನು ಹಿಡಿದು ನರಗುಂದದ ಸೀಮೆಯನ್ನು ದಾಟಿ ಹೋಗುವ ಪ್ರಯತ್ನದಲ್ಲಿದ್ದನು.

ಬಾಬಾಸಾಹೇಬನು ಯುದ್ಧ ಮಾಡುವ ನಿಶ್ಚಯವನ್ನು ಮಾಡಿದಾಗಲೇ ನರಗುಂದದ ಜನರು ತಮ್ಮ ತಮ್ಮ ಜೀವದ ಹಾಗು ದ್ರವ್ಯದ ರಕ್ಷಣೆಯನ್ನು ಹೇಗೆ ಮಾಡಿಕೊಳ್ಳಬೇಕೆಂಬ ವಿಚಾರವನ್ನು ಮಾಡುತ್ತಿದ್ದನು. ಅವರ ತನಗೆ ಅಪಜಯವಾದೀತೆಂದು ಭಾಸ್ಕರರಾಯನು ಎಣಿಸಿರಲಿಲ್ಲ. ಆದುದರಿಂದಲೇ ಅವನು, ಊರೊಳಗಿನವರಾರೂ ಹೊರಗೆ ಹೋಗಿ ಹಗೆಗಳ ಕೈಯಲ್ಲಿ ಸಿಗಬಾರದೆಂದೂ, ಊರೊಳಗಿನ ಒಂದು ಒಡಕು ಚೂರು ಕೂಡ ವೈರಿಗಳ ಕೈಗೆ ಹತ್ತಬಾರದೆಂದೂ ಅಗಸೆಯ ಬಾಗಿಲುಗಳನ್ನೆಲ್ಲ ಗಟ್ಟಿಯಾಗಿ ಇಕ್ಕಿಸಿಬಿಟ್ಟಿದ್ದನು. ಅಂತೇ ಅಲ್ಲಿಯ ಜನರು ಈಗ ಹಲವು ಬಗೆಯ ತೊಂದರೆಗಳಿಗೊಳಗಾದರು. ಬೇಗಾಗಿ ಅಲ್ಲಿಯ ಅನೇಕ ಕುಟುಂಬಗಳ ಜನರ ಸುದ್ದಿಯೇ ಇನ್ನೂ ವರೆಗೆ ಗೊತ್ತಾಗಿಲ್ಲ- ಇರಲಿ.

ಇಂಗ್ಲಿಷ ಸರಕಾರದ ದಂಡಿನವರು ಸಂಸ್ಥಾನದ ದಂಡನ್ನು ಸೋಲಿಸಿ ಪಟ್ಟಣವನ್ನು ವಶಮಾಡಿಕೊಂಡರು. ಮರುದಿವಸ ಮೊದಲು ಕಿಲ್ಲೆಯ ಬಾಗಿಲನ್ನು ಒಡೆದು ಅದನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರು; ಮತ್ತು ಕಿಲ್ಲೆಯ ಮೇಲೆ ತಮ್ಮ ವಿಜಯಪತಾಕೆಯನ್ನು ಕಟ್ಟಿದರು. ಇಷ್ಟೆಲ್ಲ ಆಗುವ ಪೂರ್ವದಲ್ಲಿಯೇ ಭಾಸ್ಕರರಾಯನು ತನ್ನ ಮುತ್ಸದ್ದಿಗಳೊಡನೆ ಓಡಿ ಹೋಗಿದ್ದನು. ನರಗುಂದಕರನಿಗೆ ಉತ್ತಮವಾದ ಆಲೋಚನೆಯನ್ನು ಹೇಳುವ ಮತ್ತು ರಾಜ್ಯಕಾರಭಾರದಲ್ಲಿ ಚೆನ್ನಾಗಿ ನೆರವಾಗುವ ಮುತ್ಸದ್ದಿಗಳಲ್ಲಿ ರಾಮರಾವ ಮತ್ತು ರಾಘೋಪಂತ ಎಂಬವರಿಬ್ಬರು ಚತುರ ಬ್ರಾಹ್ಮಣರು ಮುಖ್ಯರಿದ್ದರು. ಇವರಿಬ್ಬರ ವಿಚಾರದಿಂದಲೇ ಅಲ್ಲಿಯ ರಾಜ್ಯಸೂತ್ರವು ನಡೆಯುತ್ತಿತ್ತೆಂದು ಹೇಳಬಹುದು.

ಇವರಿಬ್ಬರು ಮುತ್ಸದ್ದಿಗಳಲ್ಲಿ ರಾಘೋಪಂತನ ಮನೆತನವು ಬಹಳ ದೊಡ್ಡದೂ ಬಹುದಿವಸಗಳಿಂದ ಹೆಸರಾದದ್ದೂ ಇತ್ತು; ಅವನ ಎಲ್ಲ ಅಣ್ಣ ತಮ್ಮಂದಿರು

ಒಮ್ಮನಸಿನಿಂದಿದ್ದು ಚೆನ್ನಾಗಿ ಕುಟುಂಬವನ್ನು ಸಾಗಿಸುವವರೆಂದು ಹೆಸರಾಗಿದ್ದರು. ಮೇಲಾಗಿ ರಾಜಾಶ್ರಯದ ಮೂಲಕ ಶ್ರೀಮಂತರೂ ಮಾನಮಾನ್ಯತೆಯುಳ್ಳವರೂ ಆಗಿದ್ದರು. ರಾಘೋಪಂತನ ಕುಟುಂಬದಲ್ಲಿ ಆಗ ಸುಮಾರು ಮೂವತ್ತು ಜನರಿದ್ದರು. ಇವರೆಲ್ಲರೂ ಯಜಮಾನನಾದ ರಾಘೋಪಂತನ ಪ್ರತಿಯೊಂದು ಅಪ್ಪಣೆಯನ್ನು ತಲೆಬಾಗಿ ಅನುಸರಿಸುತ್ತಿದ್ದರು. ಈ ರಾಘೋಪಂತನ ಉತ್ಪನ್ನವು ಒಬ್ಬ ದೊಡ್ಡ ಜಹಾಗೀರದಾರನಷ್ಟು ಇತ್ತು. ಆದರೂ ಆತನ ಮನೆತನದೊಳಗಿನ ಎಲ್ಲ ಗಂಡಸರು ತಮ ತಮಗೆ ಉಚಿತವಾದ ರೀತಿಯಿಂದ ರಾಜಾಶ್ರಯವನ್ನು ಪಡೆದು ತಕ್ಕಷ್ಟು ದ್ರವ್ಯಸಂಪಾದನೆಯನ್ನು ಮಾಡುತ್ತಿದ್ದರು. ಮನೆಯ ಯಜಮಾನನಾದ ರಾಘೋಪಂತನು ಮುಖ್ಯ ಸೇನಾನಾಯಕನಾಗಿದ್ದದರಿಂದ, ಆ ಮನೆತನದ ಮೇಲೆ ನರಗುಂದಕರನ ಪ್ರೇಮವು ಬಹಳವಾಗಿತ್ತು. ಆದದರಿಂದ ರಾಘೋಪಂತನ ಮನೆತನದಷ್ಟು ಶ್ರೇಷ್ಠವಾದ ಮನೆತನವು ಆಗ ನರಗುಂದದಲ್ಲಿ ಮತ್ತೊಂದಿದ್ದಿಲ್ಲವೆಂದು ಹೇಳಬಹುದು.

ಭಾಸ್ಕರರಾಯನ ವಿಶ್ವಾಸವು ರಾಘೋಪಂತನ ಮೇಲೆ ಪೂರ್ಣವಾಗಿದ್ದದರಿಂದ, ಹಿತಸಂಬಂಧದ ಗುಪ್ತವಾದ ಎಲ್ಲ ಮಾತುಕಥೆಗಳ ಚರ್ಚೆಯನ್ನು ಭಾಸ್ಕರರಾಯನು ಇವನೊಡನೆಯೇ ಮಾಡುತ್ತಿದ್ದನು. ಭಾಸ್ಕರರಾಯನಿಗೂ ರಾಘೋಪಂತನಿಗೂ ಇದ್ದ ಈ ಹಿತಸಂಬಂಧವು ಬಹುದಿವಸಗಳಿಂದಲೂ ನಡೆದುಬಂದಿತ್ತು. ನರಗುಂದಕರನು ಸೋತು, ಊರೊಳಗಿನ ಜನರೆಲ್ಲರು ಓಡಿ ಹೋಗುವ ಗೊಂದಲದಲ್ಲಿದ್ದಾಗ, ರಾಘೋಪಂತನ ಮನೆಯಲ್ಲಿ ಒಂದು ಲಗ್ನವಾಗತಕ್ಕದ್ದಿತ್ತು. ಆದದರಿಂದ ಮನೆಯೊಳಗಿನ ಎಲ್ಲ ಜನರು ಮದುವೆಯ ಸಾಹಿತ್ಯವನ್ನು ಮಾಡುವದರಲ್ಲಿ ತೊಡಗಿದ್ದರು. ಈ ಮನೆತನದ ಎಲ್ಲ ಗಂಡಸರೂ ಹೆಂಗಸರೂ ತಮ್ಮ ತಮ್ಮ ಕೆಲಸಗಳಲ್ಲಿ ನಿಮಗ್ನರಾಗಿದ್ದದರಿಂದ, ಒಮ್ಮಿಂದೊಮ್ಮೆ ಊರಹೊರಗೆ ನಡೆದ ಯುದ್ಧದ ವಾರ್ತೆಯು ಇವರಿಗೆ ಗೊತ್ತೇ ಇದ್ದಿಲ್ಲ. ಮನೆಯ ಯಜಮಾನನು ರಾಜ್ಯಕಾರಭಾರದ ಮುಖ್ಯ ವ್ಯಕ್ತಿಯಾಗಿದ್ದನೆಂಬುದು ನಿಜ. ಆದರೆ ಕಾಳಗದ ಯೋಜನೆಯು ಅವನೊಬ್ಬನಿಗೇ ಸಂಬಂಧಿಸಿದ್ದದರಿಂದ, ಇತರರಿಗೆ ಅದರ ಸುದ್ದಿಯು ಸುಳಿದೇ ಇದ್ದಿಲ್ಲ.

ಮನುಷ್ಯನು ತನ್ನ ಇಚ್ಛೆಯಂತೆ ಕೆಲಸವನ್ನು ಮಾಡಲಿಕ್ಕೆ ಹತ್ತುತ್ತಾನೆ. ಆದರೆ ಜಗತ್ಕರ್ತೃವಾದ ಈಶ್ವರನ ಇಚ್ಛೆಯು ಬೇರೆಯೇ ಆಗಿರುತ್ತದೆ. ರಾಘೋಪಂತನ ಮನೆಯವರು ವಿವಾಹದ ಸಂಭ್ರಮದಲ್ಲಿದ್ದರು. ಸುವಾಸಿನಿಯರು ಲಗ್ನದ ಸಂಭಾರಗಳನ್ನು ಮಾಡುತ್ತ ಆನಂದದಿಂದ ಮಂಗಲಗೀತೆಗಳನ್ನು ಅನ್ನುತ್ತಿದ್ದರು. ಒಂದು ಕಡೆಗೆ ಚಿಕ್ಕ ಚಿಕ್ಕ ವಯಸ್ಸಿನ ಹುಡುಗಿಯರು ಸಗಡಿ, ಚೌವಂಗ, ಮ

ತ್ತು ಹುಣಸೆಯಕಾಳು ಮೊದಲಾದವುಗಳ ಆಟಗಳನ್ನಾಡುತ್ತ ಚಕ್ಕಂದದಿಂದಿದ್ದರು. ಮತ್ತೊಂದು ಕಡೆಗೆ, ಲಗ್ನ ಸಮಾರಂಭಕ್ಕಾಗಿಯೇ ಬೇರೆ ಬೇರೆ ಕಡೆಯಿಂದ ಬಂದಂತಹ ಜನರು ಸಂತೋಷದಿಂದ ಕುಳಿತುಕೊಂಡು ಲೆತ್ತ, ಗಂಜೀಪ ಮತ್ತು ಚದುರಂಗ ಮೊದಲಾದ ಆಟಗಳಲ್ಲಿ ತಲ್ಲೀನರಾಗಿದ್ದರು. ಇಷ್ಟರಲ್ಲಿ ಊರೊಳಗಿನ ಜನರು ಓಡಿಹೋಗಹತ್ತಿದ್ದಾರೆಂಬ ವರ್ತಮಾನವು ಕರ್ಣೋಪಕರ್ಣವಾಗಿ ಈ ಮನೆಯವರಿಗೂ ಹತ್ತಿತು. ಕೂಡಲೆ ಅವರ ಆನಂದವು ಅಂತವನ್ನು ಹೊಂದಿತು; ಇಷ್ಟೇ ಅಲ್ಲ; ಆ ಮನೆತನದ ಪ್ರತಿಯೊಬ್ಬನು ತನ್ನ ಆಪ್ತಸಂಬಂಧದ ಎಲ್ಲ ಮಾಯೆಯನ್ನು ಬಿಟ್ಟು ಸ್ವಂತದ ಜೀವರಕ್ಷಣೆಯನ್ನು ಮಾಡಿಕೊಳ್ಳುವ ಉದ್ದೇಶದಿಂದ ದಾರಿ ಕಂಡಕಡೆಗೆ ಓಡಹತ್ತಿದನು!

ಮನೆಯೊಳಗಿದ್ದ ಬೇರೆ ಬೇರೆ ಜನರ ಕೈಯೊಳಗಿನ ಕೆಲಸಗಳು ಅಲ್ಲಿಯೇ ಉಳಿದವು. ಉರಿಯುವ ಒಲೆಗಳು, ಅವುಗಳ ಮೇಲಿರುವ ತುಪ್ಪದ ಮತ್ತು ಎಣ್ಣೆಯ ಬಾಣ್ಲಿಗಳು ಆಯಾ ಸ್ಥಳಗಳಲ್ಲಿಯೇ ಉಳಿದವು. ಕರಚಿಕಾಯಿ, ಅನಾರಸ, ಉಂಡಿ ಮೊದಲಾದ ಫಳಾರದ ಪದಾರ್ಥಗಳನ್ನು ಮಾಡುವ ಹೆಂಗಸರೂ, ಅಡಿಗೆಯವರೂ ಉಟ್ಟುಕೊಂಡ ಮಡಿಯನ್ನು ಕಳೆದು ಸೀರೆ ದೋತರಗಳನ್ನು ಉಟ್ಟುಕೊಂಡು ಹೋಗುವದಕ್ಕೆ ಅವಕಾಶವು ದೊರೆಯದ್ದರಿಂದ ಇದ್ದಕ್ಕಿದ್ದ ಹಾಗೆಯೇ ಹೊರಬಿದ್ದರು. ಎಂದ ಮೇಲೆ ಮನೆಯಲ್ಲಿದ್ದ ನಡೆಯುಲಿಕ್ಕೆ ಬಾರದ ಹುಡುಗರನ್ನೂ ಹಡೆದಂತಹ ಹೆಂಗಸರನ್ನೂ ವಿಚಾರಿಸುವವರಾರು? ಅಂತಹರು ತಮ್ಮ ತಮ್ಮ ಸ್ಥಳಗಳಲ್ಲಿಯೇ ಬಿದ್ದುಕೊಂಡಿದ್ದರು.

ರಾಘೋಪಂತನ ಮನೆಯಲ್ಲಿ ಚಿಕ್ಕ ಚಿಕ್ಕ ಮಕ್ಕಳ ಸಂಖ್ಯೆಯು ಹೆಚ್ಚಿತ್ತು. ಆ ಹುಡುಗರು ಸ್ವಲ್ಪ ವೇಳೆಯ ಮುಂಚೆ ತಮ್ಮ ತಮ್ಮ ತಾಯಂದಿರಿಗೆ 'ಹೊಟ್ಟೆಯು ಹಸಿದಿದೆ, ಎಂದು ಅನೇಕ ಪ್ರಕಾರದಿಂದ ತೊಂದರೆ ಕೊಡುತ್ತಿದ್ದರು. ಆದದರಿಂದ ಅವರಿಗೆ ತಿನ್ನಲಿಕ್ಕೆ ಹಾಕಿ ಸಮಾಧಾನ ಮಾಡುವದಕ್ಕಾಗಿ ಒಬ್ಬ ಹೆಂಗಸು ಶಾವಿಗೆಯ ಖೀರನ್ನು ಮಾಡಬೇಕೆಂದು, ಒಲೆಯ ಮೇಲೆ ಪಾತೇಲಿಯನ್ನು ಇಟ್ಟು, ಹಾಲು, ಸಕ್ಕರೆ, ಮತ್ತು ಶಾವಿಗೆಗಳನ್ನು ಹಾಕಿ ಬುಡಕ್ಕೆ ಉರಿ ಹಚ್ಚಿದ್ದಳು. ಅದೇ ಸಮಯಕ್ಕೆ ಓಡಿ ಹೋಗುವ ಅವಸರವು ಪ್ರಾರಂಭವಾಯಿತು. ಆದದರಿಂದ ಒಲೆಯ ಮೇಲಿಟ್ಟ ಖೀರನ್ನು ಯಾರು ಕೇಳಬೇಕು? ಆ ಪಾತ್ರೆಯು ಒಲೆಯ ಮೇಲೆ ಹಾಗೆಯೇ ಉಳಿಯಿತು. ಮನೆಯೊಳಗಿನ ಎಲ್ಲ ಜನರು ತಮ ತಮ್ಮ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಓಡತೊಡಗಿದರು. ಸಾರಾಂಶವೇನಂದರೆ:— ಇಂತಹ ದುರ್ಘಟ ಪ್ರಸಂಗಗಳು ಅಕಲ್ಪಿತವಾಗಿ ಬರುತ್ತವೆ; ಮತ್ತು ಇಂತಹ ಸಂದರ್ಭಗಳಲ್ಲಿ ಕೈಕೊಂಡ ಕೆಲಸಗಳು ಅಲ್ಲಲ್ಲಿಯೇ ಉಳಿಯು

ತ್ತವೆ. ಇಷ್ಟೇ ಅಲ್ಲ. ಬಾಯೊಳಗೆ ಹಾಕಿಕೊಂಡ ತುತ್ತು ಗಂಟಲಲ್ಲಿ ಇಳಿಯುವದು ಕೂಡ ಕಷ್ಟವಾಗುತ್ತದೆ! ನೋಡಿರಿ. ಮದುವೆಯ ಸಂಭ್ರಮವು ಒಮ್ಮಿಂದೊಮ್ಮೆಲೆ ನಿಂತುಹೋಯಿತು! ಮಕ್ಕಳು 'ಹೊಟ್ಟೆ ಹಸಿದಿದೆ' ಎಂದು ಹಟ ಮಾಡಲು, ತಾಯಿಯು ಅವುಗಳಿಗಾಗಿ ಒಲೆಯ ಮೇಲಿಟ್ಟ ಶಾವಿಗೆಯ ಖೀರು ಹುಡುಗರ ಬಾಯಿಯಲ್ಲಿ ಬೀಳದೆ ಒಲೆಯ ಮೇಲೆಯೇ ಉಳಿಯಿತು! ಇಷ್ಟೇ ಅಲ್ಲ. ಯಾವ ವಿಚಾರವನ್ನೂ ಮಾಡದೆ, ಸ್ವಂತದ ಪ್ರಾಣವನ್ನು ಕಾಪಾಡಿಕೊಳ್ಳುವದಕ್ಕಾಗಿ ಪತಿಯೊಬ್ಬರು ಓಡಹತ್ತಿದರು. ಇದನ್ನೆಲ್ಲ ಶಾಂತಮನದಿಂದ ವಿಚಾರಮಾಡಿದರೆ– 'ಇದೊಂದು ಅಘಟಿತ ಘಟನೆಯೇ ಸರಿ' ಯೆಂದು ಮನಸ್ಸು ಉದಾಸೀನವಾಗುವದು; ಮತ್ತು ಸಂಪತ್ತಿನ ಅಸ್ಥಿರತ್ವವೂ, ಮನುಷ್ಯನ ಹೆಮ್ಮೆಯೂ ಕಣ್ಣಮುಂದೆ ಕಟ್ಟಿದಂತಾಗಿ, ಸಖೇದಾಶ್ಚರ್ಯದಿಂದ 'ಉಸ್ಸೆಂ'ಬ ಉದ್ಗಾರವು ಹೊರ ಹೊರಡುವದು.

ನರಗುಂದ ಪಟ್ಟಣವು ಸಮೃದ್ಧವಾದದ್ದು. ಆದದರಿಂದ ಅಲ್ಲಿಯ ಜನರು ಶ್ರೀಮಂತರಿದ್ದರು. ಆದರೆ ತಮ್ಮ ತಮ್ಮ ತುಂಬಿದ ಮನೆಯನ್ನು ಬಿಟ್ಟು ಓಡಿ ಹೋಗುವ ಪ್ರಸಂಗ ಬಂದ ಕೂಡಲೆ ಅವರು ಅಮೌಲ್ಯವಾದ ಉಡಿಗೆ ತೊಡಿಗೆಗಳು, ಆಭರಣಗಳು, ಪಾತ್ರೆಗಳು ಇವೇ ಮೊದಲಾದ ಎಲ್ಲ ವಸ್ತುಗಳನ್ನು ತ್ವರೆಯಿಂದ ಮನೆಯೊಳಗಿನ ಹಗೆಯಲ್ಲಿ ಚೆಲ್ಲಿಕೊಟ್ಟು ಪರಮಾತ್ಮನ ಮೇಲೆ ಭಾರಹಾಕಿ ಹೊರಟು ಹೋದರು. ಇಂಗ್ಲಿಷರು ಪಟ್ಟಣವನ್ನು ವಶಮಾಡಿಕೊಂಡ ಅಲ್ಪಾವಧಿಯಲ್ಲಿಯೇ ಕೋಟ್ಯವಧಿ ರೂಪಾಯಿಗಳ ವಸ್ತುಗಳು ಲೂಟಿ ಮಾಡಲ್ಪಟ್ಟವು. ಯಾವನಿಗೆ ಯಾವ ಒಡವೆಯು ಬೇಕಾಗಿತ್ತೋ, ಅವನು ಅದನ್ನು ಊರೊಳಗಿನ ಮನೆಗಳನ್ನು ಹೊಕ್ಕು ಅರಿಸಿ ತೆಗೆದುಕೊಳ್ಳುತ್ತಿದ್ದನು. ಒಬ್ಬ ಗೋವಿಂದರಾಯನ ಮನೆಯಲ್ಲಿ ನಾಲ್ಕು ಸಾವಿರ ರೂ. ಗಳ ಜರದವಸ್ತ್ರಗಳೂ, ಎಷ್ಟೋ ಬೆಳ್ಳಿಯ ಮತ್ತು ಬಂಗಾರದ ಒಡವೆಗಳೂ ಸಿಕ್ಕವು. ಇದರ ಹೊರತು ಎಷ್ಟೋ ಮುತ್ತುಗಳು ದೊರೆತವು. ನರಗುಂದದಲ್ಲಿ ಒಬ್ಬ ವೇಶ್ಯೆಯಿದ್ದಳು. ಅವಳ ಮನೆಯನ್ನು ಲೂಟಿ ಮಾಡಲು, ಅಲ್ಲಿದ್ದ ರೂಪಾಯಿ, ಬೆಳ್ಳಿ, ಬಂಗಾರ, ವಸ್ತ್ರ ಮತ್ತು ಪಾತ್ರೆ ಇವುಗಳ ಗಣನೆಯೇ ಆಗಲಿಲ್ಲವಂತೆ! ಲೂಟೀ ಮಾಡುವವರು ಮನೆಯೊಳಗೆ ನಿಕ್ಷೇಪವು ಇರುವದೆಂದು ಭಾವಿಸಿ ಊರೊಳಗಿನ ಪ್ರತಿಯೊಂದು ಮನೆಯನ್ನು ಅಗಿದು ನೋಡುತ್ತಿದ್ದರು. ಇಂತು ನರಗುಂದವು ದುರವಸ್ಥೆಯನ್ನು ಹೊಂದಿತು! ಅದರ ಐಶ್ವರ್ಯವು ಅಡಗಿತು! ಕಾಂತಿಯು ಮಣ್ಣುಪಾಲಾಯಿತು! ಅದರಲ್ಲಿಯೂ ಸುದೈವದ ಸಂಗತಿಯೆಂದರೆ— ಪ್ರಾಣಹಾನಿಯನ್ನು ಮಾತ್ರ ಅದು ಅನುಭವಿಸಲಿಲ್ಲ.

ಇಂಗ್ಲಿಷರು ಪಟ್ಟಣವನ್ನೂ ಕಿಲ್ಲೆಯನ್ನೂ ವಶಪಡಿಸಿಕೊಂಡ ಸ್ವಲ್ಪ ಹೊತ್ತಿನ ಮೇಲೆ ಎಲ್ಲ ಕಡೆಗೂ ಶಾಂತತೆಯಾಯಿತು. ಆಗ ಇಂಗ್ಲಿಷರ ಅಧಿಕಾರಿಗಳು ಅತ್ತಿತ್ತ ಅಡ್ಡಾಡುತ್ತ, ಭಾಸ್ಕರರಾಯನೂ ಅವನ ಆಪ್ತೇಷ್ಟರೂ ಮುತ್ಸದ್ದಿಗಳೂ ಎಲ್ಲಿದ್ದಾರೆಂಬುದನ್ನು ಶೋಧಿಸತೊಡಗಿದರು. ಆದರೆ ಅವರೊಳಗಿನ ಯಾರ ಸುದ್ದಿಯೂ ಬೇಗನೆ ತಿಳಿಯುವ ಲಕ್ಷಣ ತೋರದ್ದರಿಂದ ಅವರಿಗೆ ಕೆಡಕೆನಿಸಿತು.

ಭಾಸ್ಕರರಾಯನು ಮ್ಯಾಸನ್ ಸಾಹೇಬನನ್ನು ಕೊಂದ ಸುದ್ದಿಯು ಹತ್ತಿದ ಕೂಡಲೆ, ಖಂಡ ಮನೆಯ ಗಳ ಎಣಿಸುವವರಾದ ಕೃಷ್ಣಾಜಿಪಂತ ಮತ್ತು ಬನ್ಯಾಬಾಪು ಇವರು ಇಂಗ್ಲಿಷರ ಸೀಮೆಯೊಳಗೆ ಓಡಿ ಹೋಗಿದ್ದರು. ಮೊದಲು ಹೇಳಿದಂತೆ ಜನರ ಪಲಾಯನವೂ, ನರಗುಂದದ ಲೂಟಿಯೂ ಮುಗಿದು, ನಾಲ್ಕು ಕಡೆಗೆ ಶಾಂತತೆಯಾದ ಬಳಿಕ ಅವರು ನಿರ್ಭೀತಿಯಿಂದ ನರಗುಂದಕ್ಕೆ ಬಂದರು. ಸಂಸ್ಥಾನಕ್ಕೆ ಸಂಬಂಧಪಟ್ಟ ಎಲ್ಲ ಗುಪ್ತಸಂಗತಿಗಳನ್ನು ಇಂಗ್ಲಿಷ ಸರಕಾರದ ಕಾರಭಾರಿಗಳಿಗೆ ಹೇಳಿದರು. ಅವರು ಇವರ ಹೇಳಿಕೆಯಂತೆಯೇ ನ್ಯಾಯಾನ್ಯಾಯ ವಿಚಾರಣೆಯ ಕೆಲಸವನ್ನು ನಡೆಸಿದರು. ಊರೊಳಗಿಂದ ಓಡಿಹೋದ ಜನರನ್ನು ಹಿಡಿದು ತರುವದಕ್ಕಾಗಿ ಸೈನ್ಯಕ್ಕೆ ಅಪ್ಪಣೆಯಿತ್ತರು. ಅದರಂತೆಯೇ ದಂಡಿನವರು ನಾಲ್ಕು ಕಡೆಗೆ ತಿರುಗಾಡಿ ಎಷ್ಟೋ ಜನರನ್ನು ಹಿಡಿದು ತಂದರು. ಈ ಜನರೊಳಗೆ ಎಷ್ಟೋ ಜನರು ಅಪರಾಧಿಗಳಿದ್ದರು; ಎಷ್ಟೋ ಜನರು ನಿರಪರಾಧಿಗಳೂ ಇದ್ದರು! ಆದರೆ ಇವರೆಲ್ಲರೂ ಮೊದಲು ಸೆರೆಮನೆಯಲ್ಲಿರಬೇಕಾಯಿತು! ಮುಂದೆ ನ್ಯಾಯಾನ್ಯಾಯಗಳ ನಿರ್ಣಯವಾದನಂತರ ನಿರ್ದೋಷಿಗಳು ಮುಕ್ತರಾದರು; ಮತ್ತು ಅಪರಾಧಿಗಳು ದೇಹಾಂತ ಶಿಕ್ಷೆಯನ್ನಾಗಲಿ, ತೋಪಿನ ಬಾಯಲ್ಲಿ ಸಿಕ್ಕು ಸಾಯುವದನ್ನಾಗಲಿ ಅನುಭವಿಸಬೇಕಾಗುತ್ತಿತ್ತು. ನಿರಪರಾಧಿಗಳೆಂದು ನಿರ್ಣೀತರಾದವರು ಮಾತ್ರ ನಿಜವಾಗಿ ಬಿಡುಗಡೆಯನ್ನು ಹೊಂದಿ ತಮ್ಮ ಹೆಂಡಿರು ಮಕ್ಕಳನ್ನು ಕೂಡಿಕೊಳ್ಳುತ್ತಿದ್ದರು. ಈ ಸಮಯದಲ್ಲಿ ಎಷ್ಟೋ ನಿರಪರಾಧಿಗಳು ಕೇವಲ ಸಂಶಯದಿಂದಲೂ, ಇತರ ಜನರ ದ್ವೇಷಮೂಲಕವಾಗಿಯೂ ಕೊಲ್ಲಲ್ಪಟ್ಟರು!

ರಾಮರಾವ ಮತ್ತು ರಾಘೋಪಂತ ಎಂಬವರು ನರಗುಂದಕರರ ಮುಖ್ಯ ಸೇನಾನಾಯಕರೆಂದು ಮೇಲೆ ಹೇಳಿದೆಯಷ್ಟೇ? ಅವರಲ್ಲಿ ರಾಮರಾಯನು ಮಾತ್ರ ಈ ಪಲಾಯನದ ಸಂಭ್ರಮದಲ್ಲಿ ತನ್ನ ಹೆಂಡತಿಯನ್ನೂ ಕೃಷ್ಣರಾಯನೆಂಬ ಒಬ್ಬ ಹುಡುಗನನ್ನೂ ಸಂಗಡ ಕರಕೊಂಡು ಓಡಿ ಹೋಗಿದ್ದನು. ಈ ಕೃಷ್ಣರಾಯನು ರಾಘೋಪಂತನ ಮನೆತನದ ಗೋವಿಂದರಾಯನ ಹಿರಿಯ ಮಗನು. ಈ ಹುಡು

ಗನ ವಯಸ್ಸು ಆಗ ಸುಮಾರು ಏಳು ಎಂಟು ವರ್ಷಗಳಿದ್ದಿತ್ತು. ಚಿಕ್ಕ ವಯಸ್ಸಿನಲ್ಲಿಯೇ ಇವನು ತನ್ನ ಬುದ್ಧಿ ಪ್ರಭಾವದಿಂದ 'ಕೃಷ್ಣರಾವ' ಎಂದು ಕರೆಯಿಸಿಕೊಳ್ಳುತ್ತಿದ್ದನು. ಈ ಪದವಿಯು ಯಜಮಾನನಾದ ಭಾಸ್ಕರರಾಯನಿಂದಲೇ ದೊರೆತಿತ್ತು. ಆದದರಿಂದ ಎಲ್ಲ ಜನರು ಇವನನ್ನು 'ಕೃಷ್ಣರಾವ' ಎಂಬ ಬಹುಮಾನವಾಚಕವಾದ ಹೆಸರಿನಿಂದಲೇ ಸಂಬೋಧಿಸುತ್ತಿದ್ದರು. ಈ ಕೃಷ್ಣರಾಯನು ಚಿಕ್ಕಂದಿನಲ್ಲಿಯೇ ಬಹು ಬುದ್ಧಿವಂತನೂ, ಚಪಲನೂ, ಯುಕ್ತಿವಂತನೂ, ಆಗಿದ್ದನು. ಅದಕ್ಕಾಗಿ ಭಾಸ್ಕರರಾಯನು ಇವನ ಮೇಲೆ ಬಹಳ ಮಮತೆಯನ್ನು ಮಾಡುತ್ತಿದ್ದನು. ಆದರೆ ಬಂಡಾಯದ ಅವಸರದಲ್ಲಿ ಎಲ್ಲ ಜನರಿಗೂ ಓಡಿಹೋಗುವ ವೇಳೆಯು ಬಂದದ್ದರಿಂದ ತಮ್ಮ ತಮ್ಮ ಅಂತಃಕರಣದ ಜನರನ್ನು ಕೆಲವರು ಸಂಗಡ ಕರೆದುಕೊಂಡು ಹೋಗಿದ್ದರು. ರಾಘೋಪಂತನಂತೂ ಭಾಸ್ಕರರಾಯನ ಸಂಗಡಲೇ ಓಡಿ ಹೋಗಿದ್ದನು. ರಾಘೋಪಂತನ ಮನೆತನದವನಾದ್ದ ಗೋವಿಂದರಾಯನು ತನ್ನ ಹೆಂಡತಿಯಾದ ಸತ್ಯಭಾಮಾಬಾಯಿಯನ್ನೂ ಇಬ್ಬರು ಮಕ್ಕಳನ್ನೂ ಕೂಡಿಕೊಂಡು ಓಡಿ ಹೋಗಿದ್ದನು. ಈ ಗೋವಿಂದರಾಯನ ಹಿರಿಯಮಗನೇ ಕೃಷ್ಣರಾಯನು. ಇವನು ಮೊದಲಿನಿಂದಲೂ ರಾಮರಾಯನ ಹತ್ತಿರ ಬಳಿಯಲ್ಲಿಯೇ ಹೆಚ್ಚಾಗಿ ಇರುತ್ತಿದ್ದನು. ಆದದರಿಂದ ಅವನು ಈಗ ರಾಮರಾಯನ ಸಂಗಡಲೇ ಇದ್ದನು.

ಪ್ರತಿಯೊಬ್ಬ ಮನುಷ್ಯನು ಎರಡನೆಯವರ ಮೇಲಿದ್ದ ಆಶೆ ಮತ್ತು ಮಮತೆಗಳನ್ನು ಬಿಟ್ಟು ತನ್ನ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಓಡಿ ಹೋದನೆಂದು ಹಿಂದೆ ಹೇಳಿದೆ. ಈಗ ಗೋವಿಂದರಾವ ಮತ್ತು ರಾಮರಾವ ಇವರು ತಮ್ಮ ಹೆಂಡರು ಮಕ್ಕಳನ್ನು ಕರೆದುಕೊಂಡು ಹೋದರೆಂಬ ಕಥನವಿರುತ್ತದೆ. ಇದು ಪರಸ್ಪರ ವಿರುದ್ಧವಾದ ಮಾತೆಂದು ವಾಚಕರಿಗೆ ಎನಿಸಬಹುದು. ಆದದರಿಂದ ಅವರಿಗೆ ಹೇಳಿಕೊಳ್ಳುವದೇನಂದರೆ:— ಆ ಅವಸರದ ವೇಳೆಯಲ್ಲಿ ಯಾರಿಗೆ ಯಾವ ಯಾವ ರೀತಿಯಿಂದ ಓಡಿಹೋಗುವದಕ್ಕೆ ಅನುವು ದೊರೆಯಿತೋ, ಅವರು ಆಯಾ ರೀತಿಯಿಂದ ಓಡಿಹೋದರು. ಬಂಡಾಯದಂತಹ ಅವ್ಯವಸ್ಥಿತ ಸ್ಥಿತಿಯನ್ನು ಕಣ್ಣಾರೆ ಕಂಡವರು ಅಥವಾ ಕಲ್ಪನೆಯಿಂದ ತಿಳಿದವರು ಇದರ ನಿಜಸ್ವರೂಪವನ್ನು ಅರಿಯಬಲ್ಲರು. ಇರಲಿ.

ಗೋವಿಂದರಾಯನಿಗೆ, ಕೃಷ್ಣರಾವ ಗಣಪತರಾವ ಮತ್ತು ಸಖಾರಾಮಪಂತ ಎಂಬ ಮೂವರು ಗಂಡುಮಕ್ಕಳೂ ಇಬ್ಬರು ಹೆಣ್ಣುಮಕ್ಕಳೂ ಹೀಗೆ ಒಟ್ಟು ಐವರು ಮಕ್ಕಳಿದ್ದರು. ಈ ಬಂಡಾಯದ ಅವಸರದಲ್ಲಿ ಗೋವಿಂದರಾಯನು ತನ್ನ ಸಂಗಡ ಇಬ್ಬರು ಸಣ್ಣ ಗಂಡುಮಕ್ಕಳನ್ನು ಮಾತ್ರ ಕರೆದುಕೊಂಡು ಹೋಗಿ

ದ್ದನು. ಅವನ ಇಬ್ಬರು ಹೆಣ್ಣುಮಕ್ಕಳು ತಮ್ಮ ತಮ್ಮ ಅತ್ತೆಯ ಮನೆಗಳಲ್ಲಿಯೂ, ಕೃಷ್ಣರಾಯನು ರಾಮರಾಯನ ಬಳಿಯಲ್ಲಿಯೂ ಇದ್ದರು. ಇದಕ್ಕಾಗಿ ಗೋವಿಂದರಾಯನಿಗೆ ತನ್ನ ಕುಟುಂಬದ ಚಿಂತೆಯು ಏನೂ ಇದ್ದಿಲ್ಲ. ಹೆಣ್ಣುಮಕ್ಕಳಲ್ಲಿ ಹಿರಿಯವಳನ್ನು ಪಾಂಡುರಂಗದಲ್ಲಿದ್ದ ಒಬ್ಬ ಶ್ರೀಮಂತನಿಗೂ, ಚಿಕ್ಕವಳನ್ನು ಗುಲ್ಬರ್ಗಾ ಹೊಸೂರ ದೀಕ್ಷಿತರ ಮನೆಗೂ ಕೊಟ್ಟಿತ್ತು. ಈ ಕಠಿಣಕಾಲದಲ್ಲಿ ಅವರಿಬ್ಬರು ಸುಸ್ಥಿತಿಯಿಂದ ಅತ್ತೆಯಮನೆಗಳಲ್ಲಿ ಸುಖಿಸಿದ್ದರು. ಕೃಷ್ಣರಾಯನಂತೂ ರಾಮರಾಯನ ಬಳಿಯಲ್ಲಿದ್ದದ್ದು ವಾಚಕರಿಗೆ ಗೊತ್ತೇ ಇದೆ. ಅಂತು ಗೋವಿಂದರಾಯನಿಗೆ ತನ್ನ ಸಂಗಡ ಕರೆದುಕೊಂಡು ಹೋದ ಇಬ್ಬರು ಗಂಡುಮಕ್ಕಳ ಚಿಂತೆಯು ಮಾತ್ರ ಇತ್ತು. ಅದಕ್ಕಾಗಿ ಅವನು ಯೋಗ್ಯವಾದ ಆಶ್ರಯವನ್ನು ಹುಡುಕಿಕೊಂಡು ಅಲ್ಲಿ ತನ್ನ ಚಿಕ್ಕಕುಟುಂಬದೊಡನೆ ನಿಶ್ಚಿಂತನಾಗಿದ್ದನು. ಆದರೆ ಗಂಗಾಧರಪಂತನ ಮನೆತನದವರಲ್ಲಿ ಇನ್ನುಳಿದವರ ಗತಿಯು ಏನಾಯಿತೆಂಬುವದು ಆಗ ಯಾರಿಗೂ ತಿಳಿಯಲಿಲ್ಲ; ಮತ್ತು ತಿಳಿದುಕೊಳ್ಳಲಿಕ್ಕೆ ಪ್ರಯತ್ನಮಾಡುವ ಸ್ಥಿತಿಯೂ ಆಗಿದ್ದಿಲ್ಲ.

ರಾಮರಾಯನು ತನ್ನ ಸಂಗಡ ಕೃಷ್ಣರಾಯನನ್ನೂ ತನ್ನ ಕುಟುಂಬವನ್ನೂ ಕರೆದುಕೊಂಡು ಹೋಗಿದ್ದನು. ಅದರ ಕೆಲವು ದಿವಸಗಳ ತರುವಾಯ ರಾಮರಾಯನು ಮನದಲ್ಲಿ ಯೋಚಿಸಿದ್ದೇನಂದರೆ — ನಾನು ನರಗುಂದಕರನ ಕಾರಭಾರಿಯು; ಮುಖ್ಯ ಸೇನಾಪತಿಯು. ಅದಕ್ಕಾಗಿ ನನ್ನ ಮೇಲೆ ಬ್ರಿಟಿಶ್ ಅಧಿಕಾರಿಗಳ ಕಣ್ಣು ಬಹಳ. ಆದದರಿಂದ ಅವರು ನನ್ನನ್ನು ಹುಡುಕಿಯೇ ಹುಡುಕುವರು. ಇಷ್ಟೇ ಅಲ್ಲ; ದುರ್ದೈವದಿಂದ ನನ್ನ ಕುಟುಂಬವೆಲ್ಲ ಅಳಿದು ಹೋಗುವ ಹೊತ್ತು ಬಂದರೂ ಬರಬಹುದು. ಹೀಗೆ ನಮ್ಮ ಸ್ಥಿತಿಯು ಇರುವದರಿಂದ, ಎರಡನೆಯವರ ಮಗನಾದ ಕೃಷ್ಣರಾಯನು ನಮ್ಮ ಹತ್ತರ ಇರುವದು ಅಪಾಯಕ್ಕೆ ಕಾರಣವಾಗಬಹುದು. ಆದದರಿಂದ ಇವನು ತನ್ನ ತಂದೆ ತಾಯಿಗಳ ಹತ್ತರ ಇರುವದೇ ಒಳಿತು. ಈ ಪ್ರಕಾರವಾಗಿ ಮನದಲ್ಲಿ ಬಂದ ಕೂಡಲೆ, ಅವನು ತನ್ನ ಹೆಂಡತಿಗೆ ಈ ಮಾತನ್ನು ತಿಳಿಸಿದನು. ಆಗ ಅವರಿಬ್ಬರೂ "ಕೃಷ್ಣರಾಯನು ಈ ಪ್ರಸಂಗದಲ್ಲಿ ನಮ್ಮ ಹತ್ತರ ಇರದಿದ್ದರೇ ನೆಟ್ಟಗಾಗುತಿತ್ತು." ಎಂದು ಮಾತನಾಡಿಕೊಂಡರು. ಆಗ ರಾಮರಾಯನು ಗೋವಿಂದರಾಯನಿರುವ ಸ್ಥಳವನ್ನು ಪ್ರಯತ್ನಪೂರ್ವಕವಾಗಿ ಗೊತ್ತು ಹಚ್ಚಿದನು. ಮತ್ತು ಆ ಸ್ಥಳದ ಶೀರ ಸಮೀಪದಲ್ಲಿಯೇ ಗುಡ್ಡದೊಳಗೆ ಕೃಷ್ಣರಾಯನನ್ನು ಯಾವದೋ ಒಂದು ನೆವದಿಂದ ಕರೆದುಕೊಂಡು ಹೋಗಿ, ನಾಲ್ಕು ಮೋಸದ ಮಾತುಗಳನ್ನು ಹೇಳಿ ಅಲ್ಲಿಯೇ ಬಿಟ್ಟು ಬಂದನು. ರಾಮರಾಯನು ಗೋವಿಂದರಾಯನ ದರ್ಶನವನ್ನು ತಕ್ಕೊಂಡು ಅವನ ಬಳಿಯಲ್ಲಿಯೇ ಕೃಷ್ಣರಾಯನನ್ನು ಬಿಟ್ಟು ಬರಬಹುದಾಗಿತ್ತು. ಆದರೆ

ಅವನು ಮನದಲ್ಲಿ ಯೋಚಿಸಿದ್ದೇನಂದರೆ:— ಈಗ ನಾನು ಗೋವಿಂದರಾಯನ ನ್ನು ಕಾಣಬಹುದು; ಮತ್ತು ಕೃಷ್ಣರಾಯನನ್ನು ಅವನಿಗೆ ಒಪ್ಪಿಸಿಯೂ ಬರಬಹು ದು. ಆದರೆ ಮುಂದೆ ಯಾವಾಗಲಾದರೂ ನಾನು ಗೋವಿಂದರಾಯನಿಗೆ ಭೆಟ್ಟಿ ಯಾದ ಸಂಗತಿಯು ಇಂಗ್ಲಿಷರಿಗೆ ತಿಳಿದರೆ, ಅವನ ಮೇಲೆ ಸುಳ್ಳು ಏನಾದರೊಂ ದು ಆರೋಪವು ಬಂದು ಪಾಪ! ನಿರಪರಾಧಿಯಾದ ಅವನು ತನ್ನ ಹೆಂಡ ರು ಮಕ್ಕಳೊಡನೆ ಪ್ರಾಣಸಂಕಟಕ್ಕೆ ಗುರಿಯಾಗಬೇಕಾದೀತು? ಆದದರಿಂದ ಹಾ ಗೆ ಮಾಡುವದು ಯೋಗ್ಯವಲ್ಲ, ಹೀಗೆ ವಿಚಾರಮಾಡಿ ಕೃಷ್ಣರಾಯನು ಸಣ್ಣವ ನಿದ್ದರೂ, ಗೋವಿಂದರಾಯನು ಇದ್ದ ಊರ ಸಮೀಪದಲ್ಲಿಯೇ ಗುಡ್ಡದಲ್ಲಿ ಅವನ ನ್ನೊಬ್ಬನನ್ನೇ ಬಿಟ್ಟು ತಾನು ಓಡಿಹೋದನು.

ಕೃಷ್ಣರಾಯನು ಚಿಕ್ಕಂದಿನಿಂದಲೂ ರಾಮರಾಯನ ಬಳಿಯಲ್ಲಿರುತ್ತಿದ್ದ ನು. ಇವನು ಬಾಲ್ಯದಲ್ಲಿಯೇ ತನ್ನ ಗುಣಗಳಿಂದ ರಾಮರಾಯನ ಪ್ರೀತಿಯ ನ್ನೂ ಯಜಮಾನನಾದ ಭಾಸ್ಕರರಾಯನ ಮಮತೆಯನ್ನೂ ಸಂಪಾದಿಸಿದನು. ರಾ ಮರಾಯನ ಹೆಂಡತಿಯಾದ ಸೀತಾಬಾಯಿಯು ಕೃಷ್ಣರಾಯನ ತಾಯಿಗೆ ಅತ್ತೆ ಯಾಗಬೇಕು. ಇವಳು ಬಹು ವಿಲಕ್ಷಣ ಸ್ವಭಾವದವಳಿದ್ದಳು. ಇವಳ ಮನಃ ಪೂರ್ವಕವಾದ ಪ್ರೀತಿಯು ಕೃಷ್ಣರಾಯನ ಮೇಲೆ ಇದ್ದಿಲ್ಲ. ಆದರೂ ರಾಮರಾ ಯನ ಮುಂದೆ ಇವಳ ಆಟವೇನೂ ನಡೆಯುತ್ತಿದ್ದಿಲ್ಲ. ಕೃಷ್ಣರಾಯನು ಹುಟ್ಟಿ ದಾಗ ಜೋಯಿಸನು ಜನ್ಮಪತ್ರಿಕೆಯನ್ನು ನೋಡಿ ಹೀಗೆ ಭವಿಷ್ಯವನ್ನು ಹೇಳಿದ್ದ ನು. “ಈ ಹುಡುಗನು ಚಿಕ್ಕಂದಿನಲ್ಲಿಯೇ ಪರಾಕ್ರಮದಿಂದ ಲೋಕಪ್ರೀತಿಯ ನ್ನು ಸಂಪಾದನೆ ಮಾಡಿ ಅಪಾರವಾದ ದ್ರವ್ಯವನ್ನೂ ಕೀರ್ತಿಯನ್ನೂ ಗಳಿಸು ವನು. ದೊಡ್ಡ ದೊಡ್ಡ ಅಧಿಕಾರದ ಕೆಲಸಗಳನ್ನು ಮಾಡುವನು. ತನ್ನ ಶತ್ರುಗ ಳನ್ನು ಬಗ್ಗಿಸಿ ಅಧೀನರನ್ನು ಮಾಡಿಕೊಳ್ಳುವನು. ಆದರೆ ತನ್ನ ವಯಸ್ಸಿನ ೨೦ ನೆಯ ವರ್ಷದಲ್ಲಿ ಮಕ್ಕಳಿಲ್ಲದೆ ಮರಣ ಹೊಂದುವನು. ಚಿಕ್ಕಂದಿನಲ್ಲಿಯೇ ಈ ಹುಡುಗನ ಮೇಲೆ ಒಂದು ಭಯಂಕರವಾದ ಸಂಕಟವು ಬರುವದು. ಆಗ ತನ್ನ ಪರಾಕ್ರಮದಿಂದಲೇ ಇವನು ಆ ಸಂಕಟದೊಳಗಿಂದ ಪಾರಾಗಿ ಆನಂದ ದಿಂದಿರುವನು.”

ಈ ಪ್ರಕಾರವಾಗಿ ಜೋಯಿಸನು ಹೇಳಿದ ಭವಿಷ್ಯವು, ಕೃಷ್ಣರಾಯನು ಚಿ ಕ್ಕವನಿರುವಾಗಲೇ ಗೋವಿಂದರಾಯನ ಅನುಭವಕ್ಕೆ ಬರತೊಡಗಿತು.

ರಾಮರಾಯನು ಕೃಷ್ಣರಾಯನನ್ನು ಅಡವಿಯಲ್ಲಿ ಬಿಟ್ಟು ಹೋದ ಬಳಿಕ ಅಲ್ಲಿ ಒಬ್ಬ ಕುರುಬನು ಅವನಿಗೆ ಭೆಟ್ಟಿಯಾದನು. ಆ ಕುರುಬನು ಯಾವ ಊ

ರಲ್ಲಿ ಮನೆಮಾಡಿಕೊಂಡು ಇರುತ್ತಿದ್ದನೋ, ಅದೇ ಊರಲ್ಲಿ ಗೋವಿಂದರಾಯನು ತನ್ನ ಹೆಂಡರು ಮಕ್ಕಳೊಡನೆ ಇರುತ್ತಿದ್ದನು. ನರಗುಂದದಿಂದ ಓಡಿ ಬಂದ ಬೇರೆ ನಾಲ್ಕೈದು ಮನೆತನದವರೂ ಅಲ್ಲಿಯೇ ಇರುತ್ತಿದ್ದರು. ಕುರುಬನು ಭೆಟ್ಟಿಯಾದ ಕೂಡಲೆ ಕೃಷ್ಣರಾಯನು ತನ್ನ ಸವಿನುಡಿಗಳಿಂದ ಅವನ ಮನಸ್ಸನ್ನು ಒಲಿಸಿಕೊಂಡನು. ಆಗ ಕೃಷ್ಣರಾಯನ ಮೇಲೆ ಬಹಳ ಪ್ರೀತಿಯುಂಟಾಗಿ ಆ ಕುರುಬನು ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಗೋವಿಂದರಾಯನೂ ಸತ್ಯಭಾಮಾಬಾಯಿಯೂ ಕೃಷ್ಣರಾಯನನ್ನು ಕಂಡಕೂಡಲೆ ಆನಂದಭರಿತರಾಗಿ ವಾತ್ಸಲ್ಯದಿಂದ ಮನೆಗೆ ಕರೆದುಕೊಂಡು ಹೋದರು. ಆಗ ಅವರು "ಇವನನ್ನು ಎಲ್ಲಿಂದ ಕರೆದುಕೊಂಡು ಬಂದೆ?" ಎಂದು ಆ ಕುರುಬನನ್ನು ಕೇಳಿದರು. ಆಗ ಕೃಷ್ಣರಾಯನೇ ತನ್ನ ಹಿಂದಿನ ಎಲ್ಲ ಸಂಗತಿಯನ್ನು ಅವರಿಗೆ ತಿಳಿಸಿದನು; ಮತ್ತು ಅಲ್ಲಿ ನೆರೆದ ಎಲ್ಲ ಜನರ ಎದುರಿಗೆ "ರಾಮರಾಯನು ನನ್ನನ್ನು ಮೋಸದಿಂದ ಇಲ್ಲಿಯೇ ಸಮೀಪದಲ್ಲಿರುವ ಅಡವಿಯಲ್ಲಿ ಬಿಟ್ಟುಹೋದನು." ಎಂದು ಸ್ಪಷ್ಟವಾಗಿ ಹೇಳಿದನು. ಗೋವಿಂದರಾಯನೂ ಸತ್ಯಭಾಮಾಬಾಯಿಯೂ ಹೊಸದಾಗಿ ಪುತ್ರಲಾಭವಾದಷ್ಟು ಸಂತಸದಿಂದ ಮಗನನ್ನು ಮೇಲಿಂದ ಮೇಲೆ ಮುಂಡಾಡಿದರು.

ಇತ್ತ ನರಗುಂದದ ಬಂಡಾಯದಲ್ಲಿ ಸೇರಿದ ಜನರನ್ನು ಹಿಡಿದು ಬಂದಿಯಲ್ಲಿ ಇಡುತ್ತಿದ್ದರೆಂದು ಹಿಂದೆ ಒಂದು ಸಾರೆ ಹೇಳಿದೆಯಷ್ಟೇ? ನರಗುಂದದಲ್ಲಿ ಬಂದಿಯವರನ್ನು ಇಡುವದಕ್ಕಾಗಿ ಎರಡು ಸ್ಥಳಗಳನ್ನು ಗೊತ್ತುಮಾಡಿದ್ದರು. ಕೇವಲ ಸಂಶಯದಿಂದ ಮಾತ್ರ ಹಿಡಿದ ಜನರು ಸಾಧಾರಣ ಪ್ರತಿಯವರೆಂದು ಅವರನ್ನು ಇಡುವದಕ್ಕಾಗಿ ಒಂದು ಸ್ಥಳವು ಗೊತ್ತುಮಾಡಲ್ಪಟ್ಟಿತ್ತು. ನಿಶ್ಚಯವಾಗಿ ಅಪರಾಧಿಗಳು ಅಂದರೆ ಬಂಡಾಯದಲ್ಲಿ ನಿಜವಾಗಿ ಸೇರಿದವರೆಂದು ಗೊತ್ತಾದವರಿಗಾಗಿ ಬೇರೊಂದು ಸ್ಥಳವು ಗೊತ್ತುಮಾಡಲ್ಪಟ್ಟಿತ್ತು. ಇವೆರಡೂ ಸ್ಥಳಗಳು ಬಹಳ ವಿಶಾಲವಾಗಿದ್ದವು. ಆದರೂ ಸ್ಥಳವು ಸಾಲದಂತಾಗಿ ಪಟ್ಟಣವೆಯೇ ಆಗಿತ್ತು. ನ್ಯಾಯ್ಯವಿಚಾರಣೆಯಾದ ಬಳಿಕ ಈ ಜನರು ತಮ್ಮ ತಮ್ಮ ಅಪರಾಧಕ್ಕನುಗುಣವಾಗಿ ಶಿಕ್ಷೆಯನ್ನು ಭೋಗಿಸಬೇಕಾಗುತ್ತಿತ್ತು. ನರಗುಂದಕರನ ಜನರಿಗೆ ಅಪಜಯವಾದ ಕೂಡಲೇ ಅವರು ಓಡಿಹೋದರು; ಬ್ರಿಟಿಶರ ದಂಡು ಒಳಹೊಕ್ಕು ಊರನ್ನು ಹಸ್ತಗತಮಾಡಿಕೊಂಡಿತು; ಆಗ ಪ್ರಾಣಹಾನಿಯು ಸ್ವಲ್ಪವೂ ಆಗಿದ್ದಿಲ್ಲ. ಆದರೆ ಈ ನ್ಯಾಯ್ಯವಿಚಾರಣೆಯಿಂದಾದ ಶಿಕ್ಷೆಯ ಕಾಲಕ್ಕೆ ನರಗುಂದದ ಜನರಿಗಾದ ಸಂಕಟವನ್ನು ಈಗಲೂ ಎಷ್ಟೋ ವಯೋವೃದ್ಧರು ಹೇಳುವದನ್ನು ಕೇಳಿದರೆ ಎದೆಗರಗಿ ನೀರಾಗುತ್ತದೆ! ಮೈಮೇಲೆ ರೋಮಾಂಚಗಳೇಳುತ್ತವೆ!

ಬಂಡಾಯದಲ್ಲಿ ಸೇರಿದ ಜನರು ಒಬ್ಬರಹಿಂದೊಬ್ಬರಂತೆ ಸಿಕ್ಕರು. ಆದರೆ ಭಾಸ್ಕರರಾಯನು, ರಾಘೋಪಂತನು, ರಾಮರಾಯನು ಮತ್ತು ವಿಷ್ಣುವು ಇವರೂ ಮುಖ್ಯ ಮುಖ್ಯ ಮುತ್ಸದ್ದಿಗಳಾದ ಇನ್ನೂ ಮೂರು ನಾಲ್ಕು ಜನರೂ ಸಿಕ್ಕಲಿಲ್ಲ. ನಿಜವಾಗಿ ವಿಚಾರಮಾಡಿದರೆ, ಬ್ರಿಟಿಶರ ಕಡು ವೈರಿಗಳು ಅವರೇ! ಆದದರಿಂದ ಬ್ರಿಟಿಶ್ ಅಧಿಕಾರಿಗಳಿಗೆ ಸಮಾಧಾನವಾಗಲಿಲ್ಲ! ಅವರನ್ನು ಶೋಧಿಸುವದಕ್ಕಾಗಿ ಸಾವಿರಾರು ರೂಪಾಯಿಗಳನ್ನು ವೆಚ್ಚಮಾಡಿದರು. ಅವರನ್ನು ಹಿಡಿದು ಕೊಟ್ಟವರಿಗೆ ದೊಡ್ಡ ದೊಡ್ಡ ಪಾರಿತೋಷಕಗಳನ್ನು ಕೊಡುವೆವೆಂದು ಪ್ರಸಿದ್ಧಮಾಡಿದರು. ಆದರೂ ಆಗ ಶೋಧವಾಗಲಿಲ್ಲ!

ಮುಂದೆ ಕೆಲವು ದಿವಸಗಳಾದ ಮೇಲೆ ರಾಘೋಪಂತನು ಸಿಕ್ಕನು. 'ರಾಮರಾಯನು ಕೃಷ್ಣರಾಯನನ್ನು ಗೋವಿಂದರಾಯನ ಕಡೆಗೆ ಕಳಿಸಿಕೊಟ್ಟನು.' ಎಂಬ ವಾರ್ತೆಯೂ ತಿಳಿಯಿತು. ಮೇಲಾಗಿ ಗೋವಿಂದರಾಯನಿದ್ದ ಸ್ಥಳವೂ ಗೊತ್ತಾಯಿತು. ಕೂಡಲೆ ಬ್ರಿಟಿಶರ ಒಬ್ಬ ಸೇನಾಪತಿಯು ಗೋವಿಂದರಾಯನಿದ್ದ ಊರಿಗೆ ಹೊರಟನು. ಆ ಊರು ಕುರುಬರ ವಸತಿಯಾಗಿತ್ತು. ಕುರುಬರಲ್ಲದವರೂ ಕೆಲವರು ಅಲ್ಲಿ ಇದ್ದರು. ಆದರೆ ಅವರೆಲ್ಲರೂ ಬಹುತರವಾಗಿ ಕುರುಬರಂತೆಯೇ ಇದ್ದರು. ದಂಡಿನವರು ಬಂದರೆಂಬ ವಾರ್ತೆಯು ಆ ಬಡಪ್ರಾಣಿಗಳಿಗೆ ತಿಳಿದ ಕೂಡಲೆ, ಅವರು ಒಂದೇ ಸವನೆ ದೊಡ್ಡ ಧ್ವನಿಯಿಂದ ಅಳಲಾರಂಭಿಸಿದರು. ಪ್ರತಿಯೊಬ್ಬನ ಬಾಯಿಂದ 'ಹೇ ಜಗನ್ಮಾತೇ, ರಕ್ಷಿಸು' ಎಂಬ ಉದ್ಗಾರವು ಹೊರಡಹತ್ತಿತು! ಗೋವಿಂದರಾಯನನ್ನು ಹುಡುಕುವದಕ್ಕಾಗಿ ಆ ದಂಡು ಬಂದಿದೆಯೆಂಬ ಸುದ್ದಿಯು ಕೂಡಲೆ ಊರಲ್ಲಿ ಹರಡಿತು. ಆ ಸುದ್ದಿಯು ಗೋವಿಂದರಾಯನ ಮತ್ತು ಸತ್ಯಭಾಮಾಬಾಯಿಯ ಕಿವಿಗೆ ಬಿತ್ತು. ಆಗ ಮಟಮಟ ಮಧ್ಯಾಹ್ನವಾಗಿತ್ತು. ಊರೊಳಗಿನ ಜನರೆಲ್ಲರೂ ಊಟದ ಗಡಿಬಿಡಿಯಲ್ಲಿದ್ದರು. ಬ್ರಿಟಿಶರ ದಂಡು ಊರೊಳಗೆ ಬಂದಿತೆಂಬ ವಾರ್ತೆಯು ಕಿವಿಗೆ ಬಿದ್ದ ಕೂಡಲೆ ಊಟದ ಸಿದ್ಧತೆಯು ಇದ್ದಕ್ಕಿದ್ದಲ್ಲಿಯೇ ಉಳಿಯಿತು! ಜೀವವನ್ನು ಹೇಗೆ ಉಳಿಸಿಕೊಳ್ಳಬೇಕೆಂಬ ಚಿಂತೆಯು ಪ್ರತಿಯೊಬ್ಬನಲ್ಲಿ ಉಂಟಾಯಿತು! ಸತ್ಯಭಾಮಾಬಾಯಿಯು ಮಕ್ಕಳನ್ನು ಮುಂದೆ ಕುಳ್ಳಿರಿಸಿಕೊಂಡು ಚಿಕ್ಕ ಚಿಕ್ಕ ತುತ್ತುಗಳನ್ನು ಮಾಡಿ ತಿನಿಸುತ್ತಿದ್ದಳು. ಕೃಷ್ಣರಾಯನು ಬಹು ದಿನಗಳ ಮೇಲೆ ಬಂದಂಥವನು! ಮತ್ತು ತನ್ನ ಚಾಪಲ್ಯದಿಂದ ಜನರ ಮನಸ್ಸನ್ನು ಒಲಿಸಿಕೊಳ್ಳುವಂಥವನು! ಈಗಂತೂ ಅವನು ತನ್ನ ಚಾತುರಿಯ ಸವಿ ನುಡಿಗಳಿಂದ ಮಾತಾಪಿತೃಗಳನ್ನು ಕೌತುಕಗೊಳಿಸುತ್ತಿದ್ದನು! ಇಂತಹ ಸಂದರ್ಭದಲ್ಲಿ ಮೇಲಿನ ದುಷ್ಟವಾರ್ತೆಯನ್ನು ಕೇಳಿದ ಕೂಡಲೆ, ಅವರ ಸ್ಥಿತಿಯು ಹೇಗಾಗಿರಬಹುದೆಂಬದನ್ನು ವಾಚಕರೇ ತರ್ಕಿಸಲಿ! ಆ ವಾರ್ತೆಯೆಂದರೆ ಪ್ರಾಣಸಂಕಟವು! ಎಂದ ಮೇಲೆ ಯಾರು ಗಂಟಲ

ದಲ್ಲಿ ತುತ್ತು ಇಳಿಯಬೇಕು? ಮಕ್ಕಳನ್ನು ಉಣಿಸುವ ಮಮತೆಯು ಹೇಗೆ ಸ್ಥಿರವಿರಬೇಕು? ಗೋವಿಂದರಾಯನ ಮುಖವು ಬಾಡಿತು! ಸತ್ಯಭಾಮಾಬಾಯಿಯಂತೂ ಗೋಡೆಗೆ ಆತು ಕುಳಿತವಳು ಗೋಡೆಯಂತೆಯೇ ಸ್ತಬ್ಧಳಾದಳು. ಅವಳ ಎರಡೂ ಕಣ್ಣುಗಳಿಂದ ಒಂದೇ ಸವನೆ ಅಶ್ರುಪ್ರವಾಹವು ನಡೆದಿತ್ತು. ಆ ಕಣ್ಣೀರುಗಳಿಂದ ಮಾತ್ರ ಅವಳು ಜೀವದಿಂದಿರುವಳೆಂದು ಊಹಿಸಬೇಕಾಗಿತ್ತು. ಗಣಪತರಾಯನೂ ಸಖಾರಾಮಪಂತನೂ ಚಿಕ್ಕವರು ಅವರಿಗೆ ಆಗ ವಿಶೇಷವೇನೂ ತಿಳಿಯುತ್ತಿದ್ದಿಲ್ಲ. ಆದರೂ ಆ ಹುಡುಗರು ಬೆದರಿದರು! ಕೃಷ್ಣರಾಯನು ಮಾತ್ರ ಧೈರ್ಯದಿಂದಿದ್ದನು. ಆತನ ಮುಖಮುದ್ರೆಯು ಮಾತ್ರ ಸಾಶಂಕವಾಗಿತ್ತು. ಒದಗಿದ ಪ್ರಸಂಗದ ಪರಿಣಾಮವೇನಾಗಬಹುದೆಂದು ಆ ಬಾಲಕೃಷ್ಣನು ಆಲೋಚಿಸುತ್ತಿದ್ದನು ಚಿಕ್ಕವನಾಗಿದ್ದರೂ ಅವನ ಮನಸ್ಸು ಉನ್ನತವಿತ್ತು! ಯುಕ್ತಿಗಳು ಬಹು ಬೇಗ ಅವನಿಗೆ ಹೊಳೆಯುತ್ತಿದ್ದವು ಕೆಲ ಹೊತ್ತು ಧ್ಯಾನಿಸಿದಂತೆ ಮಾಡಿಕೊಂಡು ಅವನು ತನ್ನ ತಂದೆಯನ್ನು ಕುರಿತು ಮಾತನಾಡಿದನು.

ಕೃಷ್ಣ:— ಅಪ್ಪಾ ಇಷ್ಟೊಂದು ಚಿಂತೆ ಯಾಕೆ? ದಂಡಿನವರು ಇಲ್ಲಿಗೆ ಬಂದರೇನಾಯಿತು? ನಾವು ಇಷ್ಟೇಕೆ ಹೆದರಬೇಕು? ನಾವು ಯಾರಿಗೆ ಏನನ್ನು ಮಾಡಿದ್ದೇವೆ?

ಗೋವಿಂದ:— ಮಗೂ, ನೀನನ್ನುವದೆಲ್ಲ ನಿಜ. ಆದರೆ—— ಆದರೆ ಈಗಿನ ಕಾಲದಲ್ಲಿ ಸಂಶಯಭೂತದಿಂದ ಏನು ಅನರ್ಥವಾದೀತೆಂಬದನ್ನು ಹೇಳಲಿಕ್ಕೆ ಬರುವಂತಿಲ್ಲ! ಕೇವಲ ಸಂಶಯದ ಮೂಲಕವಾಗಿಯೇ ಎಷ್ಟೋ ಜನರು ದೇಹಾಂತ ದಂಡವನ್ನು ಹೊಂದಿದರು! ನಾವಾದರೂ ಅದೇ ವರ್ಗದಲ್ಲಿ ಬರತಕ್ಕವರೇ. ಎಂದ ಮೇಲೆ ‘ಇಷ್ಟೊಂದು ಚಿಂತೆಯೇಕೆ?’ ಎಂದೇನು ಕೇಳುತ್ತೀ? ನಿನ್ನ ಪ್ರಶ್ನವು ದಡ್ಡತನದ್ದಲ್ಲವೆ?

ಕೃಷ್ಣ:-ಅಪ್ಪಾ, ತಮ್ಮ ಮುಂದೆ ನಾನು ಎಂದಾದರೂ ದಡ್ಡನೇ ಸರಿ. ಆದರೆ ನಮ್ಮನ್ನು ಹಿಡಿದೊಯ್ದು ಕೂಡಲೆ ತೋಪಿನ ಬಾಯಿಗೆ ಕೊಡುವದಿಲ್ಲವಷ್ಟೇ? ಗಲ್ಲಿಗೇರಿಸುವದಿಲ್ಲವಷ್ಟೇ? ಏನಾದರೂ ಸ್ವಲ್ಪ ನ್ಯಾಯ್ಯವಿಚಾರಣೆಯನ್ನು ಮಾಡುವರಷ್ಟೇ? ಆ ಕಾಲಕ್ಕೆ ನಮಗೂ ಬಂಡಾಯಕ್ಕೂ ಏನೂ ಸಂಬಂಧವಿಲ್ಲೆಂದು ಸಿದ್ಧಮಾಡಿ ನ್ಯಾಯಾಧೀಶನ ಮನವರಿಕೆಯನ್ನು ಮಾಡಿಕೊಟ್ಟರಾಯಿತು. ಆದರೆ ಅದನ್ನು ಇಲ್ಲಿ ವಿಚಾರಮಾಡುತ್ತ ಕುಳಿತುಕೊಳ್ಳುವದು ಮಾತ್ರ ಕೆಲಸದ್ದಲ್ಲ! ಈಗ ನನಗೆ ತೋರುವದೇನಂದರೆ— ನಮ್ಮನ್ನು ಹುಡುಕುತ್ತ ಬಂದವರಿಗೆ ಯಾವ ತರದ ಕಷ್ಟವನ್ನೂ ಆಗಗೊಡೋಣಬೇಡ. ಸ್ವಸಂತೋಷದಿಂದಲೇ ನಾವು ಅವರ ಅಧೀನರಾಗೋಣ.

ಎಂದರೆ ಮುಂದೆ ನ್ಯಾಯವಿಚಾರಣೆಯಾಗುವಾಗ ನಮ್ಮನ್ನು ಹಿಡಿದುಕೊಂಡು ಹೋಗುವ ಜನರು ಕೂಡ ನಮಗೆ ಸಹಾಯಕರಾಗಬಹುದು.

ಮೇಲೆ ಹೇಳಿದಂತೆ ಯುಕ್ತಿಯುಕ್ತವಾದ ಅನುಭವದ ಮಾತುಗಳನ್ನು ಆ ಚಿಕ್ಕ ಬಾಲಕನ ಬಾಯಿಂದ ಕೇಳಿದ ಕೂಡಲೆ ಗೋವಿಂದರಾಯನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಆಗಲವನು:— ದೇಶದಲ್ಲಿ ಶಾಂತತೆ ಇದ್ದರೆ ನೀನು ಹೇಳುವ ಮಾತು ಸರಿಯೆನಿಸುತ್ತಿತ್ತು. ನೀನು ಎಂದಂತೆಯೆ ಎಲ್ಲ ಸಂಗತಿಗಳು ಸಂಭವಿಸಬಹುದಾಗಿತ್ತು. ಆದರೆ ಇದು ಅವ್ಯವಸ್ಥೆಯ ಕಾಲವು. ಆದುದರಿಂದ ಮನಸ್ಸಿನಲ್ಲಿ ಶಂಕೆಯು ಉತ್ಪನ್ನವಾಗುತ್ತದೆ. ಮನಸ್ಸಿನ ಧರ್ಮವೇ ಅಂತಹದು. ತರ್ಕಕುತರ್ಕಗಳು ಅದರಲ್ಲಿ ನಡೆಯತಕ್ಕವೇ. ಆದರೂ ನೀನು ಹೇಳುವಂತೆ ಆ ತರ್ಕಗಳ ಉಪಯೋಗವು ಸದ್ಯಕ್ಕೆ ಏನೂ ಆಗುವಂತಿಲ್ಲವೆಂಬುದು ನಿಜ. ಆದುದರಿಂದ ಸುಮ್ಮನೆ 'ಹಾನ, ದೋಷ' ಮಾಡುತ್ತ ಕೂಡ್ರುವದರಲ್ಲಿ ಏನರ್ಥವಿದೆ? ಸಂಕಟದ ಸುದ್ದಿಯನ್ನು ಕೇಳಿ ಮನಸ್ಸಿಗೆ ಕಳಕಳಿಸುವದೇನೋ ನಿಜ. ಆದರೆ ಕೇವಲ ಕಳಕಳಿಸಿಕೊಂಡರೆ ಆಗುವದೇನು? ಆದುದರಿಂದ ಹೀಗೆ ಮೋರೆಯನ್ನೊಣಗಿಸಿಕೊಂಡು ಕುಳಿತುಕೊಳ್ಳುವದರಲ್ಲಿ ಅರ್ಥವಿಲ್ಲೆಂದು ನೀನು ಹೇಳಿದ ಮಾತು ಅಕ್ಷರಶಃ ಸತ್ಯವಿದೆ. ನನಗದು ಸಂಪೂರ್ಣ ಒಪ್ಪಿಗೆಯಾಗಿದೆ. ಯಾಕಂದರೆ, ನಮ್ಮನ್ನು ಹುಡುಕುವದಕ್ಕಾಗಿಯೇ ಇಲ್ಲಿಯವರೆಗೆ ಬಂದ ವೈರಿಗಳು ಹಿಡಿದೊಯ್ಯದೆ ಎಂದೂ ಬಿಡಲಾರರು. ಎಂದ ಮೇಲೆ ನೀನು ಹೇಳಿದಂತೆ ನಾವಾಗಿಯೇ ಅವರ ವಶರಾಗುವದು ಹೆಚ್ಚು ಒಳ್ಳೆಯದು. ಅದರಿಂದ ಮುಂದೆ ಒದಗತಕ್ಕ ಕಷ್ಟದ ಪ್ರಖರತೆಯಾದರೂ ಕಡಿಮೆಯಾಗಬಹುದು! ನಿನ್ನ ಈ ಅಭಿಪ್ರಾಯವು ಸರ್ವಮಾನ್ಯವಿದೆ. ನಡೆ ಹಾಗಾದರೆ! ಈಗಿಂದೀಗಲೆ ನಿನ್ನ ಅಂಗಿಟೊಪ್ಪಿಗೆಗಳನ್ನು ಹಾಕಿಕೊಂಡು ಬಾ. ನಾನೂ ಪಾಗೋಟೆಯನ್ನು ಹಾಕಿಕೊಳ್ಳುತ್ತೇನೆ. ವೈರಿಗಳು ನಮ್ಮ ಹೊಸ್ತಿಲಕ್ಕೆ ಬರುವದರೊಳಗಾಗಿಯೇ, ನಾವೇ ಅವರಿದ್ದಡೆಗೆ ಹೋಗೋಣ.

ಹೀಗೆ ನಿಶ್ಚಯಿಸಿ ಇಬ್ಬರೂ ಎದ್ದರು. ಇದನ್ನು ತಿಳಿದ ಕೂಡಲೆ ಮುಂದಿನ ಪರಿಣಾಮದ ಭಯಂಕರ ಚಿತ್ರವು ಕಣ್ಣುಮುಂದೆ ಕಟ್ಟಿದಂತಾಗಿ ಸತ್ಯಭಾಮಾಬಾಯಿಯು ದೊಡ್ಡ ಧ್ವನಿ ತೆಗೆದು ಒಮ್ಮಿಂದೊಮ್ಮೆಲೆ ಅಳಹತ್ತಿದಳು; ಮತ್ತು ಸಾಗರಬಿಗ್ದಿ ಕೃಷ್ಣರಾಯನನ್ನು ಗಟ್ಟಿಯಾಗಿ ಅಪ್ಪಿಕೊಂಡು ಅಳುತ್ತಲೇ ಮಾತನಾಡಿದಳು. "ಮಗು, ನೀನು ಹೋಗಬೇಡ ಕಂದಯ್ಯಾ? ಗೋವಿಂದರಾಯನಿಗೆ ಈ ನನ್ನ ಚಂದ್ರಮನನ್ನು ಆ ಕಾಲನ ಕೈಯಲ್ಲಿ ಕೊಡಬೇಡಿರಿ. ಸೆರಗೊಡ್ಡಿ ಬೇಡುತ್ತೇನೆ. ನನ್ನೊಬ್ಬಳನ್ನೇ ಈ ಬಿಡದಿಯಲ್ಲಿ ಅನಾಥೆಯನ್ನಾಗಿ ಬಿಟ್ಟು ನೀವೂ ಹೋಗಬೇಡಿರಿ." ಹೀಗೆಂದು ಅನೇಕವಿಧದಿಂದ ವಿಲಾಪಮಾಡಹತ್ತಿದಳು. ಶೋಕಾತಿರೇಕದಿಂದ ಅವಳು ನಿರ್ವಿಣ್ಣ

ಯಾದಳು. ಎದ್ದು ನಿಲ್ಲುವದು ಕೂಡ ಆವಳಿಂದಾಗಲಿಲ್ಲ. ಕೃಷ್ಣರಾಯನನ್ನು ತೊಡೆಯ ಮೇಲೆ ಇಟ್ಟುಕೊಂಡು ಅಲ್ಲಿಯೇ ಕುಳಿತಳು! ಎದೆಯನ್ನು ಕರಗಿಸುವ ಆ ನೋಟವನ್ನು ನೋಡಿ, ಗೋವಿಂದರಾಯನ ಕಣ್ಣೊಳಗಿಂದ ನೀರುಗಳು ಒಂದೇ ಸವನೆ ಸುರಿಯಹತ್ತಿದವು. ತಂದೆತಾಯಿಗಳಿಬ್ಬರೂ ಅಳತೊಡಗಿದ ಕೂಡಲೆ ಗಣಪತರಾಯನೂ ಸಖಾರಾಮಪಂತನೂ ಇಬ್ಬರೂ ಅಳಹತ್ತಿದರು. ಸುಮಾರು ಅರ್ಧಘಂಟೆಯ ಹಿಂದೆ ಯಾವ ಕುಟುಂಬದಲ್ಲಿ ಆನಂದಸಾಮ್ರಾಜ್ಯವು ಹರಡಿತ್ತೋ, ಅಲ್ಲಿಯೇ ಈಗ ದುಃಖದ ಹೃದಯಭೇದಕ ಸ್ವರೂಪವು ದೃಷ್ಟಿಗೆ ಬೀಳುತ್ತಿತ್ತು. ವಾಚಕರೇ, ಸುಖದುಃಖಗಳ ಚಕ್ರವು ಹೇಗಿದೆ? ನೋಡಿರಿ. ಯಾವ ಕಾಲಕ್ಕೆ ಹೇಗೆ ಪ್ರಸಂಗ ಬಂದೀತೆಂಬದನ್ನು ಹೇಗೆ ಹೇಳಲಾದೀತು?

ಕೃಷ್ಣರಾಯನು ಈ ಶೋಕಾವರ್ತದ ನಡುವೆ ಇದ್ದನು. ಆದರೂ ಅವನು ಸ್ವಭಾವದಿಂದಲೇ ಧೈರ್ಯಶಾಲಿಯಾದ ಮೂಲಕ ಹೆದರಿದ್ದಿಲ್ಲ. ಈ ಶೋಕನದಿಯಿಂದ ಎಲ್ಲರನ್ನೂ ದಾಟಿಸಬೇಕೆಂದು ಅವನು ಆಲೋಚಿಸುತ್ತಿದ್ದನು. ಕೊನೆಗೆ ಅವನು ಹೀಗೆ ಹೇಳಿದನು. “ಅವ್ವಾ, ನೀನು ಹೀಗೆ ಅಳಬೇಡ ಕಂಡೆಯಾ! ನೀನು ಹೀಗೆ ವಿಪರೀತ ದುಃಖಮಾಡುವದರಿಂದ ಅಪ್ಪನ ಕಣ್ಣಲ್ಲಿ ನೀರು ಬರುತ್ತವೆ. ನೀವಿಬ್ಬರೂ ಅಳುವದನ್ನು ನೋಡಿ, ಗಣಪತರಾಯನೂ ಸಖಾರಾಮಪಂತನೂ ಏನೂ ತಿಳಿಯದೆ ಇದ್ದರೂ ಅಳುತ್ತಾರೆ. ಆದದರಿಂದ ಮೊದಲು ನೀನು ಸುಮ್ಮನಾಗು. ಎಷ್ಟು ಅತ್ತರೂ, ಕೇವಲ ಅಳುವದರಿಂದ ಬಂದ ಸಂಕಟವು ದೂರಾಗಲಾರದೆಂಬದಂತೂ ಕಟ್ಟಿಟ್ಟದ್ದೇ! ಎಂದ ಮೇಲೆ ವ್ಯರ್ಥವಾಗಿ ಅಳುವದೆಂದರೆ ದಡ್ಡತನವೇ ಸರಿ. ಧೈರ್ಯವನ್ನು ತಂದುಕೋ. ನಾನೂ ಅಪ್ಪನೂ ಇಬ್ಬರೂ ಹೋಗುವೆವು. ಅಂದ ಮೇಲೆ ನಮಗ ಯಾರ ಹೆದರಿಕೆ? ನೀನು ಸ್ವಲ್ಪವೂ ಅಂಜಬೇಡ. ನಾವು ಅಲ್ಲಿಗೆ ಹೋಗಿ ನಮಗೂ ಬಂಡಾಯಕ್ಕೂ ಏನೂ ಸಂಬಂಧವಿಲ್ಲ. ಎಂದು ಆ ಸಾಹೇಬನಿಗೆ ಸ್ಪಷ್ಟವಾಗಿ ತಿಳಿಸಿ ನಾಲ್ಕಾರು ದಿವಸಗಳಲ್ಲಿ ತಿರುಗಿ ಬರುವೆವು. ಚಿಂತಿಸಬೇಡ.

ಈ ಪ್ರಕಾರದ ವಿಚಾರಪೂರ್ಣವಾದ ಮಾತನ್ನು ಕೇಳಿ, ಮಾತಾಪಿತೃಗಳಿಬ್ಬರೂ ಮಗನನ್ನು ಮುದ್ದಿಟ್ಟರು. ‘ಎಷ್ಟೇ ದುಃಖಮಾಡಿದರೂ ವೈರಿಗಳ ಕಡೆಗೆ ಹೋಗಲೇಬೇಕು. ಅದೆಂದಿಗೂ ಬಿಟ್ಟಿದ್ದಲ್ಲ.’ ಎಂದು ತಿಳಿದು ಆ ಸಾಧ್ವಿಯು ಅತ್ಯಂತ ಕಷ್ಟದಿಂದ ಮಗನನ್ನು ಬಿಟ್ಟಳು. ಮತ್ತು ಗೋವಿಂದರಾಯನಿಗೆ ಹೇಳಿದಳೇನಂದರೆ:— ದಾರಿಯಲ್ಲಿ ನಿಮ್ಮ ಮತ್ತು ಹುಡುಗನ ಪ್ರಕೃತಿಯನ್ನು ಕಾಯ್ದುಕೊಂಡಿರಬೇಕು. ಹಸಿವೆಯೆಂದರೆ, ಅವನ ಕೈಯಲ್ಲಿ ಕೊಡುವದಕ್ಕಾಗಿ ಫರಾಳವನ್ನು ಕಟ್ಟಿಕೊಡುತ್ತೇನೆ ಸಂಗಡ ಒಯ್ಯಬೇಕು. ಮರೆಯಬಾರದು. ನಿಮಗೂ

ಹಸಿವೆಯಾದಾಗ ತಿನ್ನಲಿಕ್ಕೆಂದು ಹತ್ತೆಂಟು ಗೋಧಿಯ ದಸಿಮೆಗಳನ್ನು ಕಟ್ಟಿ ದೆನು. ಸಂಗಡ ಇರಲಿ!"

ಹೆಂಡತಿಯ ಮಾತುಗಳನ್ನು ಕೇಳಿ ಗೋವಿಂದರಾಯನು- "ಒಳ್ಳೆಯದು. ಹಾಗೆಯೇ ಮಾಡುವೆನು. ಅವೆಲ್ಲವುಗಳನ್ನು ಒಂದು ಅರಿವೆಯಲ್ಲಿ ಕಟ್ಟಿಡು. ಮೊದಲು ನಾವು ಹೊರಗೆ ಬಂದ ಜನರಿಗೆ ಭೆಟ್ಟಿಯಾಗಿ ಬರುವೆವು. ನಾವು ಹೋಗುವದೇ ನಿಶ್ಚಯವಾದರೆ ಯಾರನ್ನಾದರೂ ಇಲ್ಲಿಗೆ ಕಳಿಸಿಕೊಡುವೆನು. ಅವನ ಕೈಯಲ್ಲಿ ಬುಂತಿ ದಸಿಮೆಗಳ ಗಂಟನ್ನೂ ನನ್ನ ದೋತರ, ಮಡಿ, ತಂಬಿಗೆ-ಥಾಲಿ, ತಾಬಾಣ ಇವುಗಳನ್ನೂ ಗೀತೆಯ ಪುಸ್ತಕವನ್ನೂ ಕೊಟ್ಟು ಕಳಿಸು." ಎಂದು ಹೆಂಡತಿಗೆ ಹೇಳಿ ಮಗನೊಡನೆ ಹೊರಟನು. ಆ ಸಮಯದಲ್ಲಿ ಇವರನ್ನೇ ಶೋಧಿಸುವದಕ್ಕೆ ಅಡ್ಡಾಡುತ್ತಲಿದ್ದ ಜನರು ಇವರನ್ನು ಕಂಡರು; ಆಗ ಸಿಪಾಯರ ನಾಯಕನು- "ಕೃಷ್ಣರಾವ ಮತ್ತು ಗೋವಿಂದರಾವ ಇವರು ಎಲ್ಲಿರುವರು ಗೊತ್ತಿದಯೋ?" ಎಂದು ಇವರನ್ನೇ ಕೇಳಿದನು. ಕೂಡಲೆ ಕೃಷ್ಣರಾಯನು ಮುಂದೆ ಬಂದು- "ನಾಯಕರೇ, ನೀವು ಯಾವ ಕೃಷ್ಣರಾಯನನ್ನು ಹುಡುಕುತ್ತಿರುವಿರೋ, ಆ ಕೃಷ್ಣರಾಯನು ನಾನೇ. ಹಾಗು ನಿಮ್ಮ ಹಿಂದೆಯೇ ನಿಂತಿರುವವರೇ ನನ್ನ ಪೂಜ್ಯ ಜನಕರಾದ ಗೋವಿಂದರಾಯರು. ನೀವು ನಮ್ಮಿರ್ವರನ್ನು ಶೋಧಿಸುತ್ತಿರುವಿರೆಂಬುದನ್ನು ಕೇಳಿದೊಡನೆಯೇ, ತಮ್ಮನ್ನು ಕಾಣಲು ನಾವೇ ಧಾವಿಸಿ ಬಂದಿರುವೆವು!" ಎಂದು ನುಡಿದನು.

ಹೀಗೆ ಅಸ್ಖಲಿತವಾಗಿಯೂ ಧೈರ್ಯದಿಂದಲೂ ನುಡಿದ ಕೃಷ್ಣರಾಯನ ಮಾತುಗಳನ್ನು ಕೇಳಿ ಆ ಜನರಿಗೆಲ್ಲ ಆಶ್ಚರ್ಯವಾಯಿತು. ನಾಯಕನ ಹೃದಯದಲ್ಲಿ ಪ್ರೇಮವು ಅಂಕುರಿಸಿತು. ಕೂಡಲೆ ಆತನು ಕೃಷ್ಣರಾಯನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿ- "ಮಗೂ, ಬೆದರಬೇಡ; ನೆಟ್ಟಗೆ ಕುಳಿತುಕೋ; ನಾವು ನರಗುಂದದ ಕಾರಭಾರಿಯಾದ ರಾಮರಾಯನನ್ನು ಶೋಧಿಸುತ್ತಿರುವೆವು. ಆತನ ಪರಿಚಯವು ನಿನಗೇನಾದರೂ ಉಂಟೋ? ಇದ್ದರೆ ಹೇಳು. ಬೆದರಬೇಡ, ನಿನಗೆ ತುಸುವಾದರೂ ಭಯವಿಲ್ಲ ಕಂಡಿಯಾ?" ಎಂದು ಕೇಳಿದನು.

**ಕೃಷ್ಣರಾಯ:-** ಅಹುದು. ಆತನ ಪರಿಚಯವುಂಟು. ಎಷ್ಟೋ ದಿವಸಗಳ ವರೆಗೆ ನಾನು ಆತನ ಮನೆಯಲ್ಲಿಯೇ ಇದ್ದೆನು. ಆದರೆ **ಈಗ ಮಾತ್ರ** ಆತನು ಎಲ್ಲಿರುವನೆಂಬುದು ನನಗೆ ಗೊತ್ತಿಲ್ಲ.

ಬಳಿಕ ನಾಯಕನು ಈ ಹುಡುಗನನ್ನು ರಮಿಸಿ ಕೇಳಿದರೆ ರಾಮರಾಯನು ಇರುವ ಸ್ಥಳವು ಗೊತ್ತಾಗಬಹುದೆಂದು ಭಾವಿಸಿ, ಆತನಿಗೆ ತಿನ್ನಲು ಪೇಡೆಗಳನ್ನು ಕೊಟ್ಟು- "ಬಾಳಾ, ಇವುಗಳನ್ನು ತಿನ್ನು. ನಾನು ಕೇಳಿದ ಪ್ರಶ್ನೆಗೆ ಉತ್ತರ ಕೊಟ್ಟರೆ ಇನ್ನೂ ಹೆಚ್ಚಾಗಿ ಪೇಡೆಗಳನ್ನು ತಂದು ಕೊಡುವೆನು. ಅಂಜಬೇಡ,

ಹೇಳು, ಆ ರಾಮರಾಯನು ನಿನ್ನನ್ನು ಸಂಗಡ ಕರೆದುಕೊಂಡು ಬಂದು ನಿನ್ನನ್ನು ಯಾರಿಗೆ ಒಪ್ಪಿಸಿ ಹೋದನು ? ಹೇಳು. " ಎಂದು ಪ್ರೇಮದಿಂದ ಬಾಲಕನ ಬೆನ್ನ ಮೇಲೆ ಕೈಯಾಡಿಸುತ್ತ ಕೇಳಿದನು. ಅದಕ್ಕೆ ಆ ಬಾಲಕನು- " ನಾಯಕರೇ, ರಾಮರಾಯನು ನನ್ನನ್ನು ಇಲ್ಲಿಯ ವರೆಗೆ ಕರೆದುಕೊಂಡೇ ಬರಲಿಲ್ಲ. ಅಲ್ಲಿಯೇ- ಆ ಅಡವಿಯಲ್ಲಿಯೇ- ನನ್ನನ್ನು ಕೂಡ್ರಿಸಿ " ಈಗ ಬರುವೆನು ತಿರುಗಿ. ಇಲ್ಲಿಯೇ ಕುಳಿತಿರು " ಎಂದು ನನ್ನನ್ನು ಅಲ್ಲಿ ಕೂಡ್ರಿಸಿ ಹೋದವನು ತಿರುಗಿ ಬರಲೇ ಇಲ್ಲ. ಹೀಗೆ ಮೋಸಗೊಳಿಸಿದವನು ನನ್ನನ್ನು ಯಾರಿಗೊಪ್ಪಿಸಿ ಹೋಗಿದ್ದಾನು? ನೀವೇ ಹೇಳಿರಿ! ಬಳಿಕ ನಾನು ಅಲ್ಲಿಯೇ ಕುಳಿತುಕೊಂಡು ಬಹಳ ಹೊತ್ತಿನ ವರೆಗೆ ತಿರುಗಿ ಬಂದಾನೆಂದು ಅವನ ದಾರೀ ನೋಡಿದೆನು. ಆದರೆ ನಾಯಕರೇ, ಬೇಕೆಂದು ತಪ್ಪಿಸಿಕೊಂಡು ಓಡಿ ಹೋದವನು ತಿರುಗಿ ಎಂದಾದರೂ ಬರುವನೇ? " ಎಂದನು. ಬಳಿಕ ಸಿಪಾಯಿಗಳಲ್ಲೊಬ್ಬನು ಹುಡುಗನಿಗೆ- " ಏ ಹುಡುಗಾ, ಸುಳ್ಳಾಡಬೇಡ ಕಂಡಿಯಾ? ರಾಮರಾಯನು ನಿನ್ನನ್ನು ಬಿಟ್ಟು ಹೋದ ಅಡವಿಯು ಇಲ್ಲಿಂದೆಷ್ಟು ದೂರವಿದೆ? ಹಾಗು ಅಲ್ಲಿಂದ ನಿನ್ನನ್ನು ಇಲ್ಲಿಗೆ ಕರೆದು ತಂದವರಾರು? " ಎಂದು ಕೇಳಿದನು. ಆಗ ಹುಡುಗನು ತುಸು ಸಿಟ್ಟಿನ ಮುದ್ರೆಯಿಂದ- " ಹೀಗೆ ನಡುನಡುವೆ ನನ್ನನ್ನು ಕೇಳುವವನು ನೀನಾರು? ಪ್ರೀತಿಯಿಂದ ನನ್ನನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡು ತಿನ್ನಲು ಪೇಡೆಗಳನ್ನು ಕೊಟ್ಟ ಈ ನಾಯಕಸಾಹೇಬರು ಏನು ಬೇಕಾದುದನ್ನು ಕೇಳಲಿ. ಅವರು ಕೇಳಿದ್ದಕ್ಕೆ ನನಗೆ ಗೊತ್ತಿದ್ದನ್ನು ಹೇಳುವೆನು ನೀನು ನನ್ನನ್ನು ಬೆದರಿಸುವೆಯಾ? ನಾಯಕರಿಗೆ ಹೇಳಿದೆನೆಂದರೆ ತಿಳಿದೀತು ನೋಡು ಈಗ! " ಎಂದು ನುಡಿದನು. ಹುಡುಗನನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡವನು ನಿಜವಾಗಿಯೂ ಆ ಸಿಪಾಯಿಗಳ ನಾಯಕನೇ ಆಗಿದ್ದನು. ಬಾಲಕನ ನುಡಿಗೇಳಿ ಎಲ್ಲ ಸಿಪಾಯರೂ ನಡುವೆ ಬಾಯಿ ಹಾಕಿ ಕೇಳಿದ ಆ ಸಿಪಾಯಿಯನ್ನು ನೋಡಿ ಚೇಷ್ಟೆ ಮಾಡಹತ್ತಿದರು. ನಾಯಕನೂ ಮನದೊಳಗೇ ಹರ್ಷಿತನಾದನು. ಬಳಿಕ ಆತನು ಯಾರೂ ನಡುವೆ ಮಾತಾಡಬಾರದೆಂದು ಸಿಪಾಯರಿಗೆ ಆಜ್ಞಾಪಿಸಿ ಬಾಲಕನ ತಲೆಯ ಮೇಲೆ ಕೈಯಾಡಿಸುತ್ತ- " ತರಳಾ, ನಾನೇ ಕೇಳುವೆನು. ಆಯಿತೇ? ಈಗಾದರೂ ಹೇಳು. ರಾಮರಾಯನೇ ನಿನ್ನನ್ನು ಕರೆದುಕೊಂಡು ಬಂದು ಗೋವಿಂದರಾಯನ ಸ್ವಾಧೀನ ಮಾಡಿದನೇನು? ಅಹುದಹುದು ಆತನೇ ಮಾಡಿದನಲ್ಲವೇ? ಎಂದು ಕೇಳಿದನು. ಅದಕ್ಕೆ " ಇಲ್ಲಿಲ್ಲ. ಅವನು ನನ್ನನ್ನು ಕರಕೊಂಡು ಬರಲೇ ಇಲ್ಲ! ಏನ್ರೀ, ನಾಯಕರೇ, ಇಷ್ಟರಲ್ಲಿಯೇ ನಾನು ಹೇಳಿದುದನ್ನು ಮರೆತಿರೇನು? ನನ್ನನ್ನು ಅಲ್ಲಿ ಬೇಕೆಂತ ಬಿಟ್ಟು ಓಡಿ ಹೋದವನು ತಿರುಗಿ ಬರುವನೇ! " ಎಂದು ಬಾಲಕನು ಹೇಳಿದನು.

ಬಳಿಕ ನಾಯಕನು "ಹೊ. ನೀನು ಹೇಳಿದ್ದಕ್ಕೆ ನನ್ನ ಒಪ್ಪಿಗೆಯಿದೆ, ಆದರೆ ಆತನು ನಿನ್ನನ್ನು ಅಡವಿಯಲ್ಲಿ ಬಿಟ್ಟು ಹೋದ ಬಳಿಕ ನಿನ್ನನ್ನು ಇಲ್ಲಿಗೆ ಯಾರು ಕರೆತಂದರು? ಇದನ್ನಾದರೂ ಹೇಳು." ನಾಯಕನು ಕೇಳಿದನು. ಆಗ ಬಾಲಕನು- "ಹೀಗೆ ಕೇಳಿರಿ, ಹೇಳುತ್ತೇನೆ. ನಾನು ಅಲ್ಲಿ ಬಹಳ ಹೊತ್ತಿನ ವರೆಗೆ ರಾಮರಾಯನ ಹಾದೀ ನೋಡಿ ನೋಡಿ ಬೇಸತ್ತೆನು. ಆದರೂ ಬರಲಿಲ್ಲ. ಆಗ ನನಗೆ ಹೆದರಿಕೆಯಾಗತೊಡಗಿತು. ಅಳಹತ್ತಿದೆನು. ನನ್ನ ಅಳುವ ಧ್ವನಿ ಕೇಳಿ ನಮ್ಮ ಊರಲ್ಲಿರುವ ಆ ಕುರಿಕಾಯುವ ಕುರುಬನು ನನ್ನನ್ನು ಊರಿಗೆ ತಂದು ಮುಟ್ಟಿಸಿದನು. ಆ ಮೇಲೆ ನನ್ನ ತಂದೆತಾಯಿಗಳು ನನ್ನ ಗುರುತು ಹಿಡಿದು ಮನೆಗೆ ಕರಕೊಂಡು ಬಂದರು ಮತ್ತೇನು ಹೇಳಿರಿ?" ಎಂದು ಕೃಷ್ಣರಾಯನು ಕೇಳಿದನು

ಬಾಲಕನ ಮುದ್ದು ಬರುವಂಥ ಮಾತುಗಳನ್ನು ಕೇಳಿ ಎಲ್ಲರಿಗೂ ಆನಂದವಾಯಿತು; ಮತ್ತು ರಾಮರಾಯನ ಶೋಧವಾಗಲಿಲ್ಲವೆಂದು ವಿಷಾದವೂ ಆಯಿತು. ಕೆಲವು ಸಿಪಾಯಿಗಳಂತೂ- "ಹುಡುಗನು ಬಹು ದಿಟ್ಟನಾಗಿದ್ದಾನೆ. ದಿಟ್ಟನಿದ್ದಂತೆ ಜಾಣನೂ ಇರುವನು. ರಾಮರಾಯನ ಶೋಧದ ಗಂಧ ಕೂಡ ಹತ್ತಗೊಡಲೊಲ್ಲ ನೋಡಿರಿ!" ಎಂದು ತಮ್ಮ ತಮ್ಮೊಳಗೆ ಮಾತಾಡಹತ್ತಿದರು. ಹುಡುಗನಿಂದಲೇ ನಿಜವನ್ನು ಹೊರಗೆಡವಬೇಕೆಂದು ನಿಶ್ಚಯಿಸಿ ನಾಯಕನು ಮತ್ತೆ ಹುಡುಗನನ್ನು ಕುರಿತು- "ಹೋಗಲಿ ಬಿಡು ಅದು! ಆದರೆ ಕೃಷ್ಣರಾಯಾ, ರಾಮರಾಯನು ಎಲ್ಲಿಗೆ ಹೋಗುವೆನೆಂದು ಹೇಳಿಹೋದನು ನಿನ್ನ ಮುಂದೆ?" ಎಂದು ಪ್ರಶ್ನೆ ಮಾಡಿದನು. ಹುಡುಗನು ಕೈಯಿಂದ ಆರತಿ ಮಾಡುತ್ತ- "ಅಹಹ! ನಿಮ್ಮ ಜ್ಞಾಪಕಶಕ್ತಿಯು ಕಡಿಮೆಯೆಂದು ಕಾಣುವದು! ಬೇಕೆಂತ ತಪ್ಪಿಸಿ ಓಡಿ ಹೋದ ಮನುಷ್ಯನು ಇಂಥಲ್ಲಿಗೆ ಹೋಗುವೆನೆಂದು ಎಂದಾದರೂ ಹೇಳಿ ಹೋಗುವನೇ? ಇಷ್ಟಾದರೂ ತಿಳಿಯಬಾರದೇ ನಿಮಗೆ! ನಾನು ಹೇಳಿದುದೆಲ್ಲ ನಿಮ್ಮ ನೆನಪಿನಲ್ಲಿರುವಂತೆ ಕಾಣುವದಿಲ್ಲ. ಆದದರಿಂದಲೇ ಮತ್ತೆ ಮತ್ತೆ ನನ್ನನ್ನು ಕೇಳುವಿರಲ್ಲವೇ? ನಾಯಕರೇ, ಇದಕ್ಕೂ ಹೆಚ್ಚಾಗಿ ನನಗೇನೂ ಗೊತ್ತಿಲ್ಲ!" ಎಂದು ಹೇಳಿದನು.

ಮೊದಲೇ ಚಿಕ್ಕ ವಯಸ್ಸಿನ ಬಾಲಕನು. ಅದರಲ್ಲಿಯೂ ಸ್ಪಷ್ಟ ಹಾಗು ಅಸ್ಖಲಿತವಾಗಿ ಮಾತಾಡುವವನು. ಅಂದ ಮೇಲೆ ಕೇಳುವದೇನು? ಇಂಥ ಬಾಲಕನ ಭಾಷಣವನ್ನು ಕೇಳಿ ಅದಾವನ ಮನವು ಮೋಹಗೊಳ್ಳದಿರುವದು? ಸಾವಿರಾರು ಪ್ರಶ್ನೆಗಳನ್ನು ಕೇಳಿದರೂ ರಾಮರಾಯನ ವಿಷಯವು ಕಿಂಚಿತ್ತಾದರೂ ತಿಳಿಯುವಂತಿಲ್ಲವೆಂದು ನಾಯಕನಿಗೆ ಅನಿಸಿದ ಬಳಿಕ ಆತನು ಗೋವಿಂದರಾಯ

ನಿಗೆ ರಾಮರಾಯನ ವಿಷಯವಾಗಿ ಅನೇಕ ಪ್ರಶ್ನೆಗಳನ್ನು ಕೇಳಿದನು. ಆವರೆ ಪಾಪ! ರಾಮರಾಯನ ವಿಷಯದಲ್ಲಿ ಏನನ್ನೂ ಅರಿಯದ ಆತನಿಂದ ಏನು ಗೊತ್ತಾಗಬೇಕು! ನಾಯಕನು ನಿರಾಶನಾದನು. ಅವರೂ ಆತನು ಸಂಶಯ ದಿಂದ ಊರಲ್ಲಿಯ ಪ್ರತಿಯೊಬ್ಬನ ಮನೆಯನ್ನು ಹುಡುಕಿದನು ಆದರೂ ಗೊತ್ತಾಗಲಿಲ್ಲ ಈಗ ಮಾತ್ರ ನಾಯಕನು ಪೂರ್ಣ ನಿರಾಶನಾಗಿ-"ಇನ್ನು ಮುಂದೇನು ಮಾಡಬೇಕೆಂದು ವಿಚಾರಿಸುತ್ತ ಕುಳಿತುಕೊಂಡನು.

ರಾಮರಾಯ, ಗೋವಿಂದರಾಯ ಮತ್ತು ಕೃಷ್ಣರಾಯ ಈ ಮೂವರ ಶೋಧಕ್ಕಾಗಿ ಬಂದ ಅಧಿಕಾರಿಗಳು ನಿಜವಾಗಿಯೂ ಸಜ್ಜನರೂ, ಸುವಿಚಾರಿ ಗಳೂ, ಸಂಪೂರ್ಣಸಹನಶೀಲತೆಯುಳ್ಳವರೂ ಆಗಿದ್ದರೆಂದೇ ಹೇಳಬಹುದು! ಇಲ್ಲದಿದ್ದರೆ, ಆ ಕಾಲದಲ್ಲಿ ಸಿಪಾಯರು ಯಾರನ್ನು ಬಂಧಿಸುವರೋ ಅವರೇ ಸೆರೆ ಯಾಳುಗಳು! ಅವರ ವಿಷಯವಾಗಿ ಸಿಪಾಯಿಗಳು ತಮ್ಮ ಮೇಲಧಿಕಾರಿಗಳಿಗೆ ಹೇಳಿದ್ದೇ ವೇದವಾಕ್ಯ! ಅದೇ ನ್ಯಾಯ! ಅಂತು ಒಟ್ಟಿನ ಮೇಲೆ ಹೇಳಬೇಕೆಂ ದರೆ ಒಳ್ಳೆಯ ಗೃಹಸ್ಥರಿಗೂ ಮರ್ಯಾದೆಯುಳ್ಳ ಕುಟುಂಬದವರಿಗೂ ಅತಿಕಠಿ ನವಾದ ಕಾಲವಾಗಿತ್ತೆಂದು ಹೇಳಬಹುದು! ಈ ಸಿಪಾಯರ ತಂಡವು ರಾಮರಾ ಯರ ಶೋಧಕ್ಕಾಗಿ ಹೊರಟಿದ್ದು. ರಾಮರಾಯನ ಬಳಿಯಲ್ಲಿ ಕೃಷ್ಣರಾಯನಿ ದ್ದನೆಂದೂ ಆತನೀಗ ಗೋವಿಂದರಾಯನ ಬಳಿಯಲ್ಲಿರುವನೆಂದೂ ಯಾರೋ ಅವ ರಿಗೆ ಸುದ್ದಿಯ ಹೇಳಿದ್ದರಿಂದ, ಅವರೀಗ ಗೋವಿಂದರಾಯ ಕೃಷ್ಣರಾಯರನ್ನು ಶೋಧಿಸುತ್ತಿದ್ದರು. ಮುಖ್ಯವಾಗಿ ಶೋಧಿಸಬೇಕಾಗಿದ್ದ ರಾಮರಾಯನ ಸುಳಿವೇ ಹತ್ತಲಿಲ್ಲ. ಕೃಷ್ಣರಾಯನು ರಾಮರಾಯನ ಕಾರಭಾರಿಯಾಗಿರಬಹುದೆಂದು ಅವರ ಮೊದಲಿನ ತಿಳಿವಳಿಕೆ. ಶೋಧದ ಅಂತ್ಯದಲ್ಲಿ ಕೃಷ್ಣರಾಯನು ಏಳು ವರ್ಷ ದೊಳಗಿನ ಬಾಲಕನೆಂದು ಗೊತ್ತಾಯಿತು, ಹುಡುಗನೊಡನೆ ಮುದ್ದು ಮಾತಾಡಿ ಕೆಲ ಕಾಲ ಕಳೆದರೆಂಬುದು ಮಾತ್ರ ಸುಳ್ಳಲ್ಲ! ಕೃಷ್ಣರಾಯನಿಗೂ ಗೋವಿಂದ ರಾಯನಿಗೂ ಏನೂ ಗೊತ್ತಿಲ್ಲವೆಂದೂ, ಪೂರ್ಣನಿರಪರಾಧಿಗಳೆಂದೂ ಅವರಿಗೆಲ್ಲ ಮನದಟ್ಟಾಯಿತು. ಆದರೆ ರಾಮರಾಯನು ಸಿಕ್ಕದುದರಿಂದಲೂ, ಏಳು ವರ್ಷದ ಬಾಲಕನಾದ ಕೃಷ್ಣರಾಯನು ನಿರಪರಾಧಿಯಾಗಿದ್ದರೂ ಆತನು ರಾಮರಾಯನ ಬಳಿಯಲ್ಲಿದ್ದವನೆಂಬ ಒಂದೇ ಮಾತಿನ ಸಲುವಾಗಿಯಾದರೂ, ಇಬ್ಬರನ್ನೂ ಸಾಹೇಬನಿಗೆ ಭೆಟ್ಟಿ ಮಾಡಿಸಿ ಬಿಡಬೇಕೆಂದು ಸಿಪಾಯಿಗಳೆಲ್ಲ ಮಾತಾಡಿದರು. ನಾಯಕನೂ ಅದಕ್ಕೆ ಸಮ್ಮತಿಸಿ, ಗೋವಿಂದರಾಯನನ್ನು ಕುರಿತು-"ರಾಯರೇ, ನೀವೂ ನಿಮ್ಮ ಮುದ್ದಾಗಿಯೂ ಮಧುರವಾಗಿಯೂ ಮಾತಾಡುವ ಬಾಲ ಕನೂ, ಸಂಪೂರ್ಣವಾಗಿ ನಿರ್ದೋಷಿಗಳಿರುವಿರೆಂದು ನಮಗೆ ಮನದಟ್ಟಾಗಿದೆ. ಆದದರಿಂದ ನೀವು ಬೆದರುವ ಕಾರಣವಿಲ್ಲ. ನಾವು ಇಲ್ಲಿಯೇ ಆಗಲಿ,

ನರಗುಂದಕ್ಕೆ ಹೋದ ಬಳಿಕಾಗಲೀ ನಿಮಗೆ ಸಂಕೋಲೆಗಳನ್ನು ಹಾಕದಿರುವದೇ ನಮ್ಮ ಹೇಳಿಕೆಯ ಪ್ರಮಾಣ. ನಿಮ್ಮ ಈ ಬಾಲಕನ ಭಾಷಣವು ನಮ್ಮ ಸಾಹೇಬನ ಮನವನ್ನು ಆಕರ್ಷಿಸಬಹುದು. ಮತ್ತು ನಾವಾದರೂ ನಿಮ್ಮ ಉತ್ತಮ ನಡತೆಯ ವಿಷಯದಲ್ಲಿ ಸಾಹೇಬನಿಗೆ ಹೇಳಿ ಒಂದೇ ಭೆಟ್ಟಿಯಲ್ಲಿಯೇ ನಿಮ್ಮನ್ನು ಬಿಡುಗಡೆ ಮಾಡಿಸುವೆವು ಆದದರಿಂದ ತಾವು ದಯಮಾಡಿ ನಮ್ಮೊಡನೆ ಬರಬೇಕು. ನಿಮ್ಮನ್ನು ಕರೆದುಕೊಂಡೇ ಹೋಗಬೇಕೆಂಬುದೇನೂ ನಿರ್ಬಂಧವಿಲ್ಲ. ಆದರೆ ಸಾಹೇಬನಿಗೆ ನಾವು ಕೃಷ್ಣರಾಯನನ್ನು ಬಿಟ್ಟು ಬಂದೆವೆಂಬ ವಾರ್ತೆಯು ತಿಳಿದರೆ, ನಮ್ಮ ಮೇಲೆ ಎಂಥ ಪ್ರಸಂಗ ಬಂದೀತೆಂಬದನ್ನು ಹೇಳಲಿಕ್ಕೆ ಬರುವಂತಿಲ್ಲ. ಆದದರಿಂದಲೇ ರಾಮರಾಯನ ಹತ್ತರಿದ್ದ ನಿಮ್ಮ ಈ ಕೃಷ್ಣರಾಯನನ್ನು ಸಾಹೇಬನಿಗೆ ಭೆಟ್ಟಿ ಮಾಡಿಸಲಿಕ್ಕೆ ಬೇಕಾಗಿದೆ. ಈಗಳೆ ನಮ್ಮೊಡನೆ ಹೊರಡುವ ಸಿದ್ಧತೆ ಮಾಡಿರಿ. " ಎಂದು ಹೇಳಿದನು. ನಾಯಕನ ಹೇಳಿಕೆಯೂ ಗೋವಿಂದರಾಯನಿಗೆ ಯೋಗ್ಯವೆಂದು ಕಂಡಿತು. ಕೂಡಲೆ ಆತನು ಹೊರಡುವದಕ್ಕೆ ಸಮ್ಮತಿಸಿದನು.

ಗೋವಿಂದರಾಯನು ಒಂದು ಚಿಕ್ಕ ಹಳ್ಳಿಯಲ್ಲಿರುತ್ತಿದ್ದನೆಂಬುದನ್ನು ಈ ಮೊದಲೇ ಹೇಳಿದೆ. ಹಳ್ಳಿಯ ಜನರ ಮನವನ್ನೆಲ್ಲ ಕೃಷ್ಣರಾಯನು ತನ್ನ ಮುದ್ದು ಮುದ್ದಾದ ಮಾತುಗಳಿಂದ ಆಕರ್ಷಣಮಾಡಿ ಬಿಟ್ಟಿದ್ದನು. ಕೃಷ್ಣರಾಯನ ಮೇಲೆ ಎಲ್ಲರ ಪ್ರೇಮವೂ ಹೆಚ್ಚಾಗಿತ್ತು. ದಿನದಲ್ಲಿ ಒಮ್ಮೆಯಾದರೂ ಆತನೊಡನೆ ಮಾತಾಡಿ, ಆತನ ಮಾತುಗಳನ್ನು ಕೇಳಿ ಆನಂದಬಡದ ವ್ಯಕ್ತಿಯೇ ಆ ಹಳ್ಳಿಯಲ್ಲಿರಲಿಲ್ಲ. " ನಾವೀಗ ಈ ನಾಯಕನೊಂದಿಗೆ ನರಗುಂದಕ್ಕೆ ಹೋದರೂ ಏನೂ ಭಯವಿಲ್ಲ. ನಾವು ಮತ್ತೆ ತೀವ್ರವಾಗಿ ನಮ್ಮ ಹಳ್ಳಿಗೆ ಬಂದೇ ಬರುವೆವು." ಎಂದು ಕೃಷ್ಣರಾಯನಿಗೆ ಪೂರ್ಣವಾಗಿ ಅನಿಸಿತ್ತು. ಗೋವಿಂದರಾಯನು ಹಾಗೆ ಪೂರ್ಣವಾಗಿ ತಿಳಿಯದಿದ್ದರೂ, ತೀವ್ರ ಬರಬಹುದೆಂದು ಆತನೂ ಭಾವಿಸಿದ್ದನು. ಆದರೆ ಅಶಿಕ್ಷಿತರೂ ಅಜ್ಞರೂ ಆದ ಆ ಹಳ್ಳಿಯ ಜನರು ಕೃಷ್ಣರಾಯನನ್ನು ಸಿಪಾಯರು ಹಿಡಿದೊಯ್ಯುವರೆಂದು ಹಳಹಳಿಸಹತ್ತಿದರು. ಈ ಹುಡುಗನನ್ನು ಒಯ್ಯಗೊಡಬೇಡಿರೆಂ"ದು ಹಳ್ಳಿಯ ಹೆಂಗಸರು ತಮ್ಮ ಗಂಡಂದಿರಿಗೆ ಬೇಡಿಕೊಳ್ಳಹತ್ತಿದರು. ಬಳಿಕ ಆ ಜನರೆಲ್ಲ ಗುಂಪಾಗಿ ಸಿಪಾಯರಿದ್ದಲ್ಲಿಗೆ ಬಂದು ನಿಂತುಕೊಂಡರು. ಜನರ ಗುಂಪನ್ನು ಕಂಡು ನಾಯಕನು-" ನೀವೆಲ್ಲರೂ ಕೂಡಿ ಇಲ್ಲಿಗೇಕೆ ಬಂದಿರಿ ? " ಎಂದು ಕೇಳಿದರು. ಕೂಡಲೆ ಜನರೆಲ್ಲ ಕೈಮುಗಿದು- " ಸರದಾರ ಸಾಹೇಬರೇ, ಹಳ್ಳಿಯವರಾದ ನಾವೆಲ್ಲರೂ ಈ ಬಾಲಕನ ಮುದ್ದು ಮಾತುಗಳನ್ನು ಕೇಳುತ್ತ ಆನಂದದಲ್ಲಿರುತ್ತಿದ್ದೆವು. ಈ ಹುಡುಗನು ನಮ್ಮೂರಿಗೆ ಬಂದಂದಿನಿಂದ ನಮ್ಮೆಲ್ಲರಿಗೂ ವಿಶೇಷವಾಗಿ ಆನಂದವಾಗಿದೆ. ಆದದ

ರಿಂದ ತಾವು ನಮ್ಮೆಂಬ ನಮ್ಮೆಲ್ಲರ ಶಕ್ತಿಗನುಸಾರವಾಗಿ ತಪ್ಪುದಂಡವನ್ನು ಸ್ವೀಕರಿಸಿ ಈ ಕೃಷ್ಣರಾಯನನ್ನು ಒಯ್ಯಬಾರದಾಗಿ ದೀನರಾದ ನಾವು ತಮಗೆ ಬೇಡಿಕೊಳ್ಳಲು ಬಂದಿರುವೆವು. ಈ ಬಾಲಕನನ್ನೊಯ್ದು ಈ ಹಳ್ಳಿಯನ್ನೇ ದುಃಖಸಾಗರದಲ್ಲಿ ಮುಳುಗಿಸಬೇಡಿರಿ. ನಿಮ್ಮ ಬಳಿಯಲ್ಲಿ ನಮ್ಮದಿಷ್ಟೇ ಬೇಡಿಕೆಯು! " ಎಂದು ನುಡಿದರು. ಅಷ್ಟರಲ್ಲಿ ಹಳ್ಳಿಯ ಹೆಂಗಸರೆಲ್ಲರೂ ಸತ್ಯಭಾಮಾಬಾಯಿಯೊಂದಿಗೆ ಸಿಪಾಯರಿದ್ದೆಡೆಗೆ ಬಂದು:-" ಮಹಾರಾಜ, ಆ ಬಾಲಕನನ್ನು ಹಿಡಿದುಕೊಂಡು ಹೋಗಬೇಡಿರಿ. ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುವೆವು ಆ ಬಾಲಕನ ಮೈಮೇಲಿನ ಬಾಲದೊಡಿಗೆಗಳನ್ನೆಲ್ಲ ಸ್ವೀಕರಿಸಿ ಅವನನ್ನು ಬಿಟ್ಟುಬಿಡಿರಿ. " ಎಂದು ಬೇಡಿಕೊಂಡು ಆ ಬಾಲಕನನ್ನು ತಮ್ಮೆಲ್ಲರ ಮಧ್ಯದಲ್ಲಿರಿಸಿಕೊಂಡು ಗೋಳಿಡಹತ್ತಿದರು. ಅದನ್ನೆಲ್ಲ ಕಂಡು ಸಿಪಾಯರ ಅಂತಃಕರಣವೂ ಕರಗಿತು ಕೃಷ್ಣರಾಯನೆಂದರೆ ಜಗತ್ತಿಗೇ ಬೇಕಾದ ಬಾಲಕನಿರುವನೆಂದು ತಿಳಿದರು. ಬಳಿಕ ಗೋವಿಂದರಾಯನ ಕಡೆಯಿಂದ ಹೇಗಾದರೂ ಮಾಡಿ ಅವರನ್ನೆಲ್ಲ ಸಮಾಧಾನಪಡಿಸಿದರು. ಹೋಗುವ ಸಿದ್ಧತೆಯಾಯಿತು.

ವಾಚಕರೇ, ಸಿಪಾಯರು ನಿಜವಾಗಿಯೂ ನಿರ್ಲೋಭವನ್ನು ವ್ಯಕ್ತಪಡಿಸಿದರು. ಯಾಕಂದರೆ ಕೃಷ್ಣರಾಯನು ಚಿಕ್ಕಂದಿನಲ್ಲಿಯೇ ಭಾಸ್ಕರರಾಯ, ರಾಮರಾಯ, ಮೊದಲಾದ ಸರದಾರರ ಪ್ರೀತಿಗೆ ಪಾತ್ರನಾದದರಿಂದ ಆ ಕಾಲಕ್ಕೆ ಆತನ ಮೈಮೇಲೆ ಏನಿಲ್ಲೆಂದರೂ ಏಳೆಂಟು ಸಾವಿರ ರೂಪಾಯಿ ಬೆಲೆ ಬಾಳುವ ಬಾಲದೊಡಿವೆಗಳಿದ್ದವು. ಸತ್ಯಭಾಮಾಬಾಯಿಯು ಅವೆಲ್ಲವುಗಳನ್ನೂ ಕೇವಲ ಪುತ್ರಪ್ರೇಮಕ್ಕಾಗಿ ಸಿಪಾಯರಿಗೆ ಕೊಡಲೊಪ್ಪಿಕೊಂಡಿದ್ದಳು. ಆದರೆ ಸಿಪಾಯಿಗಳ ಮನದಲ್ಲಿ ಅರ್ಥಲೋಭವು ಕಿಂಚಿತ್ತಾದರೂ ಹುಟ್ಟಲಿಲ್ಲ. ಲಂಚಗೂಳಿಯಾದ ಮತ್ತೊಬ್ಬ ನಾಯಕನಿದ್ದರೆ, ಬಾಲಕನ ಒಡಿವೆಗಳೆಲ್ಲವೂ ಮಾಯವಾಗುತ್ತಿದ್ದವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇರಲಿ! ನಾಯಕನು ಆ ಎಲ್ಲ ಜನರಿಗೂ-" ನೀವು ಕೃಷ್ಣರಾಯ ಹಾಗು ಗೋವಿಂದರಾಯರ ವಿಷಯಕ್ಕೆ ತುಸುವಾದರೂ ಚಿಂತಿಸಬೇಡಿರಿ. ಸಾಹೇಬನ ಭೆಟ್ಟಿಯಾದ ಬಳಿಕ ಅವರನ್ನು ಸುರಕ್ಷಿತವಾಗಿ ಮರಳಿ ನಿಮ್ಮ ಹಳ್ಳಿಗೆ, ಮುಟ್ಟಿಸುವೆವು; ಆಯಿತೇ? " ಎಂದು ವಿಶ್ವಾಸಪೂರ್ವಕವಾಗಿ ಹೇಳಿ, ಅವರಿರ್ವರನ್ನೂ ಕರಕೊಂಡು ಸರಗುಂದಕ್ಕೆ ಹೊರಟನು

ಇಷ್ಟಾದರೂ ಹಳ್ಳಿಯ ಸ್ತ್ರೀ ಪುರುಷರು ಶೋಕಮಾಡಹತ್ತಿದರು. ಸತ್ಯಭಾಮಾಬಾಯಿಯಂತೂ ಪುತ್ರಮೋಹದಿಂದ ಮೂರ್ಛಿತಳಾಗಿ ಭೂಮಿಯ ಮೇಲೆ ಬಿದ್ದುಬಿಟ್ಟಳು. ಅದನ್ನು ಕಂಡು ಬಾಲಕನ ಕಾಲುಗಳು ಮುಂದಕ್ಕೆ ಹೋಗದಾದವು. ಆಗ ಗೋವಿಂದರಾಯರ ಹಾಗು ನಾಯಕನ ಅಪ್ಪಣೆ ಪಡೆದು, ಚಿಕ್ಕವನಾದರೂ ತಿಳಿವಳಿಕೆಯುಳ್ಳ ಆ ಬಾಲನು ತಾಯಿಯ ಬಳಿಗೆ ಬಂದು

" ಅವ್ವಾ, ಏಳು. ನೀನು ಹೀಗೆ ಮೂರ್ಛಿತಳಾಗಿ ಬೀಳಹತ್ತಿದರೆ, ನಾನಾಗಲೀ ಅಪ್ಪನಾಗಲೀ ಹೇಗೆ ಹೋಗಬೇಕು? ನೋಡು! ಚೆನ್ನಾಗಿ ವಿಚಾರ ಮಾಡಿ ನೋಡು! ನಾವೀಗ ಇವರೊಡನೆ ಹೋಗದಿದ್ದರೆ ಮುಂದೆ ನಮ್ಮ ಜೀವಕಳ ಕೊಳ್ಳುವ ಹೊತ್ತಾದರೂ ಬರಬಹುದು. ಈಗಳೆ ಹೋದರೆ ಏನೂ ಭಯವಿಲ್ಲ. ನಾವು ತಿರುಗಿ ೩-೪ ದಿವಸಗಳಲ್ಲಿ ಸುರಕ್ಷಿತವಾಗಿ ಬರುವೆವು; ಚಿಂತಿಸಬೇಡ. ಇನ್ನು ಶೋಕವನ್ನು ಮಾಡಬೇಡ ಕಂಡೆಯಾ? " ಎಂದು ಹೇಳತೊಡಗಿದನು. ಮೂರ್ಛಿತಳಿದೆದ್ದ ತಾಯಿಯ ಕಣ್ಣುಗಳಿಂದ ಒಂದೇ ಸವನೇ ನೀರು ಹರಿಯುತ್ತಲೇ ಇದ್ದಿತು. ಆದರೂ ಅವಳು ಬಹು ಕಷ್ಟದಿಂದ- " ಮಗನೇ, ಅವರೊಂದಿಗೆ ಹೋಗಿ ಸುಖರೂಪನಾಗಿ ಮರಳಿ ಬಾರಪ್ಪಾ ! "ಎಂದು ಅಪ್ಪಣೆಕೊಟ್ಟು ಮಗನನ್ನು ಕಳುಹಿದಳು. ಎಲ್ಲರೂ ಹೊರಟು ಹೋದರು ಸುರಕ್ಷಿತವಾಗಿ ತಿರುಗಿ ಬರಲೆಂದು ಅವಳು ದೇವರಿಗೆ ಅನೇಕ ಹರಕೆಗಳನ್ನು ಹೊತ್ತಳು. ಕುಲಸ್ವಾಮಿಗೆ ಅಭಿಷೇಕವನ್ನಾರಂಭಿಸಿದಳು. ಅವರು ತಿರುಗಿ ಬಂದೊಡನೆ ಒಂದು ನೂರು ಬ್ರಾಹ್ಮಣರಿಗೆ ಭೋಜನಮಾಡಿಸುವೆನೆಂದು ದೇವರ ಬಳಿ ನಿಂತುಕೊಂಡು ಪ್ರಾರ್ಥನೆ ಮಾಡಿದಳು. ತಂದೆ ಮಕ್ಕಳು ತಿರುಗಿ ಬರುವ ವರೆಗೂ ಉಪವಾಸಮಾಡುವೆನೆಂದು ಪ್ರತಿಜ್ಞೆ ಮಾಡಿದಳು. ಸಿಪಾಯಿಗಳ ಮಾತಿನ ಮೇಲೆ ವಿಶ್ವಾಸವಿಟ್ಟು ಅವಳು ಜೀವಧಾರಣ ಮಾಡಿಕೊಂಡಿದ್ದಳು.

ಮಾರ್ಗಕ್ರಮಣ ಮಾಡಹತ್ತಿದಂತೆ ಗೋವಿಂದರಾಯನ ಮನದಲ್ಲಿ ಅನೇಕ ವಿಚಾರಗಳು ಬರತೊಡಗಿದವು. ಒಮ್ಮೆಯಂತೂ ಆತನು- " ಸ್ವರಾಜ್ಯದಲ್ಲಿ ನಮಗೆಷ್ಟು ಮಾನಮರ್ಯಾದೆಗಳು ದೊರೆಯುತ್ತಿದ್ದವು! ಅದೇ ಈಗ ಈ ಪರರಾಜ್ಯದಲ್ಲಿ ನಮಗೆ ಕವಡಿಯ ಬೆಲೆ ಸಹ ಇಲ್ಲದಂತಾಗಿದೆ! ಹರ ಹರ! ಸ್ವಪ್ನದಲ್ಲಿಯೂ ದುಃಖವನ್ನು ಕಾಣದ ನಾವು ಈಗ ಪ್ರಾಣಸಂಕಟದಲ್ಲಿ ಬಿದ್ದಿರುವೆವು! ಮುಂದೆ ನಮ್ಮ ಗತಿಯೇನಾಗುವದೋ ಎಂಬ ದೊಡ್ಡ ಚಿಂತಾಸಾಗರದಲ್ಲಿ ಮುಳುಮುಳುಗಿ ಏಳುತ್ತಿರುವೆವು! ಆಪ್ತರು, ಇಷ್ಟರು ಮಿತ್ರರು ಮೊದಲಾದವರಿಂದ ಯಾವಾಗಲೂ ತುಂಬಿ ತುಳುಕುತ್ತಿದ್ದ ಈ ನರಗುಂದವನ್ನು ರಾತ್ರಿಯಲ್ಲಿ ಯಾರಿಗೂ ಹೇಳದೆ ಕೇಳದೆ ಬಿಟ್ಟು ಓಡಿ ಹೋದೆವು. ಅದೇ ನಾವು ಈಗ ನಿರ್ಜನವೂ ರೌದ್ರವೂ ಆದ ಅದೇ ಪಟ್ಟಣವನ್ನು ಮಾತ್ರ ಹೀಗೆ ಪ್ರವೇಶ ಮಾಡಬೇಕಾಯಿತಲ್ಲವೇ? "ಕೊಡಲಿಯ ಕಾವು ಕುಲಕ್ಕೇ ಮೂಲ" ವೆಂಬಂತೆ, ನಮ್ಮವರೇ ಆದ ಆ ಕೃಷ್ಣಾಜೀಪಂತ ಹಾಗು ಬನ್ಯಾ ಇವರ ನೀಚತನವೇ ಇದೆಲ್ಲದರ ಮೂಲಕಾರಣವು. ಅವರೇ ವೈರಿಗಳಿಗೆ ಮನೆಯೊಳಗಿನ ಒಡಕನ್ನೆಲ್ಲ ಕಾಲಕಾಲಕ್ಕೆ ತಿಳಿಸಿ ಈ ಸ್ಥಿತಿಗೆ ನರಗುಂದವನ್ನು ತಂದರು. ಸಾವಿರಾರು ಜನರು ಮನೆಮಾರುಗಳನ್ನೆಲ್ಲ ತೊರೆದು ಅಡವಿಯ ಸೇರಬೇಕಾಗಿ ಬಂದಿತು! ಪಾರಾದೆವೆಂದು ಭಾವಿಸಿ

ಕುಟುಂಬದೊಡನೆ ಹಳ್ಳಿಯಲ್ಲಿಯೇ ಆನಂದದಿಂದ ಕಾಲಹರಣಮಾಡುತ್ತಿದ್ದೆವು. ಆದರೆ ಇಷ್ಟರಲ್ಲಿ ನನ್ನ ಹಾಗೂ ನನ್ನ ಮಗನ ಮೇಲೆ ಈ ಪ್ರಾಣಸಂಕಟವು ಬಂದೊದಗಿದೆ! ಇನ್ನು ಇದರೊಳಗಿಂದ ಹೇಗೆ ಪಾರಾಗಬೇಕೆಂಬುದೇ ನನ್ನ ಬುದ್ಧಿಗೆ ತೋಚದಾಗಿದೆ!" ಹೀಗೆ ವಿಚಾರ ಮಾಡುತ್ತ ದಿಙ್ಮೂಢನಾಗಿ ಹೋದನು. ಹೃದಯದ್ರಾವಕವಾದ ಚಿತ್ರಪಟವು ಆತನ ಕಣ್ಣೆದುರಿಗೆ ಬಂದು ನಿಂತಿತು. ಕಣ್ಣೀರುಗಳು ಪಟಪಟನೆ ಬೀಳಹತ್ತಿದವು. ಇದನ್ನು ಕಂಡು ಕೃಷ್ಣರಾಯನು- "ಅಪ್ಪಾ ನಮ್ಮ ಮೇಲೆ ಒಳ್ಳೆಯ ಕಠಿಣ ಪ್ರಸಂಗವು ಬಂದುದೇನೋ ನಿಜವು! ಆದರೂ ಧೈರ್ಯಗುಂದಬೇಡಿರಿ. ಸರ್ವಜ್ಞನಾದ ಆ ಜಗದೀಶನು ಅನ್ಯಾಯ ಮಾಡಲಾರನು. ನಾವು ಇದು ವರೆಗೆ ಯಾವದೇ ತರದ ಪಾಪಕೃತಿಯನ್ನಾಗಲೀ ಮರೆ ಮೋಸಗಳನ್ನಾಗಲಿ ಮಾಡಿರುವದಿಲ್ಲವೆಂಬದು ನಿಜವಿದ್ದರೆ ಆದರೆ ಸಹಜವಾಗಿ ಈ ಸಂಕಟದಿಂದ ಪಾರಾಗುವೆವು! ಇದರಲ್ಲೇನೂ ಸಂದೇಹವಿಲ್ಲ! ಪರಮೇಶ್ವರನಲ್ಲಿ ವಿಶ್ವಾಸವಿಟ್ಟು ಧೈರ್ಯತಾಳಿರಿ. ಅಂಜುವದರಿಂದ ಆಗುವದೇನು? ಇದನ್ನು ನಾನು ನಿಮಗೆ ಹೇಳಬೇಕೆಂತಲ್ಲ. ಆದರೂ ಸದ್ಯದ ಪ್ರಸಂಗದಲ್ಲಿ ತಮಗೆ ಹೀಗೆ ಹೇಳುವ ಧೈರ್ಯಮಾಡಿದ್ದೇನೆ. ಪುತ್ರವಾತ್ಸಲ್ಯದಿಂದ ನನ್ನನ್ನು ಕ್ಷಮಿಸಬೇಕಾಗಿ ಬೇಡಿಕೊಳ್ಳುವೆನು." ಎಂದನು.

ಮಗನ ಈ ಮಾತುಗಳನ್ನು ಕೇಳಿ ಗೋವಿಂದರಾಯನಿಗೆ ಆನಂದವಾಯಿತು. ಇಷ್ಟೇ ಅಲ್ಲ; ಸಂಗಡಿಗರಾದ ಸಿಪಾಯರೂ ಆನಂದಬಟ್ಟು ಹುಡುಗನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಆತನೊಡನೆ ಇಲ್ಲದ ಹರಟೆ ಹೊಡೆಯುತ್ತ ಮಾರ್ಗ ಕ್ರಮಿಸಹತ್ತಿ ನರಗುಂದವನ್ನು ತಲ್ಪಿದರು. ಊರಿಗೆ ಹೋದೊಡನೆ ಕೃಷ್ಣರಾಯನನ್ನು ಕರೆತಂದ ಸುದ್ದಿಯನ್ನು ಸಾಹೇಬನಿಗೆ ತಿಳಿಸಿದರು. ಆತನ ಸೌಜನ್ಯ ಹಾಗು ನಿರ್ದೋಷಿತ್ವ ಇವು ವಿಶ್ವಸನೀಯವೆಂದು ಹೇಳಿದರು. ಆ ಮೇಲೆ ನ್ಯಾಯನಿರ್ಣಯವಾಗುವ ವರೆಗೆ ಗೋವಿಂದರಾಯನು ತನಗೆ ಬೇಕಾದಲ್ಲಿ ಇರಬಹುದೆಂದೂ ಪ್ರತಿದಿನವೂ ತನ್ನ ನ್ಯಾಯಸಭೆಗೆ ಮಾತ್ರ ಬರಬೇಕೆಂದೂ ಸಾಹೇಬನು ಅಪ್ಪಣೆ ಮಾಡಿದನು.

---

*

## ೭ ನೆಯ ಪ್ರಕರಣ.

## ಅತ್ತೆ ಸೊಸೆಯರ ಅಂತ್ಯ !



ಪ್ರಿಯವಾಚಕರೇ,

ಗೋವಿಂದರಾಯನು ಕೃಷ್ಣರಾಯನನ್ನು ಕರಕೊಂಡು ನರಗುಂದಕ್ಕೆ ಹೋದ ವಿಷಯವನ್ನು ಹಿಂದಿನ ಪ್ರಕರಣದಲ್ಲಿ ಹೇಳಿದ್ದೇವಷ್ಟೇ? ಆದರೆ ನ್ಯಾಯ ವಿಚಾರಣೆಗೆ ಇನ್ನೂ ಬಹಳ ಅವಕಾಶವಿದ್ದುದರಿಂದ, ಅಲ್ಲಿಯ ವರೆಗೆ ನಾವು ಭಾಸ್ಕರರಾಯನ ತಾಯಿಯಾದ ಯಮುನಾಬಾಯಿಯೂ ಸತಿಯಾದ ಸಾವಿತ್ರೀಬಾಯಿಯೂ, ಅವನ ಹೇಳಿಕೆಯಂತೆ ಅರಮನೆಯಿಂದ ಹೊರಬಿದ್ದ ಬಳಿಕ ಎಲ್ಲಿಗೆ ಹೋದರು ಮತ್ತು ಏನು ಮಾಡಿದರೆಂಬುದನ್ನು ತುಸುವಿಚಾರಿಸುವ ಬನ್ನಿರಿ!

ಯಮುನಾಬಾಯಿಗೆ ತೌರಮನೆಯ ಕಡೆಯಿಂದ ದೂರದ ಆಪ್ತನಾದ ರಾಮಚಂದ್ರನೆಂಬೊಬ್ಬ ಬ್ರಾಹ್ಮಣನು ಬಹುಕಾಲದಿಂದ ನರಗುಂದದಲ್ಲಿಯೇ ವಾಸವಾಗಿದ್ದನು. ಮಗನಾದ ಭಾಸ್ಕರರಾಯನ ಹೇಳಿಕೆಯಂತೆ ಅರಮನೆಯನ್ನು ಬಿಟ್ಟು, ಸೊಸೆಯೊಂದಿಗೆ ಹೊರಡುವಾಗ ತಮ್ಮ ಸಂಗಡ ಒಬ್ಬ ಗಂಡಸು ಇದ್ದರೆ ನೆಟ್ಟಗೆಂದು ಭಾವಿಸಿ ಯಮುನಾಬಾಯಿಯು ಈ ಮೇಲೆ ಹೇಳಿದ ರಾಮಚಂದ್ರನನ್ನು ಸಂಗಡ ಕರಕೊಂಡಿದ್ದಳು. ರಾಮಚಂದ್ರನು ಭಾಸ್ಕರರಾಯನ ಸಂಬಂಧಿಕನಾದರೂ ಅತಿ ದರಿದ್ರನಿದ್ದನು. ದ್ರವ್ಯ ಸಂಪಾದಿಸುವ ಜಾಣತನವು ಆತನಲ್ಲಿ ಇರದಿರುವದೇ ಇದಕ್ಕೆ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಇರಲಿ!

ಅರಮನೆಯಿಂದ ಹೊರಡುವ ಮೊದಲು ಅವರು ಕುಲಸ್ವಾಮಿಯಾದ ವೆಂಕಟರಮಣನ ದೇವಾಲಯವನ್ನು ಹೊಕ್ಕು ಭಯಭಕ್ತಿಯಿಂದ ಆತನಿಗೆ ನಮಿಸಿ ಎದ್ದುನಿಂತು ಕೈಮುಗಿದುಕೊಂಡು “ದೇವಾಧಿದೇವಾ, ವೆಂಕಟಪತಿಯೇ, ನಿನ್ನ ಲೀಲೆಯು ಅಗಾಧವಾದದ್ದು. ಆದದ್ದು ಆಗಿ ಹೋಗಿದೆ. ಇನ್ನು ಮೇಲಾದರೂ ನಮಗೆ ಸರಿಯಾದ ಮಾರ್ಗವನ್ನು ತೋರಿಸು. ಕೃಪೆಯಿರಲಿ ನಮಗಿನ್ನು ನಿನ್ನ ದರ್ಶನವಾಗಲಾರದು ಇದೇ ಕಡೆಯ ದರ್ಶನ, ನಿನ್ನ ಧ್ಯಾನಮಾಡುತ್ತ ನಿಲ್ಲುವದಕ್ಕೆ ಕೂಡ ಅವಕಾಶವಿಲ್ಲದಾಗಿದೆ. ಹೋಗಿ ಬರುವೆವು. ನಿನ್ನ ದಯೆ ಇರಲಿ” ಎಂದು ದೇವನನ್ನು ಬೇಡಿಕೊಂಡು, ಯಾರೂ ಅರಿಯದಂತೆ ರಾಮಚಂದ್ರನೊಡನೆ ಸುರಕ್ಷಿತವಾಗಿ ಯಾವ ಆತಂಕವೂ ಇಲ್ಲದೆ ಪ್ರಾಸಾದದಿಂದ ಹೊರಬಿದ್ದು ಹೋದರು. ವಾಚಕರೇ, ಗರ್ಭಶ್ರೀಮಂತರ ಮನೆಯ ಹೆಂಗಸರು ಹೀಗೆ ಅನಾ

ಥರಂತೆ ಕಳ್ಳರಹಾಗೆ ಓಡಿ ಹೋಗುವಾಗ ಅವರ ಮನಕ್ಕೆ ಹೇಗೆನಿಸಿರಬಹುದೆಂಬುದನ್ನು ನೀವೇ ವಿಚಾರ ಮಾಡಿರಿ! ದಾರಿಯು ನಡೆದು ಗೊತ್ತಿಲ್ಲದ ಅವರು ಹೇಗೆ ಮಾರ್ಗಕ್ರಮಿಸುತ್ತಿರಬಹುದೆಂದು ನೀವು ವಿಚಾರಮಾಡುತ್ತಿರಬಹುದು! ಆದಕ್ಕೆ ಇಷ್ಟು ವಿಚಾರವೇಕೆ? ಅವರನ್ನೇ ಹಿಂಬಾಲಿಸುವ ನಡೆಯರಿ.

ಏನಾದರೂ ಕಠಿಣವಾದ ಪ್ರಸಂಗ ಬಂದರೆ ಅರಿಗಳ ಕೈಯಿಂದ ಪಾರಾಗಿ ಹೋಗಲು ಬರುವಂತೆ, ರಾಜರು ತಾವಿರತಕ್ಕ ದುರ್ಗಗಳಿಗೆ ಕಳ್ಳದಾರಿಯೊಂದನ್ನು ಮಾಡಿಸುವ ಪರಿಪಾಠವಿದ್ದಿತು. ಅವರಂತೆ ಭಾಸ್ಕರರಾಯನೂ ನರಗುಂದದ ದುರ್ಗಕ್ಕೆ ಗುಪ್ತ ಮಾರ್ಗವೊಂದನ್ನು ಮಾಡಿಸಿದನು. ಅದೇ ಗುಪ್ತಮಾರ್ಗದಿಂದ ಮೇಲೆ ಹೇಳಿದಂತೆ ರಾಮಚಂದ್ರನೊಡನೆ ಅತ್ತೆ ಸೊಸೆಯರಿಬ್ಬರೂ ಪಾರಾಗಿ ಗುಡ್ಡವನ್ನಿಳಿದ ಬಳಿಕ ಅವರ ಮನಕ್ಕೆ ತುಸು ಸಮಾಧಾನವೆನಿಸಿತು. ಬಳಿಕ ಕೋಮಲೆಯೂ ಸುಂದರಿಯೂ ಸುಶೀಲೆಯೂ ರಾಜಪತ್ನಿಯೂ, ಸದ್ಯಕ್ಕೆ ಅನಾಥೆಯೂ ಆದ ಭಾಸ್ಕರರಾಯನ ಹೆಂಡತಿ ಸಾವಿತ್ರೀಬಾಯಿಯು, ಮಾತೆಗೆ ಸದೃಶಳಾದ ಅತ್ತೆಯನ್ನು ಕುರಿತು–"ಅತ್ತೆಯವರೇ, ತುಸು ಸಾವಕಾಶವಾದರೂ ಹೆಜ್ಜೆ ಹಾಕಿರಿ. ಅವ್ವಾ, ನನ್ನಿಂದ ಇನ್ನು ಮೇಲೆ ಒಂದು ಹೆಜ್ಜೆ ಸಹ ಮುಂದಕ್ಕೆ ಇಡುವದಾಗದು. ಆದದರಿಂದ ಎಲ್ಲಿಯಾದರೂ ತುಸು ವಿಶ್ರಾಂತಿ ತಕ್ಕೊಳ್ಳೋಣ!" ಎಂದು ನುಡಿದಳು.

ಸಮುದ್ರವು ಏರುವಿಕೆಯ ಕಾಲಕ್ಕೆ ಹೇಗೆ ಮೇರೆದಪ್ಪಿ ಹರಿಯತೊಡಗಲಾರಂಭಿಸುವದೋ, ಹಾಗೆ ಸೊಸೆಯ ಮಾತುಗಳನ್ನು ಕೇಳಿ. ಯಮುನಾಬಾಯಿಯ ದುಃಖಾರ್ಣವವು ಉಕ್ಕೇರಿ ನಯನದ್ವಯದಿಂದ ಒತ್ತರದಿಂದ ಹೊರಸೂಸಹತ್ತಿತು. ಓದುಗರೇ, ಇದೀಗಿನ ಅತ್ತೆಸೊಸೆಯರೊಡನೆ ನಮ್ಮ ಯಮುನಾಬಾಯಿ ಹಾಗು ಸಾವಿತ್ರಿಬಾಯಿ ಇವರನ್ನು ಮಾತ್ರ ಹೋಲಿಸಬೇಡಿರಿ. ಭಾಸ್ಕರರಾಯನ ತಾಯಿಯು ಸೊಸೆಯನ್ನು ಹೊಟ್ಟೆಯ ಮಗಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಸಾವಿತ್ರೀಬಾಯಿಯಾದರೂ ಅತ್ತೆಯನ್ನು ತಾಯಿಯೆಂದೇ ತಿಳಿದಿದ್ದಳು. ಅವಳೊಡನೆ ಬಲು ಸಲಿಗೆಯಿಂದ ಇರಲಿ. ಕಲ್ಲುಮುಳ್ಳಗಳನ್ನು ತುಳಿಯುತ್ತ ಗುಡ್ಡದಿಂದ ಕೆಳಕ್ಕೆ ಬರುವದರೊಳಗಾಗಿಯೇ ಅವರೀರ್ವರ ಕಾಲುಗಳು ಸೋತವು. ಹೆಚ್ಚಾಗಿ ತೇಕ ಹತ್ತಿದರು. ಹೀಗಾದುದೇನು ಆಶ್ಚರ್ಯಕರವಲ್ಲ! ಯಾಕಂದರೆ ಗರ್ಭಶ್ರೀಮಂತರ ಹೊಟ್ಟೆಯಲ್ಲಿ ಹುಟ್ಟಿ ಅಚ್ಚೆಯಿಂದಲೂ ಪ್ರೇಮದಿಂದಲೂ ಬೆಳೆದು ದೊಡ್ಡವರಾದ ಬಳಿಕ, ಗರ್ಭಶ್ರೀಮಂತನಾದ ಭಾಸ್ಕರರಾಯನ ಮನೆಗೆ ಬಂದು ಮೇಣೆ ಪಲ್ಲಕ್ಕಿಗಳಲ್ಲಿಯೇ ಓಡಾಡುತ್ತಿದ್ದ ಆ ಹೆಂಗೆಳೆಯರಿಗೆ ಕಠಿನಪ್ರಸಂಗದ್ದಾಗಲಿ ಅತಿ ದುಃಖದ್ದಾಗಲಿ ಅನುಭವವಾದರೂ ಹೇಗೆ ಬರಬೇಕು? ಇದು ವರೆಗೂ ಸುಖಸಾಮ್ರಾಜ್ಯದಲ್ಲಿಯೇ

ವಿಹರಿಸುತ್ತಿದ್ದ ಅವರ ಮೇಲೆ ಈಗ ಅತಿ ಭಯಂಕರವಾದ ಕುತ್ತು ಬಂದಿತು. ಇಷ್ಟಾದರೂ ಅವರು ಗಟ್ಟಿಗರೆಂದೇ ಹೇಳಬಹುದು. ಕಾಲಕ್ಕೆ ತಕ್ಕ ರೀತಿಯಿಂದ ಅವರು ತಮ್ಮ ಮಾನರಕ್ಷಣೆಯನ್ನು ಮಾಡಿಕೊಂಡರು. ಇಲ್ಲದಿದ್ದರೆ ಮಾನ ಕಳೆದುಕೊಂಡು ಕೊಳೆಯುತ್ತ ಬೀಳಬೇಕಾಗುತ್ತಿತ್ತು. ಇರಲಿ.

ಸೊಸೆಯ ಮಾತುಗಳನ್ನು ಕೇಳಿದೊಡನೆ ಯಮುನಾಬಾಯಿಯು ಹೊರಳಿ ಅವಳನ್ನು ನೋಡಿದಳು. ಸೊಸೆಯ ಮುಖವು ಕೆಂಪಾಗಿದ್ದಿತು. ಅವಳ ಕೋಮಲವಾದ ಕಪೋಲಗಳ ಮೇಲೆ ಕಣ್ಣೀರುಗಳು ಬೆವರ ಹನಿಗಳೊಡನೆ ಕೂಡಿಕೊಂಡು ಉದಿರುತ್ತಿದ್ದವು. ಆಯಾಸವು ಅತಿಶಯವಾದುದರಿಂದ ಶ್ವಾಸೋಚ್ಛ್ವಾಸವು ಒತ್ತರದಿಂದ ಸಾಗಿದ್ದಿತು. ಮುಳ್ಳುಗಳ ತುಳಿತದಿಂದಲೂ ಕಲ್ಲುಗಳನ್ನೆಡವಿದ್ದರಿಂದಲೂ ಬೆರಳುಗಳಿಂದ ರಕ್ತವು ಹೊರಚಿಮ್ಮುತ್ತಲಿತ್ತು. ತನ್ನ ಸೊಸೆಯ ಈ ಅವಸ್ಥೆಯನ್ನು ಕಂಡು ಯಮುನಾಬಾಯಿಗೆ ಅತಿದುಃಖವಾಯಿತು. ಸೊಸೆಯನ್ನು ಬಿಗಿದಪ್ಪಿಕೊಂಡಳು. ತನ್ನ ಅವಸ್ಥೆಯನ್ನು ಕಂಡು ಅತ್ತೆಗೆ ಅತಿಸಂಕಟವಾದುದನ್ನು ತಿಳಿದು ತಾನೂ ಅವಳನ್ನು ಬಿಗಿದಪ್ಪಿಕೊಂಡು– " ಅತ್ತೆಯವರೇ, ಹೀಗೇಕೆ ಮಾಡುವಿರಿ? ಸದ್ಯದ ಸಂಕಟದಲ್ಲಿ ಸಿಕ್ಕ ಸಮದುಃಖಿಗಳಾದ ನಮ್ಮೊಳಗಿನ ಯಾರು ಯಾರ ಸಲುವಾಗಿ ಶೋಕಮಾಡಬೇಕು? ನನ್ನನ್ನು ಕಂಡು ನಿಮಗಾದಷ್ಟು ತಾಪವೇ ನಿಮ್ಮನ್ನು ಕಂಡು ನನಗೂ ಆಗುತ್ತಿದೆ! ಆಗಳೆ ನಿಮ್ಮ ಕಾಲಲ್ಲಿ ನಟ್ಟ ಮುಳ್ಳನ್ನು ರಾಮಚಂದ್ರನು ತೆಗೆದೊಡನೆ ನೆತ್ತರವು ಒತ್ತರದಿಂದ ಹರಿಯಹತ್ತಿದ್ದನ್ನು ಕಂಡೊಡನೆಯೇ ನನಗೂ ಬಹಳ ಸಂಕಟವಾಯಿತು! ಆದರೂ ಒತ್ತಿ ಬರುತ್ತಿದ್ದ ದುಃಖವನ್ನು ಹತ್ತಿಕ್ಕಿಕೊಂಡು ಹಾಗೆಯೇ ಮುಂದಕ್ಕೆ ಸಾಗಿದೆನು. ಆದರೆ ಈಗ ಮಾತ್ರ ನನ್ನಿಂದ ಮುಂದೆ ನಡೆಯಲಿಕ್ಕಾಗದ್ದರಿಂದ ತುಸು ವಿಶ್ರಮಿಸುವಾ ಎಂದು ಹೇಳಿದೆನು. ದಾರಿಯಲ್ಲಿ ಹೀಗೆ ದುಃಖಿಸುತ್ತ ಕೂಡ್ರುವದು ಎಷ್ಟು ಮಾತ್ರವೂ ಯೋಗ್ಯವಾಗಲಾರದು. " ಎಂದು ನುಡಿದಳು. ಸೊಸೆಯಾಡಿದ ಮಾತನ್ನು ಕೇಳಿ ಯಮುನಾಬಾಯಿಯು ಕಣ್ಣುಗಳನ್ನೊರಿಸುತ್ತ "ಮಗಳೇ, ಸಾವಿತ್ರೀ, ನೀನನ್ನುವದು ನಿಜವು. ಪರಮೇಶ್ವರನು ನಮ್ಮನ್ನು ಎಂಥ ಕಠಿಣವಾದ ಸಂಕಟಕ್ಕೀಡು ಮಾಡಿರುವನೆಂಬುದು ನಿನಗೆ ಚೆನ್ನಾಗಿ ತಿಳಿದಿದೆ. ಹೆಚ್ಚಾಗಿ ಏನನ್ನೂ ಹೇಳಬೇಕೆನ್ನುವಂತಿಲ್ಲ. ನೀನು ಅಷ್ಟು ಚದುರೆಯೇ ಇರುವಿ! ಆದರೂ ಅರಮನೆಯಲ್ಲಿ ರನ್ನಗಂಬಳಿಯ ಮೇಲೆ ಹತ್ತು ಹೆಜ್ಜೆಗಳನ್ನು ಕೂಡ ನಡೆಯದ ನೀನು ಇಂದು ಗುಡ್ಡದಲ್ಲಿ ಕಲ್ಲುಮುಳ್ಳುಗನ್ನು ತುಳಿಯುತ್ತ ಬರುತ್ತಿರುವದನ್ನು ನನ್ನಿಂದ ನೋಡುವದಾಗಲೊಲ್ಲದು. ನಿನ್ನ ಈ ಒಡೆದ ಬೆರಳುಗಳಿಂದ............ಅವ್ವಯ್ಯಾ! ಮೇಲಿನ ತೊಗಲು ಸಹ ಕಿತ್ತಿರುವದಲ್ಲ! ಎಂದು ನುಡಿ

ದವಳೇ ತಾನುಟ್ಟಿದ್ದ ಸೀರೆಯ ಅಂಚನ್ನು ಹರಿದು ಅವಳ ಬೆರಳುಗಳಿಗಾದ ಗಾಯಗಳನ್ನು ಕಟ್ಟತೊಡಗಿದಳು. ಅಷ್ಟರಲ್ಲಿಯೇ ಅವಕಾಶ ದೊರೆತೊಡನೆ ಸಾವಿತ್ರೀಬಾಯಿಯು- ' ಅತ್ತೆಯವರೇ, ನನ್ನನ್ನು ನೋಡಿ ನಿಮಗಿಷ್ಟು ಕಷ್ಟವಾಗುತ್ತಿರುವದು ! ಆದರೆ ನಿಮಗೇನು ನಡೆಯುವದು. ಗೊತ್ತಿದೆಯೇ? ನಿಮ್ಮ ಮೇಲೆಯೂ ಆಪತ್ತು ಬಂದುದು ಇದೇ ಮೊದಲು. ಆದದರಿಂದಲೇ ಯಾರ ಸಲುವಾಗಿಯೂ ಯಾರೂ ಮರುಗುವಂತಿಲ್ಲವೆಂದು ನಾನನ್ನುವದು ! (ಒಮ್ಮೆಲೆ ಏನೋ ನೆನಪು ಮಾಡಿಕೊಂಡಂತೆ ಮಾಡಿ) ಈಗ ತಕ್ಕೊಂಡ ವಿಶ್ರಾಂತಿಯೇ ಸಾಕು. ಇನ್ನು ಹೊರಡುವದೇ ಉತ್ತಮವು ಎಂದು ಮಾತಾಡಿದಳು. ಯಮುನಾಬಾಯಿಯ ಕೈಹಿಡಿದು ಅವಳನ್ನು ಎಬ್ಬಿಸುತ್ತ- " ಮಗಳೇ, ಅಹುದು ನಾವು ಈಗ ಹೊರಡುವದೇ ನೆಟ್ಟಗೆ. ನಿಜವಾಗಿಯೂ ನೀನು ಸುವಿಚಾರವಂತಿಯಿರುವಿ. ನಡೆಯನ್ನಾ, ಮೆಲ್ಲ ಮೆಲ್ಲನೆ ಹೆಜ್ಜೆಗಳನ್ನಿಕ್ಕುವಾ ! ಮಾರ್ಗಕ್ರಮಣಮಾಡುತ್ತಲೇ ಮಾತಾಡುತ್ತ ಹೋಗುವಾ ! ಅಂದರೆ ದಾರಿಯಾದರೂ ಸಾಗೀತು ! '' ಎಂದು ನುಡಿದಳು. ಅತ್ತೆ ಸೊಸೆಯಂದಿರು ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು ಅಳುತ್ತ ಕುಳಿತಾಗ ರಾಮಚಂದ್ರನು ಮೋರೆ ಸಪ್ಪಗೆ ಮಾಡಿಕೊಂಡು ಅವರ ಬಳಿಯಲ್ಲೇ ನಿಂತುಕೊಂಡಿದ್ದನು. ಅವರು ಎದ್ದು ದಾರಿಯ ನಡೆಯ ಹತ್ತಿದೊಡನೆ ಅವರನ್ನು ಹಿಂಬಾಲಿಸಿ ಹೊರಟನು. ಆತನು ತನ್ನ ಮನದಲ್ಲಿಯೇ- 'ದೇವಾ, ಏನು ನಿನ್ನ ವಿಚಿತ್ರವಾದ ಲೀಲೆ! ಹುಟ್ಟಿದಾಗಿನಿಂದ ಯಾರು ಬಿಸಿಲಿನ ಮೊಗವನ್ನೇ ನೋಡಿಲ್ಲವೋ, ಹಾಗೂ ವಾಹನಗಳಿಲ್ಲದೆ ಎಂದೂ ಪ್ರವಾಸ ಮಾಡಿಲ್ಲವೋ ಅಂತಹರು, ತಮ್ಮ ಜೀವರಕ್ಷಣೆಗಾಗಿ ಇಂದು ಅಡವಿಯ ಸೇರಿ ಕಳ್ಳರಂತೆ ಓಡುವಂತೆ ಮಾಡಿದೆಯಲ್ಲವೇ ? ವೆಂಕಟಪತೇ, ಇದೆಂಥ ನಿನ್ನ ನ್ಯಾಯ ? ಯಾರ ಪಾದಗಳನ್ನು ತೊಳೆಯಲು ದಾಸಿಯರು ನಾ ಮುಂದೆ ನೀ ಮುಂದೆ ಎಂದು ಧಾವಿಸುತ್ತಿದ್ದರೋ, ಅಂಥವರ ಪಾದಗಳಿಂದ ಇಂದು ಕಲ್ಲುಮುಳ್ಳುಗಳಿಂದುಂಟಾದ ಛಿದ್ರಗಳಿಂದ ರಕ್ತವು ಹೊರಸೂಸುತ್ತಿರುವದು. ಕೋಮಲೆಯರಾದ ಅಬಲೆಯರು ಈ ಪರಿಯ ಕಷ್ಟಗಳನ್ನು ಹೇಗೆ ಸಹನ ಮಾಡಬಹುದೆಂಬುದರ ವಿಚಾರವನ್ನಾದರೂ ನೀನು ಮಾಡಬಾರದಾಗಿತ್ತೇ ? ಇಷ್ಟು ಕಷ್ಟ ಕೊಟ್ಟದರೂ ಇನ್ನೂ ಇವರನ್ನು ಜೀವದಿಂದಿಟ್ಟಿರುವೆಯಲ್ಲ ! ಇದರ ಮೇಲಿಂದ ಇವರಿಗೆ ಇದಕ್ಕೂ ಹೆಚ್ಚಾಗಿ ದುಃಖಕೊಡಬೇಕೆಂದು ನಿನ್ನ ಮನದಲ್ಲಿರುವದೋ ಏನು? ಬೇಡ, ಬೇಡ. ಈಗ ಇವರಿಗಾದ ದುಃಖವೇ ಹೆಚ್ಚಾಗಿದೆ! ನನ್ನಿಂದ ಸಹ ನೋಡಲಿಕ್ಕಾಗದಷ್ಟು ಮೇರೆಯನ್ನು ಮೀರಿದೆ! ಇವರ ವಿಲಾಪವನ್ನು ಕಿವಿಯಿಂದ ಕೇಳುವಂತಿಲ್ಲ! ಇಷ್ಟಾದರೂ ನೀನು ಕಣ್ಣು ಮುಚ್ಚಿಕೊಂಡಿರುವಿಯಲ್ಲ! ದೇವಾ, ನೀನು ವಿಶ್ವಚಕ್ಷುವಲ್ಲವೇನು? "ಹೀಗೆ ಮರುಗುತ್ತಾ ಹೊರಟಿದ್ದನು. ಇತ್ತ ಸಾವಿತ್ರೀಬಾಯಿಯು ಮನದಲ್ಲಿ- " ದೇವಾ,

ನೀನು ನ್ಯಾಯಪ್ರಿಯನಲ್ಲವೇ? ಅಂದ ಮೇಲೆ ನಮ್ಮ ವಿಷಯದಲ್ಲಿಯೇ ಹೀಗೇಕೆ ಅನ್ಯಾಯ ಮಾಡಲುದ್ಯುಕ್ತನಾದೆ? ನಮ್ಮ ದೇಶಬಾಂಧವರ ಕಲ್ಯಾಣವಾಗಬೇಕು ಪರಧರ್ಮೀಯರ ಬಲೆಯೊಳಗೆ ಸಿಕ್ಕಬಾರದು ಆ ವಿಧರ್ಮಿಗಳು ಎಷ್ಟೋ ದೇವಸ್ಥಾನಗಳ ಉತ್ಪನ್ನವನ್ನು ಕಸಿದುಕೊಂಡರು ಗೋಬ್ರಾಹ್ಮಣರಿಗೆ ಮೆಲ್ಲನೆ ತಾಪವಾಗಹತ್ತಿರುವದು; ಅವರ ಅಪಮಾನವಾಗಹತ್ತಿರುವದು. ಇದನ್ನು ನಾನು ನೋಡಲಾರೆನು ! ಎಲ್ಲವೂ ಮೊದಲಿನಂತೆ ಸುರಕ್ಷಿತವಾಗಿ ಸಾಗಬೇಕಾದರೆ ಯುದ್ಧ ಮಾಡಲಿಕ್ಕೆ ಬೇಕು. ಅದರ ಹೊರತಾಗಿ ಎರಡನೆಯ ಉಪಾಯವೇ ಉಳಿದಿಲ್ಲ'ವೆಂದು ಅವರು ಆಗಾಗ ನುಡಿಯುತ್ತಿದ್ದಂತೆ ಯುದ್ಧವನ್ನಾರಂಭಿಸಿದರು ಇದು ನಿನ್ನ ಮನಕ್ಕೆ ಬಾರದಿದ್ದರೆ ಸ್ವಪ್ನದಲ್ಲಿ ಒಂದು ಹೇಳಬೇಕಾಗಿತ್ತು, ಹಾಗೆ! ಆದರೆ ಹಾಗೆ ಮಾಡದೆ, ಯಾವ ಜೀವಕ್ಕೆ ದುಃಖಕ್ಲೇಶಗಳ ಅನುಭವವೇ ಇದ್ದಿಲ್ಲವೋ, ಅಂಥ ಆ ಜೀವವನ್ನು ಒಮ್ಮೆಗೆ ಅನಿವಾರ್ಯವೂ ದುಸ್ಸಹವೂ ಆದ ಎಂಥ ವಿಪತ್ತಿನಲ್ಲಿ ನೂಕಿದೆ? ಯಾವನು ಮಹಾವೀರನೋ, ಅಂತಹನು ತನ್ನ ಜೀವರಕ್ಷಣೆಗಾಗಿ ವೇಷವನ್ನು ಬೇರೆ ಮಾಡಿಕೊಂಡು ತುಡುಗನಂತೆ ಅಡವಡವಿ ಅಡ್ಡಾಡುವದು ನಿನಗೆ ಯೋಗ್ಯವಾಗಿ ಕಂಡಿತೇಕೆ? ಪೂರ್ವಜನ್ಮದಲ್ಲಿ ಯಾವ ಘೋರ ಪಾತಕಗಳನ್ನು ನಾವು ಮಾಡಿದ್ದೆವೋ, ಅವುಗಳ ಫಲವನ್ನೀಗ ನಮಗೆ ಉಣ್ಣಹಚ್ಚಿರುವಿಯೋ ಏನೂ ತಿಳಿಯದಂತಾಗಿದೆ! ಪತಿಯ ಸ್ಥಿತಿಯೇನಾಗಿರುವದೆಂಬುದು ನೆನಪಾದೊಡನೆ ಅನಿವಾರ್ಯವಾದ ದುಃಖವುಂಟಾಗುವದು. ! ಹೃದಯವು ಬೆಂದಂತಾಗುವದು ! ಆದರೆ ಏನು ಮಾಡಲಿ? ಅವರ ಅಪ್ಪಣೆಯಂತೆ ಅತ್ತೆಯವರೊಡನೆ ಈಗ ಹೊರಟೆದ್ದು. ಅತ್ತ ಅವರು ಯಾವ ಅಡವಿಯಲ್ಲಿ ಓಡುತ್ತಿರುವರೆಂಬುದು ಸರ್ವಸಾಕ್ಷಿಯಾದ ನಿನಗೇ ಗೊತ್ತು ! ನಾನು ಕಾಲಲ್ಲಿ ನೋಡುತ್ತ ಮೆಲ್ಲಗೆ ಸಾಗಿದ್ದೇನೆ; ಆದರೂ ಕಲ್ಲು ಮುಳ್ಳುಗಳು ನಡುತ್ತಿವೆ! ಅತ್ತ ಅವರಾದರೋ ಓಡುತ್ತ ಹೊರಟಾಗ ಕಾಲುಗಳಿಗೆ ಗಾಯಗಳುಂಟಾಗಿ ಬೆರಳುಗಳೊಡೆದು ನೆತ್ತರ ಹರಿಯುತ್ತಿರಬಹುದು. ಇಂತಹ ಅವರ ವೇಳೆಯಲ್ಲಿ ಸೇವೆಯನ್ನಾರು ಮಾಡುತ್ತಿರಬಹುದು? ಅಯ್ಯೋ! ವೆಂಕಟಪತೇ, ಈ ವಿಚಾರಗಳಿಂದ ನನ್ನ ಹೃದಯವು ಬಿಚ್ಚುತ್ತಿರುವದಲ್ಲ!" ಎಂದು ನೆನೆನೆದು ಕಳವಳಗೊಳ್ಳುತ್ತಿದ್ದಳು.

ಹೀಗೆ ತನ್ನ ಪತಿಯ ವಿಷಯದಲ್ಲಿ ಅನೇಕ ತರದ ವಿಚಾರಗಳು ಮನದಲ್ಲಿ ಬಂದೊಡನೆ ಆ ಸಾಧ್ವೀಮಣಿಗೆ ಹಿಡಿಸಲಾರದಷ್ಟು ದುಃಖವಾಯಿತು ! ಬರಬರುತ್ತ ಅದು ದುಃಸಹವಾಯಿತು ! ಮಾರ್ಗಕ್ರಮಣ ಮಾಡುತ್ತಿದ್ದ ಅವಳು ಮೂರ್ಛೆ ಬಂದು ದೊಪ್ಪನೆ ಭೂಮಿಯಲ್ಲಿ ಬಿದ್ದಳು ! ಅತ್ತೆಯು ನಾಲ್ಕಾರು ಹೆಜ್ಜೆ ಮುಂದಾಗಿದ್ದಳು. ರಾಮಚಂದ್ರನು ಮೂವತ್ತು ಮೂವತ್ತೈದು ಹೆಜ್ಜೆ ಹಿಂದುಳಿದಿದ್ದನು. ಸಪ್ಪಳವಾದೊಡನಯೇ ಯಮುನಾಬಾಯಿಯು ಹೊರಳಿ ನೋಡಿದಳು. ಸೊಸೆಯು

ಮೂರ್ಛೆಬಂದು ಬಿದ್ದುಕೊಂಡಿದ್ದಾಳೆ. ಕೂಡಲೆ ಅವಳ ಬಳಿ ಧಾವಿಸಿ ಹೋಗಿ ತನ್ನ ತೊಡೆಯ ಮೇಲೆ ಆವಳ ಶಿರವನ್ನಿಟ್ಟುಕೊಂಡು, ಮೊಗದ ಮೇಲಿನ ಬೆವರನ್ನೊರಿಸಿ, ತನ್ನ ಸೆರಗಿನಿಂದ ಗಾಳಿ ಹಾಕಹತ್ತಿದಳು. ಇದನ್ನು ಕಂಡು ಹಿಂದೆ ಉಳಿದಿದ್ದ ರಾಮಚಂದ್ರನೂ ಓಡುತ್ತ ಅವರಿದ್ದಲ್ಲಿಗೆ ಬಂದನು. ಆಗ ಯಮುನಾಬಾಯಿಯು- "ರಾಮಚಂದ್ರಾ, ಇವಳು ಪ್ರಜ್ಞೆಯಿಲ್ಲದೆ ಬಿದ್ದುಕೊಂಡಿರುವಳು. ಬಳಿಯಲ್ಲಿಯೇ ಎಲ್ಲಿಯಾದರೂ ಜಲವಿದ್ದರೆ ನಿನ್ನ ಹೊದ್ದುಕೊಂಡಿರುವ ದೋತರವನ್ನು ಚೆನ್ನಾಗಿ ತೊಯಿಸಿಕೊಂಡು ಬಾ; ಹೋಗು ಬೇಗ. ಹುಚ್ಚನಂತೆ ನಿಲ್ಲಬೇಡ!" ಎಂದು ಹೇಳಿದಳು.

ರಾಮಚಂದ್ರನು ಜಲವನ್ನು ತರಲು ಹೋದನು. ಆದರೆ ವಾಠಕರೇ, ನೋಡಿರಿ ದೈವಲೀಲೆಯು ಎಷ್ಟು ವಿಚಿತ್ರವಿರುವದೆಂಬುದನ್ನು! ಯಾವಳು ಆನಂದಕ್ಕಾಗಿ ಉದ್ಯಾನದಲ್ಲಿ ಅಡ್ಡಾಡಲು ಹೊರಟರೆ ಸೇವೆಗಾಗಿ ದಾಸ ದಾಸಿಯರು ಕೈಕಟ್ಟಿಕೊಂಡು ನಿಲ್ಲುತ್ತಿದ್ದರೋ, ಅಂಥವಳು, ಈಗ ಬಿಸಿಲಿನಲ್ಲಿ ಕಲ್ಲುಮುಳ್ಳುಗಳಿಂದ ಆವೃತವಾದ ಬೀದಿಯಲ್ಲಿ ಪ್ರಜ್ಞೆತಪ್ಪಿ ಬಿದ್ದಿದ್ದಾಳೆ! ಯಾವಳಿಗೆ ತುಸು ಜಾಡ್ಯವಾದರೆ ಸಾಕು; ಅನೇಕ ನಾಮಾಂಕಿತ ರಾಜವೈದ್ಯರು ಬಂದು ಔಷಧವನ್ನು ಕೊಡುತ್ತಿದ್ದರೋ, ಅವಳು ಈಗ ಮೂರ್ಛಿತಳಾಗಿ ಬಿದ್ದುಕೊಂಡರೆ ನೀರು ಸಹ ಸಿಗುವದು ದುರ್ಲಭವಾಗಿದೆ! ಯಾವಳಿಗೆ ಚಿಂತೆಯ ಸ್ಪರ್ಶವಿದ್ದಿಲ್ಲವೋ, ಅಂತಹ ಆ ಭಾಸ್ಕರರಾಯನ ತಾಯಿಯು ಅಡವಿಯಲ್ಲಿ ಒಬ್ಬಳೇ ಕುಳಿತುಕೊಂಡು 'ನನ್ನ ಸೊಸೆಯು ಮೂರ್ಛೆತಿಳಿದು ಹೇಗೆ ಏಳಬಹುದು' ಎಂದು ಚಿಂತೆ ಮಾಡುತ್ತಲಿದ್ದಾಳೆ. ಇದೆಲ್ಲವನ್ನೂ ಕಂಡು "ಈಶ್ವರೇಚ್ಛಾ ಬಲೀಯಸೀ।" ಎಂದು ಔದಾಸೀನ್ಯವನ್ನು ತಳೆದು ಸುಮ್ಮನಿರಬೇಕಲ್ಲದೆ ಮತ್ತೇನು! ಇರಲಿ.

ರಾಮಚಂದ್ರನು ನೀರಿನ ಶೋಧಕ್ಕಾಗಿ ಹೋದ ಬಳಿಕ ಯಮುನಾಬಾಯಿಯು ಸೊಸೆಯನ್ನು ಎಚ್ಚರಿಸುವ ಅನೇಕ ಉಪಾಯಗಳನ್ನು ಮಾಡಿದಳು. ಮೊದಲು ಬೆವರೊಡೆದು ನೀರು ನೀರಾದ ಅವಳ ದೇಹವನ್ನೆಲ್ಲ ಬಟ್ಟೆಯಿಂದ ಒರೆಸಿದಳು. ಕೆಲಕಾಲದವರೆಗೆ ಗಾಳಿಯನ್ನು ಬೀಸಿದಳು. ಆದರೂ ಅವಳಿಗೆ ಎಚ್ಚರಾಗುವಂತೆ ಕಾಣಲಿಲ್ಲ; ಅದರಿಂದ ಸೊಸೆಯನ್ನು ತನ್ನ ಎದೆಗವಚಿಕೊಂಡು-" ಮಗಳೇ, ಏಳು, ಎಚ್ಚರಾಗು! ಈ ನಿರ್ಜನವಾದ ಪ್ರದೇಶದಲ್ಲಿ ಮುಪ್ಪಿನವಳಾದ ನನಗೆ ನಿನ್ನ ಹೊರತು ಮತ್ತಾರೂ ಗತಿಯಿಲ್ಲವೆಂಬುದು ನಿನಗೇನು ತಿಳಿಯದೇ? ಇದನ್ನರಿತವಳಾದ ನೀನು ಹೀಗೇಕೆ ಮಾಡುತ್ತಿರುವೆ! ನನ್ನ ಪ್ರಿಯ ಮಗೂ, ಕಣ್ದೆರೆದು ನನ್ನೊಡನೆ ಒಂದು ಶಬ್ದವನಾದರೂ ಮಾತಾಡು?" ಹೀಗೆ ಅನೇಕ ರೀತಿಯಾಗಿ ವಿಲಾಪಿಸುತ್ತಿದ್ದಳು ಸೊಸೆಯನ್ನೊಮ್ಮೆ ಮುದ್ದಿಸಿದಳು ಸಹ! ಇಷ್ಟಾ

ದರೂ ಅವಳಿಗೇನೂ ಎಚ್ಚರಾಗಲಿಲ್ಲ. ಮುದುಕೆಯು ಗಾಬರಿಯಾಗಿ– "ದೇವಾ! ವೆಂಕಟೇಶಾ! ನೀನಾದರೂ ಧಾವಿಸಿ ಬರಬಾರದೇ ನನ್ನ ಸಹಾಯಕ್ಕೆ! ಈ ಅನಾಥೆಯಾದ ಅಬಲೆಗೆ ನಿನ್ನ ಹೊರತು ಇನ್ನಾರುಗತಿ!" ಎಂದು ಬಹು ವಿಧವಾಗಿ ದೇವರಿಗೆ ಮೊರೆಯಿಡಹತ್ತಿದಳು! ಕಲಿಯುಗದ ಕಷ್ಟಗಳನ್ನು ಕಂಡು ಬೇಸತ್ತು ಬೌದ್ಧಾವತಾರವನ್ನು ತಾಳಿದ ದೇವನು ಇವಳ ಒದರುವಿಕೆಗೆ ಎಲ್ಲಿಯಾದರೂ ಧ್ವನಿಕೊಡುವನೇ! ಈಶಕೃಪೆಯಿಂದ ರಾಮುಚಂದ್ರನು ಮಾತ್ರ ದೋತರವನ್ನು ತೊಯಿಸಿಕೊಂಡು ಬಂದನು! ಕೂಡಲೆ ಮುದುಕೆಯು ಅದನ್ನು ಹಿಂಡಿ ತುಸು ನೀರನ್ನು ಕಣ್ಣಿಗೂ, ಉಳಿದುದನ್ನು ನೆತ್ತಿಗೂ ಬಡಿದು ಪುನಃ ಗಾಳಿಯನ್ನು ಬೀಸಹತ್ತಿದಳು. ನೆತ್ತಿಗೆ ತಂಪುಂಟಾದೊಡನೆ ಸಾವಿತ್ರೀಬಾಯಿಯು ಮೆಲ್ಲನೆ ಕಣ್ದೆರೆದು ಸುತ್ತಲೂ ನೋಡಿದಳು. ಅಲ್ಪಾವಧಿಯಲ್ಲಿ ಪೂರ್ಣವಾಗಿ ಎಚ್ಚತ್ತಳು. ಇಷ್ಟಾಗಬೇಕಾದರೆ ಆರು ತಾಸು ಹೊತ್ತೇರಿತ್ತು. ಬೇಸಿಗೆಯ ಕಾಲವಾದದರಿಂದ ಬಿಸಿಲಿನಿಂದ ನೆಲಕಾಯ್ದು ತಪ್ತವಾಗಿತ್ತು. ಸೊಸೆಯ ವಿಷಯದಲ್ಲಿ ಗಾಬರಿಯಾಗಿದ್ದ ಯಮುನಾಬಾಯಿಗೆ ನೆಲವು ಸುಡುತ್ತಿರುವದರ ಅರಿವೇ ಇದ್ದಿಲ್ಲ. ಸಾವಿತ್ರೀಬಾಯಿಗೆ ಎಚ್ಚರಾದ ಬಳಿಕ ಯಮುನಾಬಾಯಿಯು ರಾಮುಚಂದ್ರನಿಗೆ– "ರಾಮುಚಂದ್ರಾ, ಹೇಳಿಯು ಬಹಳವಾಗಿದೆ. ರವಿಯು ನೆತ್ತಿಯ ಮೇಲೆ ಬಂದಿದ್ದಾನೆ. ನೆಲವು ಕಾದು ಬಿಸಿಯಾಗಿದೆ. ಇದು ವರೆಗೂ ನನಗಾವ ಅರಿವೂ ಇದ್ದಿದ್ದಿಲ್ಲ. ನಾವು ಇಲ್ಲಿ ಕೂಡ್ರಲಾರೆವು! ಇವಳನ್ನೆತ್ತಿಕೊಂಡು ನಾನು ಆಗೋ ಆ ಸಮೀಪದಲ್ಲಿದ್ದ ಮರದ ನೆಳಲಲ್ಲಿ ಕುಳಿತಿರುವೆನು. ನೀನು ಇನ್ನೊಮ್ಮೆ ಹೋಗಿ ದೋತರವನ್ನು ಚೆನ್ನಾಗಿ ತೊಯಿಸಿಕೊಂಡು ಬಾ, ಸಮೀಪದಲ್ಲಿ ಎಲ್ಲಿಯಾದರೂ ದೊಡ್ಡ ಎಲೆಗಳಿದ್ದರೆ ಅವುಗಳಿಂದ ದೊನ್ನೆ ಹಚ್ಚಿಕೊಂಡು ಅದರಲ್ಲಿ ನೀರು ತಕ್ಕೊಂಡು ಬಾ, ಇವಳಿಗೆ ನೀರಡಿಕೆಯಾದೊಡನೆ ನೀರು ಕೊಡಲಿಕ್ಕೆ ಬರುವದು." ಎಂದು ಹೇಳಿದಳು. ರಾಮುಚಂದ್ರನು– "ತಾಯೀ, ಹಾಗೆಯೇ ಮಾಡುವನು" ಎಂದು ಹೊರಡಲನುವಾದನು ಅಷ್ಟರಲ್ಲಿ ಭಾಸ್ಕರರಾಯನ ಸತಿಯಾದ ಸಾವಿತ್ರೀಬಾಯಿಯು– "ಅತ್ತೆಯವರೇ, ನೀರಿನ ಆವಶ್ಯಕತೆಯೇನೂ ಬೀಳಲಾರದು, ನಿಮ್ಮ ಕೈಹಿಡಿದುಕೊಂಡು ನಾನೇ ನಡೆಯುತ್ತ ಗಿಡದ ವರೆಗೆ ಬರುವೆನು. ಆ ಬ್ರಾಹ್ಮಣನಿಗೆ ಸುಮ್ಮನೆ ಏಕೆ ತಾಪ ಕೊಡುವಿರಿ ಮತ್ತೆ" ಎಂದುನುಡಿದು ಅತ್ತೆಯ ಕೈಹಿಡಿದುಕೊಂಡು ಆ ಗಿಡದ ವರೆಗೂ ಮೆಲ್ಲನೆ ನಡೆದಳು; ಆಗ ನೆಳಲಲ್ಲಿ ಎಲ್ಲರೂ ವಿಶ್ರಮಿಸಿದರು. ಆನಂತರ ಯಮುನಾಬಾಯಿಯು ಮನದಲ್ಲಿ– "ಮೊದಲಿನ ಸುಖಕ್ಕೂ ಈಗನುಭವಿಸುತ್ತಲಿರುವ ಸೌಖ್ಯಕ್ಕೂ ಒರೆಹಚ್ಚಿ ನೋಡುತ್ತಿದ್ದಳು. ಅವಳಿಗೆ ದುಃಖದ ಹೊರತಾಗಿ ಏನೂ ತೋಚದಾಯಿತು. ಕೆಲಹೊತ್ತು ನೆಳಲಲ್ಲಿ ವಿಶ್ರಮಿಸಿದ ಬಳಿಕ ಎಲ್ಲರಿಗೂ ತುಸು ಸಮಾಧಾನವೆನಿಸಿತು. ಸಾವಿತ್ರೀಬಾ

ಯಿಯು ಒಂದು ನಿಟ್ಟುಸಿರುಬಿಟ್ಟು ಅತಿಪ್ರಯಾಸದಿಂದ- "ಅತ್ತೆಯವರೇ ನಾವಿನ್ನು ಹೋಗುವದು ಎಲ್ಲಿಗೆ? ಸುರಕ್ಷಿತವಾದ ಸ್ಥಳವಾವುದೂ ನನಗೆ ಈ ಭೂತಲದ ಮೇಲೆ ಕಾಣಲೊಲ್ಲದು! ಆದರೂ ನೀವು ವಿಚಾರ ಮಾಡಿಟ್ಟಿರುವದೇ ನಿಜವು. ಕೇಳಬೇಕೆಂದೆನಿಸಿದ್ದರಿಂದ ನಾನು ಕೇಳಿದೆನು!" ಎಂದು ನುಡಿದಳು ರಾಮಚಂದ್ರನಿನ್ನೂ ದೂರಿದ್ದುದನ್ನು ಕಂಡು ಯಮುನಾಬಾಯಿಯು- "ಮಗಳೇ, ನಾವೀಗ ಹೊರಟಿರುವದು ಮಲಾಪಹಾರಿಣಿಯ ದಂಡೆಯಗುಂಟಲ್ಲವೇ? ಇದಿನ್ನೂ ನಿನಗೆ ಗೊತ್ತಾಗಲಿಲ್ಲವೇನು?" ಎಂದು ಕೇಳಿದಳು.

"ನನಗೆ ಹೇಗೆ ಗೊತ್ತಾಗಬೇಕು? ಮೈತೊಳೆದುಕೊಳ್ಳುವದಕ್ಕೆ ನಾನು ಅನೇಕ ಸಾರೆ ಮಲಾಪಹಾರಿಣಿಗೆ ಹೋಗಿದ್ದರೂ ಈ ರೀತಿಯಿಂದ- ದಾರಿಯನ್ನು ನೆನಪಿಡುತ್ತ- ಹೊರಟದ್ದು ಇದೇ ಮೊದಲು!" ಸಾವಿತ್ರೀಬಾಯಿಯು ಅಂದಳು ಬಳಿಕ ಯಮುನಾಬಾಯಿಯು- "ಇದೇ ಕಡೆಯ ಸಾರೆಯೂ ಆಗುವದು!" ಎನ್ನಲು ಸಾವಿತ್ರೀಬಾಯಿಯು- "ನಾವು ಮಲಾಪಹಾರಿಣಿಯ ದಂಡೆಗುಂಟ ಹೊರಟಿರುವೆವೆಂದ ಮೇಲೆ ಅವಳೇ ನಮಗೆ ಆಶ್ರಯದಾತಳಾಗಲಿ!" ಎಂದು ಅಂದುಕೊಂಡಳು. "ರಾಮಚಂದ್ರಾ, ಇನ್ನು ಹೊರಡಬೇಕಲ್ಲವೇ?" ಎಂದು ಯಮುನಾಬಾಯಿಯು ರಾಮಚಂದ್ರನನ್ನು ಕೇಳಿದಳು. ಅದಕ್ಕೆ ಆತನು- "ಮನಕ್ಕೆ ಸಮಾಧಾನವೆನಿಸಿದ್ದರೆ ಹೊರಡಬಹುದು. ನಾನಂತೂ ಸಿದ್ಧನಿರುವೆನು." ಎಂದೊಡನೆ ಎಲ್ಲರೂ ಮತ್ತೆ ಹಾದಿಯ ನಡೆಯಹತ್ತಿದರು.

ಪತಿಯ ಮೇಲೆ ಸಾವಿತ್ರೀಬಾಯಿಯ ಪ್ರೇಮವು ವಿಶೇಷವಾಗಿತ್ತು. ಹಾಗೆಯೇ ಭಾಸ್ಕರರಾಯನಾದರೂ ಪತ್ನಿಯಲ್ಲಿ ಹೆಚ್ಚಾಗಿ ಪ್ರೀತಿದೋರುತ್ತಿದ್ದನು. ಹೀಗಿದ್ದುದರಿಂದಲೇ ಸಾವಿತ್ರೀಬಾಯಿಯಿಂದ ತನಗೆ ಸಂತತಿಯಾಗದಿದ್ದರೂ ಎರಡನೆಯ ಲಗ್ನಮಾಡಿಕೊಳ್ಳಲು ಆತನು ಮನಸ್ಸು ಮಾಡಲಿಲ್ಲ. ದತ್ತಕ ತೆಗೆದುಕೊಳ್ಳಲು ಅಪ್ಪಣೆಯನ್ನು ದಯಪಾಲಿಸುವದಕ್ಕಾಗಿ ಆತನು ಸರಕಾರಕ್ಕೆ ಬರೆದುಕೊಂಡನು ಆದರೆ ಸರಕಾರವು ಒಪ್ಪಿಗೆಯನ್ನು ಕೊಡಲಿಲ್ಲ ಇದನ್ನು ಕಂಡು- 'ಇನ್ನು ನಾವು ಈ ರೀತಿಯಾಗಿ ಬದುಕುವದರಲ್ಲಿ ಏನೂ ಅರ್ಥವಿಲ್ಲೆಂ'ದು ಭಾವಿಸಿ ಯುದ್ಧದ ಸಿದ್ಧತೆಯನ್ನು ಮಾಡಿ ಬಂಡಾಯ ಹೂಡಿದನು. ಇಷ್ಟಾದರೂ 'ತನ್ನ ಹಾಗು ಪತಿಯ ವಿಯೋಗವಾಗಬಹುದೆಂ'ದು ಸಾವಿತ್ರೀಬಾಯಿಯು ತಿಳಿದಿರಲಿಲ್ಲ. ಆದರೆ ನಿಯಮಿತವಾದ ಅವಧಿಗಿಂತ ಮೊದಲೇ ಯುದ್ಧಕ್ಕಾರಂಭವಾದುದರಿಂದ ಭಾಸ್ಕರರಾಯನ ಮನೆಯವರ ಮೇಲೆ ಇಂಥ ಕಠಿಣಪ್ರಸಂಗವು ಬಂದಿತು. ಹೀಗಾದುದರಿಂದಲೇ ತಮ್ಮ ಬುದ್ಧಿಗೆ ತೋಚಿದ ಮಾರ್ಗವನ್ನವಲಂಬಿಸಿ ಜೀವರಕ್ಷಣಾರ್ಥವಾಗಿ ಅತ್ತೆ ಸೊಸೆಯರು ಒಂದು ಕಡೆಗೆ ಭಾಸ್ಕರರಾಯನು ಮತ್ತೊಂದು ಕಡೆಗೆ ಓಡುತ್ತಿರುವದನ್ನು ಇಲ್ಲಿಯ ವರೆಗೆ ಓದಿದ ವಾಚಕರು ಅರಿಯದಿರರು.

ಆದದರಿಂದಲೇ 'ಯಾವಾಗ ಎಂತಹ ಪ್ರಸಂಗ ಒರುವದೆಂಬುದು ಮನುಷ್ಯನಿಗೆ ತಿಳಿಯುವದಿಲ್ಲವೆಂದು' ದೊಡ್ಡವರು ಹೇಳುವರು. ಇರಲಿ.

ಕೆಳಗೆ ಮೋರೆ ಮಾಡಿಕೊಂಡು ಸಾವಿತ್ರೀಬಾಯಿಯು ಅತ್ತೆಯನ್ನು ಹಿಂಬಾಲಿಸಿ ಹೊರಟಿದ್ದಳು ಹೀಗೆ ಹೊರಟಾಗ ಅವಳು ತನ್ನ ಮನದಲ್ಲಿ-" ದೇವಾ! ನಾವು ಇಲ್ಲಿಯವರೆಗೂ ನಿಯಮದಲ್ಲಿಯಾಗಲಿ ಧರ್ಮದಲ್ಲಿಯಾಗಲಿ ತಪ್ಪು ಮಾಡಿಲ್ಲ! ಆದರೂ ನೀನು ಈಗ ನಮ್ಮ ಮೇಲೆ ಇಂತಹ ಕಠಿಣ ಪ್ರಸಂಗವನ್ನು ತಂದಿರುವೆಯಲ್ಲವೇ? ನೀನಿಟ್ಟ ಸ್ಥಿತಿಯಲ್ಲಿ ನಾವಿರಲಿಕ್ಕೆ ಬೇಕು; ಇದೇನೋ ನಿಜ ಪಾಮದು! ನಾವಂತೂ ಮಲಾಪಹಾರಿಯನ್ನು ಮರೆಹೊಕ್ಕು ಮುಕ್ತರಾಗಲು ಮಾರ್ಗಕ್ರಮಿಸುತ್ತಿರುವೆವು! ಆದರೆ ವೇಂಕಟಪತೇ, ಪ್ರಿಯಪತಿಯ ಅವಸ್ಥೆ ಏನಾಗಿರಬಹುದು? ' ತುಸು ಫಲಾಹಾರವನ್ನಾದರೂ ಮಾಡಿ ಹೋಗು ' ಎಂದು ಅತ್ತೆಯವರು ಹೇಳಿದರೂ ಕೂಡ, ಈಗ ಬಂದೆನು; ಎಂದು ನುಡಿದು ಹೋದವರು ತಿರುಗಿ ಬಂದು 'ನಿಮ್ಮ ದಾರಿಯನ್ನು ನೀವು ಕಂಡುಕೊಳ್ಳಿರಿ ನನ್ನ ಯತ್ನವಂತೂ ಮೀರಿತು. ಜೀವ ರಕ್ಷಣೆಯ ಹಾಗು ಮಾನರಕ್ಷಣೆಯ ಬೇಕಾದ ಉಪಾಯವನ್ನು ಕೈಕೊಳ್ಳಿರಿ' ಎಂದು ಹೇಳಿ ಒತ್ತರದಿಂದ ಹಾಗೆಯೇ ಹೋಗಿ ಬಿಟ್ಟರು. ಅಯ್ಯೋ ಪರಮೇಶ್ವರಾ, ಅವರೀಗ ಕ್ಷುಧಾ ಪೀಡೆಯಿಂದ ಬಳಲುತ್ತಿರಬಹುದಲ್ಲವೇ? ಹಸಿದರೆ ತುತ್ತನ್ನವನ್ನು ಕೂಡ ಹಾಕುವ ಪ್ರೇಮದವರು ಬಳಿಯಲ್ಲಿ ಯಾರೂ ಇಲ್ಲವಲ್ಲ! ಅತ್ತೆಯವರು ಮುಂದೆ ಕೂತರೆ ಮಾತ್ರ ನಾಲ್ಕು ತುತ್ತು ಊಟ ಮಾಡುತ್ತಿದ್ದರು. ಆದರೆ ಇಂದು ಅವರೂ ಹತ್ತಿರವಿಲ್ಲ; ಈ ದಿನವೆಲ್ಲ ಅವರಿಗೆ ಉಪವಾಸವೆಂದು ಕಾಣುವದು ಮನೆಯಿಂದ ದೇವದರ್ಶನಕ್ಕೆ ಹೋಗಬೇಕಾದರೆ ಕುದುರೆಯ ಹತ್ತಿ ಹೋಗುತ್ತಿದ್ದವರು ಇಂದು ಪಾದಚಾರಿಗಳಾಗಿ ಕಲ್ಲುಮುಳ್ಳುಗಳನ್ನು ತುಳಿಯುತ್ತ ಅಡವಿಯಲ್ಲಿ ಕಳ್ಳನ ಹಾಗೆ ಓಡಿಹೋಗುತ್ತಿರಬಹುದಲ್ಲವೇ? ಶ್ರಮದಿಂದ ಸರ್ವಾಂಗದಲ್ಲಿ ಜೋರಾಗಿ ಬೆವರೊಡೆದಿರಬಹುದು. ಅದನ್ನೊರಿಸಲು ಬಳಿಯಲ್ಲಿ ಯಾರೂ ಇರಲಿಕ್ಕಿಲ್ಲವಲ್ಲವೆ? ದುಃಖದ ಮೂರ್ತಿಮತ್ತಾಗಿ ಮುಂದೆ ನಿಂತಿರಬಹುದು! ದೇವಾ! ನಿನ್ನ ಮನೆಯಲ್ಲಿ ಇದೇ ನ್ಯಾಯವೇನು? ಸಾವಿರಾರು ಜನರ ಪಾಲನೆ ಪೋಷಣೆಯನ್ನು ಮಾಡುವ ಸಾಮರ್ಥ್ಯವಿದ್ದ ನನ್ನ ಪತಿಯು ತನ್ನ ಜೀವರಕ್ಷಣೆಗಾಗಿ ಕಲ್ಲುಮುಳ್ಳುಗಳನ್ನು ತುಳಿಯುತ್ತ ಅಡವಡವಿ ಸಂಚರಿಸುವ ವೇಳೆ ಬಂತಲ್ಲವೇ ಇಂದು? ಪಾದಗಳಿಂದ ನೆತ್ತರ ಚಿಮ್ಮುತ್ತಿದ್ದರೂ ವೈರಿಗಳ ಭಯದಿಂದ ಓಡಿಹೋಗಬೇಕಾಗಿ ಬಂದಿರುವದಲ್ಲವೆ? ನೀರಡಿಕೆಯಾದರೆ ನೀರು ಸಹ ದೊರೆತಿರಲಿಕ್ಕಿಲ್ಲವಲ್ಲ! ಎಲ್ಲ ರೀತಿಯಿಂದಲೂ ಪತಿಯು ತಾಪಬಡುತ್ತಿರಬಹುದಲ್ಲ! ಅವರ ಸ್ಥಿತಿಯು ಹೀಗಿರುವಾಗ ನಾನು ನನ್ನ ಮಾನರಕ್ಷಣೆ ಹೇಗಾದೀತೆಂದು ಚಿಂತಿಸುತ್ತಿರುವೆನು. ಆರಕ್ಷಣವಾದರೂ ನಾನು ಬಳಿಯ

ಲ್ಲಿಲ್ಲದಿದ್ದರೆ ಅವರಿಗೆ ಸೊಗಸೆನಿಸುತ್ತಿರಲಿಲ್ಲ; ರಾತ್ರಿ ಅವರ ಹತ್ತರವಿಲ್ಲದಿದ್ದರೆ ನಿದ್ರೆ ಬರುತ್ತಿದ್ದಿಲ್ಲ. ಮೈಮೇಲಿದ್ದ ಕೈಯು ತುಸು ಅಲುಗಾಡಿದರೆ ಸಾಕು ಎಚ್ಚರಾಗುತ್ತಿದ್ದರು. ಹೀಗೆ ಒಂದಲ್ಲ, ಎರಡಲ್ಲ, ಹೇಳಹತ್ತಿದರೆ ಬೆಳತನಕ ಮುಗಿಯುವ ಹಾಗಿಲ್ಲ! ಓಡಿ ಓಡಿ ಕಾಲುಗಳು ನೋವಾಗಿ ಹೊಡಿಸಹತ್ತಿದ್ದರೆ, ಕಾಲ ಮೇಲೆ ಕೈಯಾಡಿಸುವವರು ಕೂಡ ಯಾರೂ ಇರಲಿಕ್ಕಿಲ್ಲ! ಒತ್ತುವದಂತೂ ದೂರೇ ಉಳಿಯಿತು! ಏನು ಮಾಡಲಿ? ಇಮವರೆಗೂ ನನ್ನ ಕೈಲಾದಷ್ಟು ಅವರಿಗೆ ಸುಖಕೊಟ್ಟೆ! ಆದರೆ ನಾನು ಈಗ ಅವರ ಬಳಿಯಲ್ಲಿಯೇ ಇದ್ದುದಾಗಿದ್ದರೆ ದುಃಖಕ್ಕೆ ಮಾತ್ರ ಕಾರಣವಾಗುತ್ತಿದ್ದೆನು; ಒಳ್ಳೆಯದು ಈ ಸ್ಥಿತಿಯಲ್ಲಿಯೇ ಆಗಲೊಲ್ಲದೇಕೆ, ನನ್ನ ಪ್ರಾಣಕಾಂತನನ್ನು ಕಾಣುವ ಶಕ್ಯತೆಯಾವರೂ ಇರುವದೇನು? ಅದೂ ಇಲ್ಲ! ಅಂದ ಮೇಲೆ ವ್ಯರ್ಥವಾಗಿ ನೆನೆಸಿಕೊಂಡು ದುಃಖಪಡುವದರಿಂದೇನಾಗುವಂತಿದೆ? ಪುಣ್ಯ ನದಿಯಾದ ಮಲಾಪಹಾರಿಣಿಯಲ್ಲಿಯೇ ಹಾರಿಕೊಂಡು ಪ್ರಾಣ ಬಿಡಬೇಕೆಂದು ಮಾಡಿರುವೆನು! ಇನ್ನು ಬದುಕಿದ್ದು ಫಲವೇನು? ಹೇಗೂ ಅತ್ತೆಯವರು ಮಲಾಪಹಾರಿಣಿಯ ಕಡೆಗೇ ಸಾಗಿರುವರು. ಇದೂ ಒಂದು ರೀತಿಯಿಂದ ನೆಟ್ಟಗೇ ಆಯಿತು. ಒಮ್ಮೆಲೆ ಈ ಭವಪಾಶದಿಂದ ಮುಕ್ತಳಾಗಲು ಮಲಾಪಹಾರಿಣಿಯಲ್ಲಿ ಆಶ್ರಯ ಹೊಂದುವದೇ ಒಂದು ಮಾರ್ಗ! ಇದೇ ನಿಶ್ಚಯ" ಹೀಗೆ ನಾನಾ ಬಗೆಯಿಂದ ಮಿಡುಕಹತ್ತಿದ್ದಳು. ಕಣ್ಣೀರುಗಳು ಹಾಗೆಯೆ ಉದಿರುತ್ತಲಿದ್ದವು. ಆಗ ಸುಮಾರು ಮಧ್ಯಾಹ್ನದ ಮೂರುಗಂಟೆಯಾಗಿರಬಹುದು. ಬಿಸಿಲಿನ ತಾಪವು ಮೆಲ್ಲನೆ ಕಡಿಮೆಯಾಗತೊಡಗಿತ್ತು. ಇನ್ನೂ ಆ ಮೂವರು ಮಾರ್ಗಕ್ರಮಣ ಮಾಡುತ್ತಲೇ ಇದ್ದರು ಎಲ್ಲರಿಗೂ ದಣುವಾಗಿತ್ತು. ರಾಮಚಂದ್ರನು ತುಸು ವಿಶ್ರಮಿಸಬೇಕೆಂದು ಬಯಸಿ ಯಮುನಾಬಾಯಿಯನ್ನು ಕುರಿತು– "ಅವ್ವನವರೇ, ಊರು ಬಿಟ್ಟು ಬಹುದೂರ ಬಂದಿರುವೆವು. ವೈರಿಗಳು ಇಲ್ಲಿಯ ವರೆಗೆ ಬಂದು ಬಂಧಿಸಿಕೊಂಡು ಹೋಗಬಹುದೆಂಬ ಭಯವಿನ್ನು ಇಲ್ಲ! ಈ ಗಿಡದ ಗುಂಪನ್ನು ದಾಟಿದೊಡನೆ ಮುಂದೆ ಕಾಣುವದೇ ಮಲಾಪಹಾರಿಣೀ ನದಿಯು. ನದಿಯ ಬಳಿಯಲ್ಲಿ ವಿಶ್ರಮಿಸಿಕೊಳ್ಳಲು ತುಸುವಾದರೂ ನೆರಳಿಲ್ಲ. ಕಾರಣ ಇಲ್ಲಿಯೇ ಈ ಮಾವಿನ ತೋಪಿನಲ್ಲಿ ತುಸು ವಿಶ್ರಾಂತಿ ತಕ್ಕೊಳ್ಳೋಣ. ದಟ್ಟಾದ ನೆರಳಿದೆ, ಕ್ಷುಧಾಶಮನ ಮಾಡಿಕೊಳ್ಳಲು ಪಾಡಾದ ಹಣ್ಣುಗಳಿವೆ. ಪಕ್ವ ಫಲಗಳು ಗಾಳಿಯ ಹೊಡತಕ್ಕೆ ಹೇಗೆ ಉದುರಿ ಬೀಳುತ್ತಿವೆ ನೋಡಿರಿ! ನೀವು ಮುಂಜಾವಿನಿಂದ ಬಾಯಲ್ಲಿ ಏನೂ ಹಾಕಿಕೊಂಡಿಲ್ಲ. ಕ್ಷುಧಾಪೀಡೆಯು ಹೆಚ್ಚಾಗಿರಬಹುದು ನಾನು ಹಣ್ಣುಗಳನ್ನು ಆಯ್ದು ತರುವೆನು. ಸಾಲ್ಕಾರು ಉತ್ತಮ ಫಲಗಳನ್ನು ತಿಂದು ಹಸಿವೆಯನ್ನು ಹೋಗಲಾಡಿಸಿಕೊಳ್ಳಿರಿ. ಹಣ್ಣು ತಕ್ಕೊಂಡು ಬರುವವರೆಗೆ ನೆಳಲಲ್ಲಿ ವಿಶ್ರಮಿಸಿಕೊಳ್ಳಿರಿ. ಅಂದರೆ

ಮತ್ತೆ ದಾರಿಯ ನಡೆಯಲು ತ್ರಾಣ ಬಂದೀತು. ನನಗಂತೂ ಹೀಗೆನಿಸುತ್ತದೆ. ಇದರ ಮೇಲೆ ನಿಮ್ಮ ಇಷ್ಟ!" ಎಂದು ಮಾತನಾಡಿದನು.

ಆತನ ಮನಸ್ಸನ್ನು ತಿಳಿದು– "ರಾಮಚಂದ್ರಾ ವೇಳೆಯು ಬಹಳವಾಗಿದೆ. ನೀನು ಹಸಿವೆಯಿಂದ ಬಳಲುತ್ತಿರಬಹುದು. ಆದದರಿಂದ ಹೋಗು ಪಕ್ವ ಫಲಗಳನ್ನು ತಿಂದು ವಿಶ್ರಮಿಸಿಕೊಳ್ಳು. ನಮ್ಮ ಕಾಲುಗಳು ನೋಯ ಹತ್ತಿರುವವು. ನಾವೂ ವಿಶ್ರಮಿಸಿಕೊಳ್ಳುವೆವು" ಎಂದು ಯಮುನಾಬಾಯಿಯು ಮಾತನಾಡಿದಳು; ಅತ್ತೆ ಸೊಸೆಯರಿರ್ವರೂ ದಾರಿಯಿಂದ ತುಸು ದೂರಿರುವ ವಿಶಾಲವಾದ ಮಾಮರದ ನೆಳಲಲ್ಲಿ ಕುಳಿತುಕೊಂಡರು. ರಾಮಚಂದ್ರನು ಹಣ್ಣುಗಳನ್ನು ತರುವದಕ್ಕೆ ಹೋದನು. ಆತನು ತುಸು ದೂರ ಹೋದ ಬಳಿಕ ಅವರು ಮಾತನಾಡಲಾರಂಭಿಸಿದರು.

ಸಾವಿತ್ರೀಬಾಯಿ:– ಮನೆಯವರು ಇಂಗ್ಲಿಷ ಅಧಿಕಾರಿಯನ್ನು ಅನೇಕ ಪ್ರಕಾರವಾಗಿ ತಾಪ ಬಡಿಸಿ ಕೊಂದ ಸುದ್ದಿಯು ತಿಳಿದೊಡನೆ ಇಂಗ್ಲಿಷ ಜನರೆಲ್ಲ ಸಿಟ್ಟಿನಿಂದ ಹುಚ್ಚರಾಗಿದ್ದಾರೆ. ಹೊಡತ ತಿಂದು ತಪ್ಪಿಸಿಕೊಂಡು ಓಡಿ ಹೋದ ಹಾವು ಹೇಗೆ ತನ್ನನ್ನು ತಾಪ ಪಡಿಸಿದವನ ಮೇಲೆ ಕುನಸಿಟ್ಟು ಅವನನ್ನು ಕಚ್ಚಿ ಕೊಲ್ಲುವ ಸಂಧಿಯನ್ನು ಸಾಧಿಸುತ್ತ ಹೊಂಚು ಹಾಕಿಕೊಂಡು ಕುಳಿತುಕೊಳ್ಳುವದೋ, ಹಾಗೆಯೇ ಈ ವೈರಿಗಳು ನಮ್ಮನ್ನೆಲ್ಲ ಕೊಲ್ಲುವದಕ್ಕೆ ಕಾದುಕೊಂಡಿದ್ದಾರೆ. ಅವರ ಕೈಯಲ್ಲಿ ನಮ್ಮ ಗಂಡಸರು ಸಿಕ್ಕರೆ ಅವರನ್ನು ತೋಫಿನ ಬಾಯಿಗೆ ಕೊಟ್ಟಾಗಲಿ ಶಸ್ತ್ರದಿಂದಾಗಲಿ ಸಂಹರಿಸುವರು. ಅವರಿಗಾಗುವ ಬಾಧೆಯು ಇದಿಷ್ಟೇ. ಆದರೆ ನಮ್ಮಂಥ ಸ್ತ್ರೀಯರು ಅವರ ಕೈಯಲ್ಲಿ ಸಿಕ್ಕರೆ ತೀರಿತು, ನಾನಾ ಪ್ರಕಾರದ ಅಪಮಾನ ಹೊಂದಿದೆವೆಂದೇ ತಿಳಿಯಬೇಕು. ಸಂಪೂರ್ಣ ಅಪಮಾನವಾದ ಬಳಿಕ ಪುರುಷರಂತೆ ನಮಗೂ ಸಾವು ಕಟ್ಟಿಟ್ಟದ್ದೇ! ಅದಕ್ಕಾಗಿ ದೇವರು ನಮ್ಮನ್ನು ಜೀವದಿಂದಿಟ್ಟು ಅವರ ಕೈಯಲ್ಲಿ ಕೊಡಬಾರದು!"

ಯಮುನಾಬಾಯಿ: — ಮಗಳೇ, ನೀನಂದ ಮಾತು ನಿಜವಾದದ್ದು! ಸಜೀವವಾಗಿ ನಾವು ಅವರ ಕೈಸೆರೆಯಾದರೆ ಅವರು ನಮ್ಮನ್ನು ಯಾವ ಯಾವ ರೀತಿಯಲ್ಲಿ ಎಷ್ಟು ವಿಡಂಬನ ಮಾಡುವರೋ ಅದು ಕಲ್ಪನೆಗೆ ನಿಲುಕದ ಮಾತು. ಆದದರಿಂದಲೇ ನಾನು ನದಿಯ ವರೆಗೂ ಬಂದದ್ದು. ನಿನಗೆ ನಾನೊಂದು ಮಾತನ್ನು ಕೇಳಬೇಕೆಂದು ಮಾಡಿದ್ದೇನೆ. ಅದು ನಿನ್ನ ಮನಕ್ಕೆ ಬಂದುದೇ ಆದರೆ, ವೈರಿಗಳ ಬೆದರಿಕೆಯೇ ತಪ್ಪಿದಂತಾಗುವದು. ಅದರಷ್ಟು ಸುಲಭವಾದ ಮಾರ್ಗವು ಬೇರೊಂದಿಲ್ಲ!

ಅಷ್ಟರಲ್ಲಿ ರಾಮಚಂದ್ರನು ಹಣ್ಣುಗಳನ್ನಾರಿಸಿಕೊಂಡು ಬಂದು ಅವರೀರ್ವರಿಗೂ ತಿನ್ನಲು ಆಗ್ರಹ ಮಾಡಹತ್ತಿದನು. ಆಗ ಅವರು– "ರಾಮಚಂದ್ರಾ

ಶೋಕ ಹಾಗೂ ದುಃಖಗಳಿಂದ ನಮ್ಮ ಹೊಟ್ಟೆಯು ತುಂಬಿ ಹೋಗಿದೆ! ಹೆಚ್ಚಾಗಿ ಆಗ್ರಹ ಮಾಡಬೇಡ! ಕತ್ತಲಾಗುವವರೊಳಗೆ ಯಾವದಾದರೊಂದು ಸುರಕ್ಷಿತ ವಾದ ಸ್ಥಳವನ್ನು ಸೇರುವಾ, ಬಳಿಕ ವೇಳೆಗೆ ತಕ್ಕಂತೆ ವರ್ತಿಸುವಾ! ತಂದ ಹಣ್ಣುಗಳನ್ನು ತಿಂದು ತುಸು ವಿಶ್ರಾಂತಿಯನ್ನು ಹೊಂದು; ಹೊರಡುವ ವೇಳೆ ಯಾದೊಡನೆ ನಿನ್ನನ್ನು ಎಬ್ಬಿಸುವೆವು. ತಿಳಿಯಿತೇ?" ಎಂದರು. ರಾಮಚಂದ್ರನಿಗೂ ಅಷ್ಟೇ ಸಾಕಾಯಿತು, ಪ್ರಕೃಷ್ಟವಾದ ನೆಳಲಲ್ಲಿ ದೋತರವನ್ನು ಹಾಸಿ ಅಡ್ಡಾದನು ಹೀಗೆ ಅಡ್ಡಾಗುವದೊಂದೇ ತಡ, ಆತನಿಗೆ ಗಾಢವಾದ ನಿದ್ರೆ ಹತ್ತಿತು. ಇಷ್ಟಾದ ಮೇಲೆ ಅವರಿಗೆ ಮನಬಿಚ್ಚಿ ಮಾತನಾಡಲು ಅನುಕೂಲವಾಯಿತು. ಸಾವಿತ್ರೀಬಾಯಿಯು ಯಮುನಾಬಾಯಿಯನ್ನು ಕುರಿತು-

ಅತ್ತೆಯವರೇ ಸುಲಭವಾದ ಮಾರ್ಗವದಾವದು? ಹೇಳಿರಿ ನೋಡೋಣ? ಈ ರಾಮಚಂದ್ರನನ್ನು ನೋಡಿರಿ! ಹೇಗೆ ಗುರಗುಟ್ಟುತ್ತ ಮಲಗಿದ್ದಾನೆ. ಇಂಥ ಸಮಯದಲ್ಲಿ ಇವನಿಗೆ ನಿದ್ರೆಯಾದರೂ ಹೇಗೆ ಹತ್ತಿರಬಹುದು? ಎಂದಳು.

ಯಮುನಾಬಾಯಿಃ- ಮಗಳೇ, ನಿಶ್ಚಿಂತೆಯ ಲಕ್ಷಣವಿದು! ಕೆಟ್ಟ ಪ್ರಸಂಗವುಂಟಾದುದು ನಮಗೇ ಹೊರತು ಅವನಿಗಲ್ಲ! ಆತನಿಗೂ ಚಿಂತೆಯುಂಟಾಗಿದ್ದರೆ ಹೀಗೆ ನಿದ್ರೆಯು ಅವನನ್ನು ಆವರಿಸುತ್ತಿರಲಿಲ್ಲ! ಇದೂ ನಮಗೆ ಅನುಕೂಲವೆಂದೇ ಹೇಳಬೇಕಾಗಿದೆ. ಇನ್ನು ಮೇಲೆ ಆತನು ನಮ್ಮೊಡನಿದ್ದರೆ ನಮ್ಮ ಮುಂದಿನ ಕಾರ್ಯಕ್ಕೆ ಆತನಿಂದ ಆತಂಕವುಂಟಾದೀತು. ನಾನಂತೂ ನದಿಯಲ್ಲಿ ಹಾರಿಕೊಂಡು ಪ್ರಾಣಬಿಡಬೇಕೆಂದು ನಿಶ್ಚಯ ಮಾಡಿದ್ದೇನೆ. ನನ್ನ ಈ ವಿಚಾರವು ನಿನಗೂ ಯೋಗ್ಯವೆಂದು ತೋರಿದರೆ 'ನಮ್ಮ ಅಪಮಾನವಾಗಬಹುದೇನೋ' ಎಂಬ ಅಂಜಿಕೆಯೇ ದೂರವಾದಂತಾಗುವದು. ನಿನಗೆ ಇದು ಒಪ್ಪಿಗೆಯಾದಲ್ಲಿ ಮುಂದಿನ ನನ್ನ ವಿಚಾರಗಳನ್ನು ನಿನಗೆ ಅರುಹುವೆನು.

ಸಾವಿತ್ರೀಬಾಯಿಃ- ನನ್ನ ವಿಚಾರಕ್ಕೆ ನಿನ್ನ ಒಪ್ಪಿಗೆಯುಂಟೇನೆಂದು ಹೀಗೇಕೆ ಕೇಳುವಿರಿ? ಇಬ್ಬರಿಗೂ ಸಮ್ಮತವಾದ ಮಾರ್ಗವನ್ನನುಸರಿಸಿರಿ ಎಂದು ಅವರು ನನಗೆ ಆಜ್ಞೆಯಿತ್ತಿರುವರಲ್ಲವೇ? ಅದಿರಲಿ, ನಾನು ಇದು ವರೆಗೂ ಎಂದಾದರೂ ತಮ್ಮ ಮಾತನ್ನು ಅಲ್ಲಗಳೆದಿರುವೆನೇನು? ನಿಮ್ಮ ಆಜ್ಞೆಯು ನನಗ ಶಿರಸಾಮಾನ್ಯವಿದೆ. ನನ್ನ ತಾಯಿಯೆಂದರೂ ನೀವೇ ಅತ್ತೆಯೆಂದರೂ ನೀವೇ ಎಂದು ಇದು ವರೆಗೂ ನಿಮ್ಮೊಡನೆ ನಡೆದುಕೊಂಡಿಲ್ಲವೆಂದು ನಿಮಗೆ ಎಂದಾದರೂ ಅನಿಸಿದ್ದರೆ ಮಾತ್ರ ಈ ಕೊನೆಯ ಪ್ರಸಂಗದಲ್ಲಿ ನನ್ನ ವಿಷಯಕ್ಕೆ ಸಂಶಯವನ್ನು ಕಲ್ಪಿಸಿಕೊಳ್ಳಿರಿ. ಹಾಗಲ್ಲದಿದ್ದರೆ ನಿಮ್ಮ ಮನದಲ್ಲಿಯ ಮಾತನ್ನು ಸ್ಪಷ್ಟ ಪಡಿಸಿರಿ. ಅನುಸರಿಸಲು ಸಿದ್ಧಳಿರುವೆನು ತಮ್ಮ ಆಜ್ಞೆಯೇನಿರುವದು?

ಯಮುನಾಬಾಯಿಃ- (ಆನಂದದಿಂದ) ಇದ್ದರೆ ನಿನ್ನಂಥ ಸೊಸೆಯಿರಬೇಕು!

ನೀನೇ ಧನ್ಯಳು! ನೀನಂಥವಳಲ್ಲವೆಂಬುದು ನನಗೆ ಚನ್ನಾಗಿ ಗೊತ್ತಿದ್ದರೂ, ಸನ್ಯವ ಪ್ರಸಂಗವಲ್ಲಿ ಜೀವಿಗಳಿಗೆಲ್ಲ ಅತಿ ಪ್ರಿಯವಾದ ಜೀವನದ ಮೇಲೆಯೇ ನೀರೆರೆಯ ಬೇಕಾದುದರಿಂದ, ಬೇಕೆಂದೇ ಸಂಶಯ ತಕ್ಕೊಂಡು ನಿನ್ನನ್ನು ಹೀಗೆ ವಿಚಾರಿಸಿ ದೆನು. ನನ್ನ ಹೇಳಿಕೆಯಂತೆ ನಡೆಯುವದಾದರೆ, ನಿನ್ನ ಮೇಲಿನ ಎಲ್ಲ ಅಲಂಕಾ ರಗಳನ್ನು ತೆಗೆದು ಮೊದಲು ಈ ಬ್ರಾಹ್ಮಣನ ಸ್ವಾಧೀನ ಪಡಿಸು. ಪ್ರಾಣಹೋದ ಮೇಲೆ ಈ ಅಲಂಕಾರಗಳಿಂದೇನು ಪ್ರಯೋಜನವು? ಶವ ಸಂಸ್ಕಾರವನ್ನು ಮಾಡ ಲುಬಂದ ಜನರು ಈ ಎಲ್ಲ ಆಭರಣಗಳನ್ನು ಕಂಡು, ಸಂಶಯಗೊಂಡು ದಹನ ಮಾಡದೆ ಹಾಗೆಯೇ ತಿರುಗಿ ಹೋಗಬಹುದು. ಹೀಗಾಗಬಾರದು. ನೋಡುವ ವರು ಇವರಾರೋ ದರಿದ್ರ ಮನೆತನದ ಹೆಣ್ಣುಮಕ್ಕಳಿರಬಹುದೆಂದು ತಿಳಿಯುವಂ ತಿರಬೇಕು. ಗುಪ್ತವಾಗಿ ಪ್ರೇತದ ವ್ಯವಸ್ಥೆಯಾಗಬೇಕೆಂದು ನಿನ್ನ ಮನಸ್ಸಿನಲ್ಲಿ ದ್ದರೆ ಮೈಮೇಲೆ ಆಭರಣಗಳೇ ಬೇಡ. ಅಲ್ಲದೆ ಪಾಪ! ರಾಮಚಂದ್ರನು ತೀರ ಬಡಬ್ರಾಹ್ಮಣನು. ಇದು ವರೆಗೂ ಪ್ರೇಮದಿಂದಲೂ ಆಶೆಯಿಂದಲೂ ನಮ್ಮ ಸೇವೆಯನ್ನು ಮಾಡಿದವನು. ಈ ಸಮಯದಲ್ಲಿಯೂ ನಮ್ಮ ಬೆನ್ನು ಹತ್ತಿ ಬಂದಿ ರುವನು. ಈ ಎಲ್ಲ ಆಭರಣಗಳನ್ನು ಅವನಿಗೆ ಕೊಟ್ಟರೆ ಆತನ ದಾರಿದ್ರ್ಯವು ಸಹಜವಾಗಿ ದೂರವಾಗುವದು. ವಂಶಪರಂಪರೆಯಾಗಿ ನಮ್ಮನ್ನು ನೆನೆಸುತ್ತ ಸುಖವಾಗಿ ಊಟ ಮಾಡುವನು. ಇದು ನಿನ್ನ ಮನಕ್ಕೆ ಬರುವದೇ?

ಸಾವಿತ್ರೀಬಾಯಿ:-- ಅತ್ತೆಯವರೇ, ಮತ್ತೆ ಹೀಗೇಕೆ ಕೇಳುವಿರಿ? ನೀವು ಬೇಕಾದ ಹಾಗೆ ನನಗೆ ಅಪ್ಪಣೆ ಮಾಡಿರಿ. ಅದರಂತೆ ನಡೆಯಲು ಸಿದ್ಧಳಿರು ವೆನು. (ಹೀಗೆ ಮಾತಾಡುತ್ತಿರುವಾಗಲೇ ಅವಳು ಮಂಗಲಸೂತ್ರದ ಹೊರತಾಗಿ ಮೈಮೇಲಿನ ಉಳಿದ ಎಲ್ಲ ಆಭರಣಗಳನ್ನು ತೆಗೆದು ಅತ್ತೆಯ ಮುಂದಿಟ್ಟು) ಅತ್ತೆ ಯವರೇ, ಈ ಎಲ್ಲ ಆಭರಣಗಳನ್ನು ತೆಗೆದುಕೊಳ್ಳಿರಿ. ನಿಮ್ಮ ಮನಕ್ಕೆ ಬಂದಂತೆ ಇವುಗಳ ವ್ಯವಸ್ಥೆಯನ್ನು ಮಾಡುವದಕ್ಕೆ ತಾವು ಸಮರ್ಥರಿರುವಿರಿ. ನನ್ನದೇನೂ ಆತಂಕವಿಲ್ಲ. ಎಲ್ಲ ಒಡವೆಗಳನ್ನು ತಮ್ಮೆದುರಿಗೆ ಇಟ್ಟಿರುವೆನು.

ಸೊಸೆಯು ತನ್ನ ಆಭರಣಗಳನ್ನೆಲ್ಲ ಬಿಚ್ಚಿ ತನ್ನೆದುರಿನಲ್ಲಿಟ್ಟುದನ್ನು ಕಂಡು ಯಮುನಾಬಾಯಿಗೆ ಅತಿಶಯವಾದ ಆನಂದವಾಯಿತು. ಬಳಿಕ ಅವಳು ಮಲ ಗಿದ ರಾಮಚಂದ್ರನನ್ನೆಬ್ಬಿಸಿ- “ ರಾಮಚಂದ್ರಾ ಪೂರ್ಣವಾಗಿ ಎಚ್ಚತ್ತಿರು ವೆಯಾ? ಕಣ್ಣುಗಳನ್ನು ಒರೆಸಿಕೊಳ್ಳು. ಲಕ್ಷ್ಯಗೊಟ್ಟು ನಾನು ಹೇಳುವದನ್ನೆಲ್ಲ ಕೇಳು ” ಎಂದು ನುಡಿದಳು. ಅದನ್ನು ಕೇಳಿ ರಾಮಚಂದ್ರನು– ‘ ತಾಯಿಯ ವರೇ, ಪೂರ್ಣವಾಗಿ ಎಚ್ಚತ್ತಿರುವೆನು, ಬೇಕಾದ ಆಜ್ಞೆಯನ್ನು ಮಾಡಿರಿ. ಪಾಲಿ ಸಲು ಸಿದ್ಧನಿರುವೆನು” ಎಂದೊಡನೆಯೇ ಯಮುನಾಬಾಯಿಯು ಸೊಸೆಯ ಎಲ್ಲ ತೊಡವುಗಳನ್ನು ಅವನಿಗೆ ಕೊಟ್ಟು– “ ರಾಮಚಂದ್ರಾ, ಇವೆಲ್ಲವುಗಳನ್ನು ಸ್ವೀಕ

ರಿಸು. ಇನ್ನು ಸುಖವಾಗಿ ನಿನ್ನ ಮನೆಗೆ ಹೋಗು. ಬಂಡಾಯವು ಪೂರ್ಣವಾಗಿ ಶಾಂತವಾಗುವವರೆಗೆ ನಾವು ಬಡವರ ವೇಷದಲ್ಲಿ ಗುಪ್ತವಾಗಿರಬೇಕಾಗಿದೆ, ಆದದರಿಂದ ನಮಗೀಗ ಈ ಒಡವೆಗಳ ಉಪಯೋಗವಿಲ್ಲ. ಎಲ್ಲ ಕಡೆಗೂ ಶಾಂತತೆಯಾದೊಡನೆ ನಾವು ಮತ್ತೆ ನಿನ್ನ ಮನೆಗೆ ಇರಲಿಕ್ಕೆ ಬರುವೆವು. ಆದರೂ ನೀನು ಏನೂ ಸಂಶಯ ತಕ್ಕೊಳ್ಳದೆ ಈ ಒಡವೆಗಳನ್ನೆಲ್ಲ ತೆಗೆದುಕೊಂಡು ನಿನ್ನ ಮನಕ್ಕೆ ಯೋಗ್ಯ ಕಂಡಮೇರೆಗೆ ಉಪಯೋಗಿಸು. ಹಣದ ಅಡಚಣಿಯಾದಾಗ ಇವುಗಳನ್ನು ಮುರಿಸಿ ನಿನ್ನ ಸಂಸಾರ ಸಾಗಿಸಿಕೊಳ್ಳು. ಇನ್ನು ಮುಂದೆ ನಮ್ಮೊಡನೆ ನೀನು ಬರುವದರಿಂದ ನಿನಗೆ ಸುಖವಾಗಲಾರದು. ಆದದರಿಂದ ಹೋಗು; ಸುಖವಾಗಿ ಸಂಸಾರ ಮಾಡು. ಹು, ಹೊರಡಿನ್ನು! ದೇವರು ನಿನಗೆ ಕ್ಷೇಮವನ್ನುಂಟು ಮಾಡಲಿ!' ಎಂದು ಹೇಳಿದಳು.

ಯಮುನಾಬಾಯಿಯ ಹೇಳಿಕೆಯಂತೆ ರಾಮಚಂದ್ರನು ಒಡವೆಗಳನ್ನು ಸ್ವೀಕರಿಸಿ ಹೊರಡಲು ಸಿದ್ಧನಾದನು. ಆತನು ಅರೆಹುಚ್ಚನಂತಿದ್ದದರಿಂದ ಇನ್ನು ಈ ಹೆಂಗಸರು ಪ್ರಾಣಕೊಡುವರೆಂಬುದು ಸಹ ಅವನಿಗೆ ತಿಳಿಯಲಿಲ್ಲ. ಒಮ್ಮೆಲೆ ೧೦-೨೦ ಸಾವಿರ ರೂಪಾಯಿಗಳ ಬೆಲೆಯುಳ್ಳ ಒಡವೆಗಳು ತನ್ನ ಉಪಯೋಗಕ್ಕಾಗಿ ದೊರೆತದ್ದರಿಂದ ಆತನಿಗೆ ವಿಶೇಷ ಆನಂದವಾಗಿತ್ತು. ಆದರೂ ಆತನು- "ಅಮ್ಮನವರೇ, ನೀವು ನನ್ನೊಡನೆ ಈಗಲೆ ನನ್ನ ಮನೆಗೆ ಬಂದಿದ್ದರೂ ಏನೂ ಅಡ್ಡಿಯಿದ್ದಿಲ್ಲ. ಆ ಹಳ್ಳಿಯಲ್ಲಿ ನಿಮ್ಮ ವಿಷಯವಾಗಿ ಯಾರೂ ಏನೂ ಸಂಶಯ ತಕ್ಕೊಳ್ಳುತ್ತಿರಲಿಲ್ಲ!" ಎನ್ನಲು ಯಮುನಾಬಾಯಿಯು- ನಿನಗೆ ಹಾಗೆ ಅನಿಸುತ್ತದೆ. ನಮ್ಮ ಮೇಲೆ ನೂರಾರು ಆಪತ್ತುಗಳಿವೆ. ಅವೆಲ್ಲವುಗಳು ತಾವೇ ಪರಿಹಾರವಾಗುವವರೆಗೆ ನಾವು ಗುಪ್ತವಾಗಿರಬೇಕಾಗಿದೆ; ಆದದರಿಂದ ವಿಶೇಷ ಆಗ್ರಹ ಮಾಡದೆ ಹೊರಟು ಹೋಗು; ಮತ್ತು ಯಾರಾದರೂ ಕೇಳಿದರೆ 'ನರಗುಂದದಲ್ಲಿ ಬಂಡಾಯವು ಆರಂಭವಾದೊಡನೆ ಜೀವವುಳಿಸಿಕೊಂಡು ಓಡಿ ಬಂದೆನೆಂದು' ಹೇಳು. ನಮ್ಮ ವಿಷಯವನ್ನು ಏನೂ ತಿಳಿಸಬೇಡ; ನಾವು ಎತ್ತ ಹೋದೆವೆಂಬುದನ್ನೂ ಹೇಳಬೇಡ. ಹೋಗು ಸಂಸಾರದಲ್ಲಿ ಸುಖಿಯಾಗಿರು" ಎಂದು ಹೇಳಿದಳು.

ರಾಮಚಂದ್ರನು ಒಡವೆಗಳನ್ನೆಲ್ಲ ಕಟ್ಟಿಕೊಂಡು ಇಬ್ಬರಿಗೂ ನಮಿಸಿ ಹೊರಡಲು ಸಿದ್ಧನಾದನು. ಆಗ ಆತನ ಕಂಠವು ಬಿಗಿದು ಬಂದು, ಕಣ್ಣೀರುಗಳನ್ನುದಿರಿಸುತ್ತ ಆತನು- 'ಅವ್ವನವರೇ, ನಿಮ್ಮ ಸೇವೆಯಲ್ಲಿದ್ದುಕೊಂಡು ಪಡುವಷ್ಟು ಸುಖವು ಮನೆಯಲ್ಲಿ ಸಿಗುವದೆಂದು ಭಾವಿಸಬೇಡಿರಿ; ಆದರೂ ಸಂಕಟಗಳಿಂದ ನೀವು ಮುಕ್ತರಾಗುವವರೆಗೆ ಹೋಗೆಂದು ಆಜ್ಞಾಪಿಸಿದುದರಿಂದ ನಿರ್ವಾಹವಿಲ್ಲದೆ ಹೋಗುವೆನು; ಪ್ರಕೃತಿಯ ವಿಷಯದಲ್ಲಿ ಜಪ್ಪಿಸಿರಬೇಕೆಂದು ಹೇಳುವ

ಆವಶ್ಯಕತೆಯಿಲ್ಲದಿದ್ದರೂ ಸಮಯಕ್ಕೆ ನೆನಪಾದುದರಿಂದ ಅಡಿಗಳ ಬಳಿಯಲ್ಲಿ ಅರಿಕೆಮಾಡಿಕೊಂಡಿದ್ದೇನೆ. ಪೀಡೆಗಳೆಲ್ಲ ಪರಿಹಾರವಾದೊಡನೆ ಯಾವ ತರದ ಸಂಕೋಚವನ್ನೂ ಮನಕ್ಕೆ ತಾರದೆ ಬಂದೇ ಬಿಡಬೇಕೆಂದು ವಿಜ್ಞಪ್ತಿ ಮಾಡಿಕೊಳ್ಳುವೆನು, ಬರುವೆನಿನ್ನು ಹಾಗಾದರೆ!" ಎಂದು ನುಡಿದು ಅವರು ತಲೆಯಲ್ಲಾಡಿಸಿ ದುದನ್ನು ಕಂಡು ಸಮ್ಮತಿಯನ್ನಿತ್ತರೆಂದು ಭಾವಿಸಿ ಮತ್ತೊಮ್ಮೆ ನಮಸ್ಕರಿಸಿ ಹೊರಟು ಹೋದನು.

ಬಳಿಕ ಯಮುನಾಬಾಯಿಯು ಸೊಸೆಯನ್ನು ಕುರಿತು-" ಮಗಳೇ, ಮಲಾಪಹಾರಿಣಿಯೇ ನಮಗಿನ್ನು ಅಕ್ಷಯ ಸುಖದಾತೆಯಲ್ಲವೇ? ಏಳಿನ್ನು ಅವಳನ್ನು ಆಶ್ರಯಿಸುವಾ! ಈ ರಾಮಚಂದ್ರನೊಬ್ಬನು ನಮ್ಮ ಈ ಸುಖಕ್ಕೆ ಅಡ್ಡಿಯಾಗಿದ್ದನು; ವಿಶೇಷ ಪ್ರಯಾಸವಿಲ್ಲದೆ ಪೀಡೆಯು ದೂರವಾಯಿತು. ಬಿಚ್ಚದಂತೆ ಸೀರೆಯನ್ನು ಗಟ್ಟಿಯಾಗಿ ಬಿಗಿದುಕೋ, ಈಶ ಸ್ಮರಣೆಯನ್ನು ಮಾಡುತ್ತ ಹೋಗುವಾ ನಮ್ಮ ಈ ಕಾರ್ಯಕ್ಕೆ ಕಾರ್ಗತ್ತಲೆಯು ಒಳ್ಳೆಯ ಸಹಾಯಕವಾಗಿದೆ." ಎಂದು ಅಂದಳು. ಕೂಡಲೆ ಸಾವಿತ್ರೀಬಾಯಿಯು ಸೀರೆಯನ್ನು ಬಿಗಿದುಟ್ಟುಕೊಂಡು ಇನ್ನು ಹೊರಡೋಣವೋ" ಎಂದಳು. ಯಮುನಾಬಾಯಿಯೂ ಸೀರೆಯನ್ನು ಬಿಗಿದುಟ್ಟುಕೊಂಡಳು; ಈರ್ವರೂ ನದಿಯ ಕಡೆಗೆ ಸಾಗಿದರು. ವಾಚಕರೇ, ಈಗ ಅವರಿಗೆ ಹೇಗೆನಿಸಿರಬಹುದು? ಯಾರು ಮುಂಜಾವಿನವರೆಗೂ ಸಂಕಟವು ಬರುವದೆಂದು ಗೊತ್ತಿಲ್ಲದೆ ಸೌಖ್ಯ ಸಾಗರದಲ್ಲಿ ಸುಖವಾಗಿ ವಿಹರಿಸುತ್ತಿದ್ದರೋ ಹಾಗೂ ಯಾರಿಗೆ ಜಗತ್ತೆಂದರೇನು, ಎಂಬುದರ ಕಲ್ಪನೆಯೂ ಇದ್ದಿಲ್ಲವೋ, ಅವರೇ ಸಾಯಂಕಾಲವಾಗುವದಕ್ಕೆ ಮೊದಲು ಪೂರ್ಣ ದುಃಖಿತರಾಗಿ ತಮ್ಮ ತಮ್ಮ ಜೀವಗಳನ್ನು ತ್ಯಜಿಸಿವ ಹೊರತು ಬೇರೆ ಉಪಾಯವಿಲ್ಲೆಂದು ನಿಶ್ಚಯಿಸಿ ಈಗ ನದಿಯ ಕಡೆಗೆ ಸಾಗಿರುವರು. ಈ ಜೀವ ಲೋಕವು ಅನಿತ್ಯವಾದುದೆಂಬ ಕಲ್ಪನೆಗೆ ಇದೊಳ್ಳೆಯ ದೃಷ್ಟಾಂತವಲ್ಲವೇನು ಇರಲಿ.

ಹೀಗೆ ಈರ್ವರೂ ನದಿಯ ಕಡೆಗೆ ಸಾಗಿದಾಗ ಯಮುನಾಬಾಯಿಯು ಸೊಸೆಗೆ– ನನ್ನ ಮಗೂ, ಮನುಷ್ಯನು ಎಷ್ಟೇ ಉದ್ದಾಮವೃತ್ತಿಯವನಿದ್ದರೂ ಆತನಿಗೆ ತನ್ನ ಮರಣವು ತಿಳಿದೊಡನೆ ಆತನು ಸಾತ್ವಿಕ ವೃತ್ತಿಯನ್ನು ತಳೆಯುವನು. ಇದೊಂದು ಸರ್ವಸಾಧಾರಣವಾದ ನಿಯಮವು. ಈ ನಿಯಮದಂತೆ ನೋಡಲಾಗಿ ನಮ್ಮ ಆಯುಷ್ಯವೂ ತೀರುತ್ತ ಬಂದಿದೆ. ಒಂದು ವೇಳೆ ಅದಿನ್ನೂ ಮುಗಿಯದೆ ಇದ್ದರೂ ನಾವೇ ಅದನ್ನು ಮುಗಿಸಬೇಕೆಂದು ನಿಶ್ಚಯ ಮಾಡಿ ನದಿಯಲ್ಲಿ ಜಿಗಿದುಕೊಳ್ಳಲು ಹೊರಟಿರುವೆವು. ಈ ಸ್ಥಿತಿಯಲ್ಲಿ ಶಾಂತಚಿತ್ತದಿಂದ ದೇವರ ನಾಮ ಭಜನೆ ಮಾಡುತ್ತ ಮಾರ್ಗಕ್ರಮಿಸುವದೇ ನಮ್ಮ ಕರ್ತವ್ಯವು. ಆದಕ್ಕಾಗಿಯೇ ನಾನು ಜಗದೀಶನಿಗೆ " ದೇವಾ, ನಮ್ಮ ಈ ಕೃತ್ಯಕ್ಕಾಗಿ ನಮ್ಮನ್ನು ಕ್ಷಮಿಸು.

ಅಬಲೆಯಾದ ನನಗೆ ಸದ್ಯದ ಪ್ರಸಂಗದಲ್ಲಿ ಹೀಗೆ ಮಾಡಿದ ಹೊರತು ಅನ್ಯಮಾರ್ಗವೇ ಇಲ್ಲವೆಂದು ಅನಿಸುತ್ತದೆ ಆತ್ಮಘಾತವು ಶಾಸ್ತ್ರದಲ್ಲಿ ಪಾತಕವೆಂದು ಹೇಳಲ್ಪಡುತ್ತಿದ್ದರೂ ಈಗ ಬಿಕ್ಕಟ್ಟಾದ ಸ್ಥಿತಿಯಲ್ಲಿ ಇದೇ ಉತ್ತಮ ಉಪಾಯವೆಂದು ಕಾಣುತ್ತದೆ ಈ ಪಾತಕವನ್ನೆಸಗಲು ಸಿದ್ಧಳಾದ ನನ್ನನ್ನು ಕ್ಷಮಿಸು; ಅದರಂತೆಯೇ, ನನ್ನ ಜನ್ಮದಾರಭ್ಯ ನನ್ನಿಂದ ಘಟಿಸಿದ ಎಲ್ಲ ಪಾಪಗಳ ಸಲುವಾಗಿಯೂ ಪಶ್ಚಾತ್ತಾಪದಿಂದ ಬೆಂದವಳಾದ ನನ್ನನ್ನು ಉದ್ಧಾರ ಮಾಡು ನಿನಗೆ ಶರಣಾಗತಳಾಗಿರುವೆನು ' ಎಂದು ಮನದಲ್ಲಿ ನಾನು ಪ್ರಾರ್ಥನೆಯನ್ನು ಮಾಡುತ್ತಿರುವಾಗಲೇ ನಿನಗೂ ಎರಡು ಮಾತು ಹೇಳಬೇಕೆಂದು ಅನಿಸಿದ್ದರಿಂದ ನಿನ್ನನ್ನು ಕರೆದೆನು ನಮ್ಮಿಬ್ಬರಲ್ಲಿ ಅತ್ತೆಸೊಸೆ ಎಂಬ ಸಂಬಂಧವಿದ್ದದರಿಂದ, ನೀನು ನಮ್ಮ ಮನೆಗೆ ಬಂದಾಗಿನಿಂದ ಇಲ್ಲಿಯ ವರೆಗೆ ನಾನು ನಿನ್ನ ಮನಕ್ಕೆ ಹತ್ತುವಂತಹ ಯಾವ ಮಾತುಗಳನ್ನಾಡಿದ್ದರೂ ಅವುಗಳಿಗಾಗಿ, ನೀನೂ ಮನಃಪೂರ್ವಕವಾಗಿ ನನ್ನನ್ನು ಕ್ಷಮಿಸು; ಇನ್ನು ಕೆಲ ನಿಮಿಷಗಳವರೆಗೆ ಜೀವಧಾರಣ ಮಾಡುವವರಾದ ನಾವು ಅಲ್ಪಾವಧಿಯಲ್ಲಾದಾರರೂ ಅತ್ತೆ ಸೊಸೆಯುರೆಂಬ ಭಾವವನ್ನು ಮರೆತು ಪ್ರಿಯಗೆಳತಿಯರೆಂದು ತಿಳಿದು ಇರ್ವರೂ ಕೂಡಿಕೊಂಡೇ ನದಿಯಲ್ಲಿ ದುಮುಕುವಾ ಬಾ, ಮುಂದೇನಾಗುವದೋ ಆಗಲಿ ಅದರ ವಿಷಯದಲ್ಲಿ ಈಗ ಚರ್ಚಿಸುತ್ತ ಕೂಡ್ರುವದರಲ್ಲಿ ಏನೂ ಅರ್ಥವಿಲ್ಲ! ಆದರೆ ನಾನು ಇದು ವರೆಗೆ ನಿನಗೆ ಏನು ಹೇಳಿದೆನೋ, ಅದನ್ನೆಲ್ಲ ವಿಚಾರ ಮಾಡಿ ಉತ್ತರ ಕೊಡು ನದಿಯನ್ನು ಮುಟ್ಟುವವರೆಗೆ ಅಂದರೆ ಸುಮಾರು ೧೦೦-೧೨೦ ಹೆಜ್ಜೆ ಮಾರ್ಗ ಕ್ರಮಿಸುವವರೆಗಾದರೂ ದೇವರ ನಾಮಸ್ಮರಣೆ ಮಾಡುವಾ ಹೀಗಾದರೆ ಆ ಜಗದೀಶನು ನಮಗೆ ಸದ್ಗತಿಯನ್ನಾದರೂ ಕೊಟ್ಟಾನು '' ಎಂದಳು ಅತ್ತೆಯ ಮಾತುಗಳನ್ನು ಕೇಳಿ ಸಾವಿತ್ರೀಬಾಯಿಯು ಕಿವಿಯ ಮೇಲೆ ಕೈಯಿಟ್ಟುಕೊಂಡು- ' ಅತ್ತೆಯವರೇ, ನನ್ನ ಕ್ಷಮೆ ಬೇಡಿಕೊಂಡು ಅವಸಾನಕಾಲದಲ್ಲಿ ನನ್ನನ್ನು ಪಾಪದಲ್ಲಿ ಕೆಡವಬೇಡಿರಿ. ನಾವು ಲೋಕರೂಢಿಗನುಸಾರವಾಗಿ ಅತ್ತೆಸೊಸೆಯರಾದರೂ ತಾಯಿ ಮಕ್ಕಳಂತೆ ಪ್ರೇಮದಿಂದಿರುವೆವು. ಅಂತ್ಯಕಾಲದಲ್ಲಿ ಕೂಡ ಆ ಭಾವನೆಯಿಂದಲೇ ಹೊರಟಿರುವೆವು ಆದದರಿಂದ ಯಾರೂ ಯಾರ ಬಳಿಯಲ್ಲಿಯೂ ಕ್ಷಮೆಯನ್ನು ಯಾಚಿಸುವ ಕಾರಣವೇ ಇಲ್ಲ ಆದರೂ ಅಜ್ಞಾನದಿಂದ ನನ್ನಿಂದ ಯಾವಾಗಲಾದರೂ ತಮ್ಮ ಆಜ್ಞೆಗೆ ಅವಜ್ಞೆಯುಂಟಾಗಿದ್ದರೆ, ತಾವು ಮಾತ್ರ ನನ್ನನ್ನು ಕ್ಷಮಿಸಬೇಕು. ಜಗದೀಶನು ನಮ್ಮ ಮೇಲೆ ಇಂತಹ ಗಂಡಾಂತರವನ್ನು ತರುವಂತೆ ನಮ್ಮ ಆಚರಣೆಯಲ್ಲಿ ಏನೂ ದೋಷವಿರಲಿಲ್ಲ; ಆದರೂ ಈಗ ಬಂದ ದುರ್ಧರ ಪ್ರಸಂಗಕ್ಕೆ ನಮ್ಮ ಪೂರ್ವ ಜನ್ಮದ ಪಾಪವೇ ಕಾರಣವಾಗಿರಬಹುದು. ಅದನ್ನು ನಾವು ಈ ಜನ್ಮದಲ್ಲಿ ತೊಳೆಯಬೇಕು. ಜೀವವಾಸೆ

ಯಿಂದ ನಾವು ಈಗ ಮನದಲ್ಲಿ ನಿಶ್ಚಯ ಮಾಡಿದಂತೆ ನಡೆಯದಿದ್ದರೆ, ಮುಂದೆ ನಮ್ಮ ಅಪಮಾನವು ಎಷ್ಟಾದೀತೆಂದು ಹೇಳಲಿಕ್ಕೆ ಬರುವಂತಿಲ್ಲ. ಆದದರಿಂದ ಈಗ ನಾವು ಅವಲಂಬಿಸಿದ ಮಾರ್ಗವೇ ಉತ್ತಮವಾದುದು. ಸಮಯಕ್ಕೆ ತಕ್ಕ ಮಾರ್ಗವನ್ನವಲಂಬಿಸುವದರಿಂದ ಏನೂ ದೋಷವಿಲ್ಲೆಂದು ನಮ್ಮ ಪುರೋಹಿತರು ಪುರಾಣದಲ್ಲಿ ಆಗಾಗ ಹೇಳುತ್ತಿದ್ದದ್ದು ನನಗೆ ನೆನಪಿದೆ. ಆದ ಕಾರಣವೇ ನಾವು ಈಗ ಮಾಡಲೆಸಗಿದ ಕಾರ್ಯದಿಂದ ನಮಗೆ ಪಾಪ ತಟ್ಟಲಾರದೆಂದು ಹೇಳುವದು. ಇದನ್ನು ಮಾಡದಿದ್ದರೆ ಮಾತ್ರ ಪಾಪ ಬರುವದು. ಆದರ ಫಲವಾದ ಅಪಮಾನ ವನ್ನು ನಾವು ಹೊಂದಬೇಕಾಗುವದು. ಇನ್ನು ಅಜ್ಞಾನದಿಂದ ಘಟಿಸಿದ ಪಾಪ ಕ್ಕಾಗಿ ಈಶನ ಕ್ಷಮೆ ಬೇಡಿಕೊಳ್ಳುವದು ಅವಶ್ಯವು. ನದಿಯಲ್ಲಿ ಮುಳುಗುವವರೆಗೂ ಅವನ ಕ್ಷಮೆಯನ್ನು ಬೇಡಿಕೊಳ್ಳುತ್ತಲೇ ಇರುವ. ಎರಡನೆಯ ಪಾಪವಿಚಾರವು ಮನದಲ್ಲಿ ಬರುವ ಮೊದಲೇ ಆತನಿಗೆ ಪ್ರಾಣವನ್ನರ್ಪಿಸುವಾ!" ಎಂದಳು. ಹೀಗೆ ಮಾತಾಡುತ್ತ ಒಬ್ಬರ ಕೈಯೊಬ್ಬರು ಹಿಡಿದುಕೊಂಡು ನದಿಯ ದಂಡೆಗೆ ಬಂದರು. ಬಳಿಕ ಇರ್ವರೂ ಮುಖಮಾರ್ಜನಾದಿಗಳನ್ನು ಮಾಡಿಕೊಂಡು ಪೂರ್ವದಿಶೆಯ ಕಡೆಗೆ ಮುಖಮಾಡಿ ನಿಂತು ಸರ್ವೇಶ್ವರನ ಸ್ತುತಿಗಾರಂಭ ಮಾಡಿದರು. ಯಮುನಾ ಬಾಯಿಯು ಆಕಾಶದ ಕಡೆಗೆ ಮೋರೆ ಮಾಡಿ ಕೈಮುಗಿದುಕೊಂಡು ದೈನ್ಯವಾಣಿ ಯಿಂದ- " ಹೇ ಜಗದಾತ್ಮಾ, ಜಗಜ್ಜನಕಾ, ನಾರಾಯಣಾ, ಇದು ವರೆಗೆ ನಾನು ತಿಳಿದೂ ತಿಳಿದು ಯಾವ ಪಾಪವನ್ನೂ ಮಾಡಿಲ್ಲ; ಆದರೂ ಅಜ್ಞಾನ ದಿಂದ ನನಗೆ ತಿಳಿಯದೆ ನನ್ನಿಂದ ಯಾವ ಪಾಪಕೃತಿಯಾದರೂ ಘಟಿಸಿದ್ದರೆ ಅದ ಕ್ಕಾಗಿ ನೀನು ತಾಯಿಯೋಪಾದಿಯಲ್ಲಿ ನನ್ನನ್ನು ವಾತ್ಸಲ್ಯದಿಂದ ಕ್ಷಮಿಸು. ಎರಡು ಸಂಸ್ಥಾನಾಧಿಪತಿಗಳಾದಂಥ ಇರ್ವರು ಮಕ್ಕಳನ್ನು ನಾನು ಹೆತ್ತೆನು; ಅಂಥ ವರ ತಾಯಿಯಾದ ನನಗೆ ಈ ಪ್ರಕಾರವಾದ ನಿಂದ್ಯಮಾರ್ಗವನ್ನವಲಂಬಿಸಿ ಜೀವ ಕೊಡುವ ಹೊತ್ತು ಬಂದಿದೆ! ಇರಲಿ ದೇವಾ! ಎಲ್ಲವೂ ನಿನ್ನ ಇಚ್ಛೆಯಲ್ಲವೇ; ನಿನ್ನ ಆಜ್ಞೆಗೆ ಹೊರತಾಗಿ ಯಾವ ಕಾರ್ಯವೂ ಜಗತ್ತಿನಲ್ಲಿ ಜರುಗುವದಿಲ್ಲವೆಂದ ಬಳಿಕ ನಮಗೆ ಈಗ ಒದಗಿದ ಸಂಕಟವು ನಿನಗೆ ಗೊತ್ತಿರಲಿಕ್ಕೆ ಸಾಕು. ಕಡೆ ಯಲ್ಲಿ ನಾನು ನಿನ್ನನ್ನು ಕೇಳಿಕೊಳ್ಳುವದಿಷ್ಟೇ- ದೇವಾ, ನನ್ನ ಇಬ್ಬರು ಮಕ್ಕ ಳಿಗೂ ಯೋಗ್ಯ ರೀತಿಯಿಂದ ಸಹಾಯ ಮಾಡಿ ಅವರನ್ನು ಸುಖದಿಂದಿಡು; ಮತ್ತು ಅನಾಥಳಾದ ಈ ಬಾಲಿಕೆಗೂ ನನಗೂ ನಿನ್ನ ಚರಣಾರವಿಂದದಲ್ಲಿ ಆಶ್ರ ಯಕೊಡು " ಎಂದು ನುಡಿದು ಮನದಲ್ಲಿಯೇ ಪರಮೇಶ್ವರನನ್ನು ನೆನೆಯ ಹತ್ತಿ ದಳು. ಪೂರ್ವಾಭಿಮುಖಳಾಗಿ ನಿಂತ ಸಾವಿತ್ರೀಬಾಯಿಯು ಸರ್ವೇಶನಿಗೆ ಕೈಜೋ ಡಿಸಿಕೊಂಡು- ' ಭಗವಂತಾ ನನ್ನಿಂದಲೂ ತಿಳಿಯದೆ ಅನೇಕ ಪಾಪಗಳಾಗಿರಬ ಹುದು. ಅವುಗಳನ್ನೆಲ್ಲ ಕ್ಷಮಿಸು. ನಾನು ಪತಿಯ ಆಜ್ಞೆಯನ್ನು ಇದುವರೆಗೂ

ಮೀರಿ ನಡೆದವಳಲ್ಲ. ಆದರೂ ಭ್ರಮೆಯಿಂದ ಎಂದಾದರೂ ಹಾಗಾಗಿದ್ದರೆ ಅದರ ವಿಷಯದಲ್ಲಿಯೂ ಪಶ್ಚಾತ್ತಾಪದಗ್ಧಳಾದ ನನ್ನನ್ನು ಕ್ಷಮಿಸು. ನನ್ನ ಪತಿಯನ್ನು ಸುಖಿಯಾಗಿಡು. ಶತ್ರುಗಳ ಕೈಗೆ ಸಿಗಗೊಡಬೇಡ. ಮತ್ತು ನಿನ್ನ ಬಳಿಯಲ್ಲಿ ನಮ್ಮಿರ್ವರನ್ನು ಕರೆದುಕೋ. ಇದೇ ನನ್ನ ಕಡೆಯ ಪ್ರಾರ್ಥನೆ ಎಂದು ಬೇಡಿಕೊಂಡಳು.

ಹೀಗೆ ಅತ್ತೆ ಸೊಸೆಯರಿಬ್ಬರೂ ತಮ್ಮ ತಮ್ಮ ಇಷ್ಟದಂತೆ ಜಗದೀಶನಿಗೆ ಮೊರೆಯಿಡುವದರೊಳಗಾಗಿ ಮೆಲ್ಲನೆ ಕತ್ತಲೆಯು ಸುತ್ತಲೂ ಪಸರಿಸತೊಡಗಿತು. ಬಳಿಕ ಅವರು ಇಬ್ಬರ ಸೆರಗಿಗೂ ಕೂಡಿ ಬಲವಾದ ಗಂಟನ್ನು ಹಾಕಿಕೊಂಡು ನೀರಲ್ಲಿಳಿದರು. ಯಮುನಾಬಾಯಿಯು- " ಮಗಳೇ, ಮುಂಜಾವಿನಿಂದಲೂ ದುಃಖ ಚಿಂತೆ ಮೊದಲಾದವುಗಳೆಲ್ಲ ಒಂದೇ ಸವನೆ ಬೆನ್ನುಹತ್ತಿ ಪಿಡಿಸುತ್ತಿದ್ದವು. ಆದರೆ ಪವಿತ್ರಳಾದ ಮಲಾಪಹಾರಿಣಿಯು ತನ್ನ ದರದಲ್ಲಿ ನಮಗೆ ಇಂಬುಗೊಟ್ಟು ಅವುಗಳ ಪೀಡೆಯನ್ನು ನಿವಾರಿಸುವಳು. ಇಲ್ಲಿ ನೀರೂ ಆಳವಾಗಿದೆ ನಮಗೆ ವಿಶೇಷ ತಾಪವೂ ಆಗಲಾರದು ಎಂದು ತೋರುತ್ತದೆ " ಎಂದು ಮಾತನಾಡಿದಳು.

ಆದಕ್ಕೆ ಸಾವಿತ್ರೀಬಾಯಿಯು- ' ಅಹುದು ಅತ್ತೆಯವರೇ, ನೀವಂದಂತೆಯೇ ಈ ಹೊತ್ತಿನ ತಾಪ ನಿವಾರಣೆಗೂ, ಮುಂದೆ ಒದಗಬಹುದಾದ ಅಪಮಾನ ನಿವಾರಣೆಗೂ ಸ್ವಧರ್ಮ ರಕ್ಷಣೆ ಮಾಡುವದಕ್ಕೂ ಉತ್ತಮವಾದ ಉಪಾಯವು ಸೂಚಿತವಾಯಿತು. ಜಗದೀಶನು ತೀವ್ರದಲ್ಲಿ ಪರಲೋಕದರ್ಶನವನ್ನು ಮಾಡಿಸಿ ಸುಖದಿಂದಿಡಲೆಂಬುದೇ ನನ್ನ ಇಚ್ಛೆಯು " ಎಂದು ಮಾತಾಡಿದಳು.

ಹೀಗೆ ನಿರಾಶಾಜನಕವಾದ ಅನೇಕ ಮಾತುಗಳನ್ನಾಡುತ್ತ ಅವರು ಎದೆ ಮುಣುಗುವಷ್ಟು ನೀರಲ್ಲಿ ಹೋಗಿ ನಿಂತರು. ಆ ಮೇಲೆ ಯಮುನಾಬಾಯಿಯು ಮತ್ತೆ ಸೊಸೆಯನ್ನು ಕುರಿತು- " ಮಗಳೇ, ನೀನೂ ನನ್ನೊಡನೆ ಹೀಗೆ ಅಪಮೃತ್ಯುವನ್ನು ಹೊಂದಲೇ ಬೇಕೆಂದು ನನ್ನದೇನೂ ಇಚ್ಛೆಯಿರುವದಿಲ್ಲ! ಕೇವಲ ಧರ್ಮ ಹಾಗೂ ಮಾನಗಳ ರಕ್ಷಣೆಯಾಗಬೇಕೆಂಬುದೇ ನನ್ನ ಧ್ಯೇಯವು. ಜೀವಧಾರಣೆಯನ್ನು ಮಾಡಿಕೊಂಡು ಅಪಮಾನವಾಗುವ ಮೊದಲೇ ದೇವರು ಕಣ್ಣು ಮುಚ್ಚಿದರೆ ಒಳಿತಾಗುವದು! ಈ ಬಿಕ್ಕಟ್ಟಿನ ಪ್ರಸಂಗದಲ್ಲಿ ನಾವು ಒಬ್ಬರ ಮೇಲೆ ಭಾರ ಹಾಕಬಾರದೆಂದು ನಿಶ್ಚಯ ಮಾಡಿಕೊಂಡೇ ಇಲ್ಲಿಗೆ ಬಂದಿರುವದು. ಈಗಲಾದರೂ ಏನಾಯಿತು? ನೀನು ಬದುಕಬೇಕೆಂದು ಇಚ್ಛಿಸುತ್ತಿದ್ದರೆ, ಸೀರೆಯ ಗಂಟನ್ನು ಬಿಚ್ಚಿಕೊಂಡು ಹೊರಟುಹೋಗು; ನಾನು ಸಂಕಲ್ಪ ಮಾಡಿದಂತೆ ಸಾಯುವದೇ ನಿಶ್ಚಯ! " ಎಂದು ಹೇಳಿದಳು

ಅತ್ತೆಯ ಮಾತುಗಳನ್ನು ಕೇಳಿ ಆಶ್ಚರ್ಯಯುತಳಾದ ಸಾವಿತ್ರೀಬಾ

ಯಿಯು-‘ ಇಲ್ಲಿಯವರೆಗೂ ನನ್ನನ್ನು ಸಂಗಡ ಕರೆದುಕೊಂಡು ಬಂದು ನೀವು ಈಗ ಹೀಗೆ ಹೇಳಬೇಕೇ? ನನಗೆ ಬದುಕಬೇಕೆಂಬ ಆಶೆಯಿದ್ದರೆ ನದಿಯಲ್ಲಿಯಾದರೂ ಕಾಲಿಡುತ್ತಿದ್ದೆನೇ? ನೀವು ಹೇಳಿವಂತೆ ನಾನು ಯಾರ ಆಶ್ರಯದಲ್ಲಿರುವದು ಯೋಗ್ಯವಿತ್ತೋ, ಆ ಆಶ್ರಯವೇ ತಪ್ಪಿದ ಬಳಿಕ ಬದುಕಿದ್ದು ಮಾಡುವದಾದರೂ ಏನು? ಒಲ್ಲೆ ನಾಲೊಲ್ಲೆ! ಒಂದೇ ದಿವಸದಲ್ಲಿ ಅವರ ವಿರಹದಿಂದ ನನ್ನ ಜೀವನವು ಬೇಸತ್ತಿದೆ. ಇನ್ನು ಹೀಗೆ ನಿಂತುಕೊಂಡು ಉಪಯೋಗವೇನು? ನಿಮ್ಮ ಆಜ್ಞೆಗೆ ನಾನು ಹೊರತಿಲ್ಲ. ಸುಮ್ಮನೆ ಇಂಥ ಮಾತುಗಳನ್ನಾಡಿ ನನ್ನನ್ನು ಮೋಹದಲ್ಲಿ ನೂಕಬೇಡಿರಿ!” ಎಂದು ಉತ್ತರವಿತ್ತಳು. ಸೊಸೆಯ ನಿಶ್ಚಯಾತ್ಮಕವಾದ ಭಾಷಣವನ್ನು ಕೇಳಿ ಯಮುನಾಬಾಯಿಯು-“ ಮಗೂ, ಇನ್ನೂ ಒಂದು ಹೆಜ್ಜೆ ಮುಂದೆ ಹೋದೆವೆಂದರೆ ತೀರಿತು ಮಾತು; ನಿಂತು ಹೋಗುವದು. ಆಗಲಿ, ಬಾ ಮಗಳೇ, ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಕೊಂಡು ದೈವದಲ್ಲಿದ್ದುದನ್ನು ಅನುಭವಿಸುವಾ ಬಾ, ಪರಲೋಕದಲ್ಲಿಯೂ ಸುಖಹೊಂದಬಹುದೆಂದು ನನಗೆ ನನ್ನ ಮನವು ಹೇಳುತ್ತಿದೆ. ಜಗಜ್ಜನಕನಾದ ವೆಂಕಟೇಶನು ಎಂದೂ ನಮ್ಮನ್ನು ಉಪೇಕ್ಷಿಸಲಾರನು ಬಾ” ಎಂದು ಸಾವಿತ್ರೀಬಾಯಿಯನ್ನು ಬಿಗಿದಪ್ಪಿಕೊಂಡು ಒಂದು ಹೆಜ್ಜೆ ಮುಂದೆ ಹೋದಳು. ತೀರಿತು! ನೀರಿನ ಸೆಳವು ವಿಶೇಷವಿದ್ದದರಿಂದ, ಅನಾಥರಾದ ಅತ್ತೆಸೊಸೆಯಂದಿರು ಪ್ರವಾಹದಗುಂಟ ತೇಲುತ್ತ ಹೊರಟರು. ಒಂದು ಜನ್ಮನೀಗಿ ಮುಕ್ತರಾಗಲು ನೀರು ಗುಟಕರಿಸುತ್ತ ನಡೆದರು. ಅವರ ಜೀವನವು ಇಲ್ಲಿಗೆ ಅಕ್ಷಯ ಶಾಂತಿಯನ್ನು ಹೊಂದಿತು!

ಪಾಠಕರೇ, ಈಗ ಭಾಸ್ಕರರಾಯ ಅಥವಾ ಬಾಬಾಸಾಹೇಬ ಇವರ ಮನೆಯವರಾರೂ ಇಲ್ಲದಿದ್ದರೂ, ಈ ಹೆಂಗೆಳೆಯರ ಪೂರ್ವಜರ ವಿಷಯದಲ್ಲಿ ತುಸುವಾದರೂ ತಿಳಿದುಕೊಳ್ಳಲು ನಮ್ಮ ವಾಚಕ ಮಹಾಶಯರು ಉತ್ಸುಕರಾಗಿರಬಹುದು. ಇವರ ವಿಷಯವು ಈ ಕಾದಂಬರಿಯಲ್ಲಿಯೇ ಮತ್ತೊಂದೆಡೆಯಲ್ಲಿ ಬಂದಿರಬಹುದೆಂದು ವಿಚಾರಿಸುತ್ತ ಕೂಡ್ರಬಾರದೆಂದು ಅದನ್ನು ಇಲ್ಲಿಯೇ ಹೇಳಿ ಮುಂದಿನ ವಿಷಯವನ್ನು ಬರೆಯಲುಪಕ್ರಮಿಸುವೆವು. ಬಿದನೂರು ಗ್ರಾಮವನ್ನು ನರಗುಂದದವರಿಂದ ಮೊದಲೇ ಇನಾಮಾಗಿ ದೊರಕಿಸಿದ ಬಿದನೂರ ಜೊಯಿಸರೇ, ದಾದಾಜಿರಾಯರಿಗೆ (ಅಪ್ಪಾಸಾಹೇಬ) ತಮ್ಮ ಮಗಳನ್ನು ಧಾರೆಯೆರೆದು ಕೊಟ್ಟರು. ಇವಳೇ ನಮ್ಮ ಯಮುನಾಬಾಯಿಯು! ಇನಾಮುದಾರನ ಮಗಳು ನರಗುಂದದ ರಾಣಿಯೂ ಎರಡು ಸಂಸ್ಥಾನಾಧಿಪತಿಗಳ ಜನ್ಮದಾತೆಯೂ ಆದ ಈ ಯಮುನಾಬಾಯಿಯು ಅನಾಥೆಯಂತೆ ನದಿಯಲ್ಲಿ ಹಾರಿಕೊಂಡು ಪ್ರಾಣ ಬಿಡಬೇಕಾಗಿ ಬಂತಲ್ಲವೇ! ವಿಧಿ ಮಹಿಮೆ! ಅಜರೆಯು ಸಾವಿತ್ರೀಬಾಯಿಯು ತೌರೂರು ಮಾಂಜರೇಕರರ ಮಗಳು. ಇವಳು ತನ್ನ ರೂಪ ಗುಣಾತಿಶಯದಿಂದ ಸಂಸ್ಥಾನಿಕನ ಹೆಂಡ

ತಿಯಾದಳು. ಪತಿಗೆ ಪ್ರಾಣಕ್ಕಿಂತಲೂ ಪ್ರಿಯವಾದಳು. ಇವಳಿಂದ ತನಗೆ ಪುತ್ರಸಂತಾನವಾಗುವದಿಲ್ಲವೆಂದು ತಿಳಿದೊಡನೆ ಬಾಬಾಸಾಹೇಬನು ದತ್ತಕ ತೆಗೆದುಕೊಳ್ಳಲು ಅಪ್ಪಣೆ ದೊರೆಕಿಸುವದಕ್ಕೆ ಶಕ್ತಿ ಮೀರಿ ಪ್ರಯತ್ನಿಸಿದನು. ಅಪ್ಪಣೆದೊರೆಯುವ ಆಶೆಯು ಪೂರ್ಣವಾಗಿ ಅಳಿದೊಡನೆ ಯುದ್ಧ ಹೂಡಿದನು. ಯುದ್ಧದ ಪರಿಣಾಮವೇನಾಯಿತೆಂಬುದು ತಮಗೆ ತಿಳಿದಿದೆ ಬಡವರ ಮನೆಯಲ್ಲಿಯೂ ಅಪ್ರತಿಮ ಸ್ತ್ರೀರತ್ನವು ಜನಿಸುವದೆಂದಿಷ್ಟೇ ಹೇಳಿ ಈ ದುಃಖದಾಯಕ ಭಾಗವನ್ನು ಮುಗಿಸುವೆವು.

# ಎಂಟನೆಯ ಪ್ರಕರಣವು.

## ಬಿಡುಗಡೆ.

ಆರನೆಯ ಪ್ರಕರಣವಲ್ಲಿ ಹೇಳಿದ ಮೇರೆಗೆ ಗೋವಿಂದರಾವ ಹಾಗೂ ಕೃಷ್ಣರಾವ ಇವರನ್ನು ಸಿಪಾಯರು ನರಗುಂದಕ್ಕೆ ಕರೆತಂದು, ಒಂದು ದೇವಾಲಯದಲ್ಲಿಳಿದರು. ತಂದೆ ಮಕ್ಕಳನ್ನು ನೋಡಿ ನರಗುಂದದ ನಿವಾಸಿಗಳೆಲ್ಲ-" ರಾಮರಾಯನು ಸಿಕ್ಕಿರುವನು. ಆದರೆ ನಿರಪರಾಧಿಯಾದ ಗೋವಿಂದರಾಯನು ಮಗನೊಡನೆ ಇಲ್ಲಿಗೆ ಬಂದು ವ್ಯರ್ಥವಾಗಿ ಸಂಕಟದಲ್ಲಿ ಬಿದ್ದನು. ಈ ನ್ಯಾಯಾಸ್ಥಾನದಲ್ಲಿ ನಿರ್ದೋಷಿಗಳಾದ ಇವರಿಗೆ ಯಾವ ತರದ ಶಿಕ್ಷೆಯನ್ನು ಕೊಡುವರೋ ತಿಳಿಯದ ಮಾತು '' ಎಂದು ಮಾತಾಡಹತ್ತಿದರು. ಗೋವಿಂದರಾಯನು ಮಗನೊಂದಿಗೆ ಗುಡಿಯಲ್ಲಿಳಿದುಕೊಂಡುದನ್ನು ನೋಡಿದ ಕೆಲವರಿಗೆ ಆಶ್ಚರ್ಯವೂ ಮತ್ತೆ ಕೆಲವರಿಗೆ ಒಂದು ತರದ ಆನಂದವೂ ಆಯಿತು! ಬಳಿಕ ರಾಮರಾಯನು ಸಿಕ್ಕದ್ದು ಸುಳ್ಳೆಂದೂ ರಾಮರಾಯನ ಬಳಿಯಲ್ಲಿದ್ದ ಕೃಷ್ಣರಾಯನೆಂಬ ಬಾಲಕನು ಸಿಕ್ಕಿರುವನೆಂದೂ ಅವನೊಡನೆ ಅವನ ತಂದೆಯನ್ನೂ ಹಿಡಿದು ತಂದಿರುವರೆಂದೂ, ಇದೇ ನಿಜವಾದ ಸುದ್ದಿಯೆಂದೂ ಹಿಂದುಗಡೆ ಎಲ್ಲರಿಗೂ ಗೊತ್ತಾಯಿತು! ಆದರೂ ಒಂದು ತರದ ಸಂಶಯದಿಂದ ಜನರೆಲ್ಲ ಮರುಗಲಾರಂಭಿಸಿದರು. ಕೆಲವರಂತೂ-" ರಾಮರಾಯನೇ ಸಿಕ್ಕಿದ್ದರೂ ನೆಟ್ಟಗಿತ್ತು; ಆದರೆ ಈ ಯಮರೂಪಿಗಳಾದ ಸಿಪಾಯರ ಕೈಯಲ್ಲಿ ಕೃಷ್ಣರಾಯನು ಸಿಕ್ಕದ್ದು ಮಾತ್ರ ಒಳಿತಾಗಲಿಲ್ಲ. ಪಾಪ! ಈ ಹುಡುಗನು ಮಾಡಿದುದಾದರೂ ಏನು? ತಂದೆ ತಾಯಿಗಳ ಬಳಿಯಲ್ಲಿ ಅಥವಾ ಅವರು ಎಲ್ಲಿಡುವರೋ ಅಲ್ಲಿ ಇರುವದು ಮಕ್ಕಳ ಧರ್ಮ! ಇಂಥ ಚಿಕ್ಕ ವಯಸ್ಸಿನಲ್ಲಿ ಏನು ಬಂಡು ಮಾಡುವದು ಈ ಚಿಕ್ಕ ಮಗುವು! ಮತ್ತು ಬಂಡಾಯದಲ್ಲಿ ಕೂಡಿಕೊಂಡು ಈತನು ಮಾಡಿರುವದಾದರೂ ಏನು ಅಂಥ ಪುರುಷಾರ್ಥವನ್ನು? ದೇವಾ! ಈ ನೇತ್ರಾನಂದಕರನಾದ ಬಾಲಕನಿಗೆ ಮನಬಂದಂತೆ ಶಿಕ್ಷೆಯನ್ನು ವಿಧಿಸಲು ಈ ಇಂಗ್ಲಿಷ ಅಧಿಕಾರಿಗೆ ಬುದ್ಧಿಯ ಕೊಡಬೇಡ ನಾವು ಬೇಡುವದು ಇಷ್ಟೇ ನಿನ್ನ ಬಳಿಯಲ್ಲಿ! " ಎಂದು ದೇವನನ್ನು ಪ್ರಾರ್ಥಿಸಿದರು.

ಮಗನೊಂದಿಗೆ ನರಗುಂದಕ್ಕೆ ಬರುವಾಗ ಗೋವಿಂದರಾಯನಿಗೆ ದಾರಿಯಲ್ಲಿ ಶುಭ ಶಕುನಗಳಾದುದರಿಂದ ಒಂದು ಪ್ರಕಾರದ ಧೈರ್ಯವು ಆತನಿಗೆ ಉಂಟಾಗಿತ್ತು ಆದರೂ ಆತನು ನರಗುಂದಕ್ಕೆ ತಲ್ಪಿದ ಬಳಿಕ ತನ್ನ ಮನೆಯಲ್ಲಿಳಕೊಳ್ಳದೆ ಒಂದು ದೇವಾಲಯದಲ್ಲಿಯೇ ಇಳಕೊಂಡನು. ಇದರಿಂದ ಜನರಿಗೆ ಬಹಳ ಅಸಮಾಧಾನವಾಯಿತು. ಕೆಲವರಂತೂ ಮನೆಯಲ್ಲಿಯೇ ಇಳಿದುಕೊಳ್ಳಲು ಆಗ್ರ

ಹಮಾಡಹತ್ತಿದರು. ಆಗ ಆ ಜನರನ್ನು ಕುರಿತು- "ಯಾವ ಮನೆಯಲ್ಲಿ ನಾನು ನೂರಾರು ಜನರೊಡನೆ ವಾಸಿಸುತ್ತಿದ್ದೆನೋ, ಅಂತಹ ಭವ್ಯವಾದ ಸ್ಥಳದಲ್ಲಿ ನನ್ನ ಮಗನೊಂದಿಗೆ ನಾನೊಬ್ಬನೇ ಹೇಗೆ ವಾಸಿಸಲಿ? ಯಾವಾಗಲೂ ಮಂದಿ ಮಕ್ಕಳ ದಟ್ಟಣೆಯಿಂದ ತುಂಬಿದ ಮನೆಯಲ್ಲಿ ಈಗ ಭೂತಗಳೋಡಾಡುತ್ತಿರಬಹುದು! ಭಯಾನಕವಾಗಿ ಕಾಣುತ್ತಿರಬಹುದು! ಶೂದ್ರರು ಮನೆಹೊಕ್ಕು ಲೂಟಿ ಮಾಡಿ ದ್ದಾರೆ. ಅಂಥ ಮನೆಯಲ್ಲಿ ನಾನು ಕಾಲಿಡಲಾರೆನು. ಮೊದಲಿನಂತೆ ಸುದಿನವು ಬಂದರೆ ನನ್ನ ಎಲ್ಲ ಆಪ್ತಮಿತ್ರರೊಡಗೂಡಿಕೊಂಡು ನಾನು ಆ ಮನೆಯೊಳಕ್ಕೆ ಕಾಲಿಡುವೆನು. ಈ ಊರಲ್ಲಿ ನಿಂತುಕೊಂಡು ನೀರನ್ನು ಸಹ ಕುಡಿಯಲಪೇಕ್ಷೆಮಾಡುವದಿಲ್ಲ. ನಮ್ಮ ಕುಲಸ್ವಾಮಿಯಾದ ವೇಂಕಟಪತಿಯ ದೇವಾಲಯವು ಇಲ್ಲಿರುವದರಿಂದ ಪ್ರಸಂಗವಶದಿಂದಲಾದರೂ ಇಲ್ಲಿಗೆ ಬರಬೇಕಾ ಗುವದೆಂಬುದೇನೋ ನಿಜವು. ಆದರೂ ದಿಕ್ಕುಗೆಟ್ಟು ಓಡಿ ಹೋದ ನಮ್ಮ ಕುಟುಂಬದವರೆಲ್ಲ ಒಟ್ಟಾಗಿ ಕೂಡುವಂತೆ ವೇಂಕಟಪತಿಯು ನಮ್ಮೆಲ್ಲರ ಮೇಲೆ ಕೃಪೆ ಮಾಡಿ ನಮ್ಮವರಿಂದ ತನ್ನ ಸೇವೆ ಮಾಡಿಸಿಕೊಳ್ಳಲಿ! ಅಂದರೆ ನಾವು ಮತ್ತೆ ಇಲ್ಲಿ ಬಂದು ನಿಲ್ಲುವೆವು. ಇಲ್ಲವಾದರೆ ಒಮ್ಮೆ ಬಿಟ್ಟು ಹೋದ ಮನೆಗೂ ನಮಗೂ ಮತ್ತೆ ದರ್ಶನವು ಸಹಬೇಡ!" ಎಂದು ಗೋವಿಂದರಾಯನು ಹೇಳಿ ದನು.

"ರಾಮರಾಯನು ಸಿಗದಿದ್ದರೂ ಆತನ ಬಳಿಯಲ್ಲಿ ಇರುತ್ತಿದ್ದ ಕೃಷ್ಣರಾಯ ನೆಂಬ ಬಾಲಕನು ನಮಗೆ ಸಿಕ್ಕಿರುವನು. ಆತನು ತಮ್ಮ ದೃಷ್ಟಿಗೆ ಬೀಳಬೇ ಕೆಂದು ಇಲ್ಲಿಗೆ ತಂದಿರುವೆವು" ಎಂದು ಗೋವಿಂದರಾಯರನ್ನು ಕರೆದುಕೊಂಡು ಬಂದ ಸಿಪಾಯಿಗಳು ತಮ್ಮ ಮೇಲಧಿಕಾರಿಯಾದ ಸಾಹೇಬನಿಗೆ ಹೇಳಿದರು. ಆದನ್ನು ಕೇಳಿ ಆತನು- 'ಒಳ್ಳೆಯದು. ಅವರನ್ನು ನಮ್ಮ ಸಭಾಸ್ಥಾನಕ್ಕೆ ಕರೆದುಕೊಂಡು ಬನ್ನಿರಿ.' ಎಂದು ಅಪ್ಪಣೆ ಮಾಡಿದನು. ಈ ಮೊದಲೇ ಸಿಪಾ ಯಿಗಳು ಗೋವಿಂದರಾಯರ ಸದ್ಗುಣಗಳನ್ನು ಸಾಹೇಬನ ಬಳಿಯಲ್ಲಿ ಚೆನ್ನಾಗಿ ವರ್ಣಿಸಿದ್ದರು ಆದದರಿಂದಲೇ ಗೋವಿಂದರಾಯನು ಸೆರೆಯಾಳುಗಳಂತೆ ಬಂಧ ನದಲ್ಲಿರದೆ ದೇವಾಲಯದಲ್ಲಿ ಇಳಿಯುವಂತೆ ಏರ್ಪಾಡಾಗಿತ್ತು. ಇದನ್ನು ಕಂಡು ಸೆರೆಯಾಳುಗಳಿಗೂ ಸೈನಿಕರಿಗೂ ಊರಲ್ಲಿಯ ಉಳಿದ ಜನರಿಗೂ ವಿಶೇಷಾಶ್ಚರ್ಯ ವಾಯಿತು! ತನ್ನನ್ನೂ ಉಳಿದವರಂತೆ ಬಂಧನದಲ್ಲಿರಿಸದಿದ್ದರೂ ತನ್ನ ಮೊದಲಿನ ಸ್ಥಿತಿಗೂ ಸದ್ಯದಸ್ಥಿತಿಗೂ ಮಹದಂತರವಾದುದನ್ನು ಕಂಡು ಗೋವಿಂದರಾಯನಿಗೆ ವಿಶೇಷ ದು:ಖವಾಯಿತು. ಆದರೆ ಮಾಡುವದೇನೆಂದು ಆತನು ತನಗಾದ ದುಃಖ ವನ್ನು ನುಂಗಿಕೊಂಡು ಮುಂದೇನಾಗುವದೋ ಎಂದು ವಿಚಾರ ಮಾಡುತ್ತಲಿದ್ದನು.

ಗೋವಿಂದರಾಯನು ನರಗುಂದಕ್ಕೆ ಬರುವದಕ್ಕಿಂತ ಮೊದಲೇ, ಬಂಡಾಯಕ್ಕೆ ಅನುಕೂಲರಾಗಿದ್ದ ಅದೇ ಎಷ್ಟೋ ಜನರನ್ನು ಹಿಡಿದು ತಂದು ಸೆರೆಯಲ್ಲಿಟ್ಟಿದ್ದರು. ಅವರ ನ್ಯಾಯಾನ್ಯಾಯ ವಿಚಾರಣೆಯು ಪ್ರತಿನಿತ್ಯ ಮುಂಜಾನೆ ಹತ್ತು ಗಂಟೆಗೆ ಪ್ರಾರಂಭವಾಗಿ ಸಾಯಂಕಾಲ ನಾಲ್ಕು ಗಂಟೆಯ ವರೆಗೂ ನಡೆಯುತ್ತಿತ್ತು. ನ್ಯಾಯ ನಿರ್ಣಯದ ವಿಷಯದಲ್ಲಿ ಕೆಳಗಿನ ಅಧಿಕಾರಿಗಳ ಹೇಳಿಕೆಯಂತೆಯೇ ತೀರ್ಪಾಗುತ್ತಿತ್ತು. ಅಪರಾಧಿಯೆಂದು ನಿರ್ಣಯವಾದೊಡನೆ ಆತನು ತೋಫಿನಬಾಯಿಗೆ ತುತ್ತಾಗಲೀ, ಗಲ್ಲಿನ ಶಿಕ್ಷೆಗೆ ಪಾತ್ರವಾಗಲೀ ಆದನೆಂದೇ ತಿಳಿಯಬೇಕು! ತುಸು ಸಂಶಯವುಂಟಾದೊಡನೆ ಚನ್ನಾಗಿ ಶಿಕ್ಷೆಹೊಂದಿದನೆಂದೇ ಭಾವಿಸಬೇಕು! ಅಂತೂ, ಒಟ್ಟಿನಲ್ಲಿ ಈ ಜಾಲದಲ್ಲಿ ಸಿಕ್ಕು ಶಿಕ್ಷೆ ವಿಧಿಸಲ್ಪಡದೆ ಪಾರಾಗಿ ಹೋಗುವವರ ಸಂಖ್ಯೆಯು ಬಹುವಾದರೆ ನೂರರಲ್ಲಿ ಐದಾಗಬಹುದು. ಈ ಪ್ರಕಾರದ ಅವ್ಯವಸ್ಥೆಯಲ್ಲಿ ಸಿಕ್ಕವನು ಅಪರಾಧಿಯೇ ಇರಲಿ, ಶಿಕ್ಷೆ ಹೊಂದಬೇಕಾಗುತ್ತಿತ್ತು! ಈ ಸ್ಥಿತಿಯನ್ನು ಕಂಡು ಜನರು ಮನದಲ್ಲಿಯೇ ಮರುಗುತ್ತಿದ್ದರು. ಯಾಕಂದರೆ ಬಾಯಿಬಿಚ್ಚಿ ಏನನ್ನೂ ಮಾತನಾಡುವಂತಿದ್ದಿಲ್ಲ!

ಇಂದು ಗೋವಿಂದರಾಯರ ನ್ಯಾಯ ನಿರ್ಣಯದ ದಿವಸವಾದುದರಿಂದ ಜನರು ನ್ಯಾಯಾಸ್ಥಾನದಲ್ಲಿ ವಿಶೇಷವಾಗಿ ಕಿಕ್ಕಿರಿದಿದ್ದರು. ಅಪರಾಧಿಗಳೆಂದು ಹಿಡಿದು ತಂದ ಗೋವಿಂದರಾವ ಹಾಗೂ ಕೃಷ್ಣರಾವ ಇವರ ಅಂಗವು ಬಂಡಾಯದಲ್ಲಿ ಏನೂ ಇಲ್ಲವೆಂದು ಜನರಿಗೆಲ್ಲ ಚೆನ್ನಾಗಿ ಗೊತ್ತಿದ್ದದರಿಂದ, ನ್ಯಾಯಾಧಿಕಾರಿಯು ಹೇಗೆ ತೀರ್ಪನ್ನು ಕೊಡುವನೋಯೆಂದು ತಿಳಿದುಕೊಳ್ಳುವದಕ್ಕಾಗಿಯೂ, ಅವರನ್ನು ಪ್ರತ್ಯಕ್ಷ ನೋಡುವದಕ್ಕಾಗಿಯೂ ಕುಳಿತ ಜನರೆಲ್ಲ ಹಾರೈಸುತ್ತಿದ್ದರು. ಅಷ್ಟರಲ್ಲಿ ಸಿಪಾಯಿಗಳು ಅವರಿಬ್ಬರನ್ನೂ ಕರೆದುಕೊಂಡು ಬಂದರು. ಜನರು ಮುಗಿಬಿದ್ದು ಅವರನ್ನು ನೋಡಲು ಯತ್ನಿಸಿದರು. ಇದರಿಂದ ಸಭಾಸ್ಥಾನವಲ್ಲಿ ಗದ್ದಲವಾಗತೊಡಗಿತು. ಅಷ್ಟರಲ್ಲಿ ಸಿಪಾಯಿಗಳು ಸುತ್ತಲೂ ಗದ್ದಲವಾಗದಂತೆ ವ್ಯವಸ್ಥೆಯನ್ನಿಟ್ಟರು. ನೆರೆದವರೆಲ್ಲರೂ-“ ಈ ನಿರಪರಾಧಿಗಳಿಗೆ ಶಿಕ್ಷೆವಿಧಿಸಿದರೆ ಈ ನ್ಯಾಯಾಧಿಪತಿಯು ಕೇವಲ ಮೂರ್ಖನೆಂದೇ ಹೇಳಬೇಕೆಂದು” ತಮ್ಮ ತಮ್ಮೊಳಗೆ ಆಡಿಕೊಳ್ಳ ಹತ್ತಿದರು. ಅಷ್ಟರಲ್ಲಿ ನ್ಯಾಯಾಧಿಕಾರಿಯು ತನ್ನ ಪರಿವಾರದೊಡನೆ ಸಭೆಯೊಳಗೆ ಬಂದನು. ಕೂಡಲೆ ಎಲ್ಲರೂ ಎದ್ದು ನಿಂತು ಅವನಿಗೆ ಮರ್ಯಾದೆ ಮಾಡಿದರು. ಆತನು ತನ್ನ ಆಸನದಲ್ಲಿ ಕುಳಿತೊಡನೆ ಎಲ್ಲರೂ ಕುಳಿತುಕೊಂಡರು. ಅಪರಾಧಿಗಳು ಬಂದಿರುವರೇ?” ಎಂದು ಸಿಪಾಯಿಯನ್ನು ಕೇಳಿದನು. ಕೂಡಲೆ ತಂದೆ ಮಕ್ಕಳಿಬ್ಬರೂ ಆತನ ಸಮೀಪದಲ್ಲಿ ಹೋಗಿ ನಿಂತುಕೊಂಡರು. ಇವರನ್ನು ಹಿಡಿದುಕೊಂಡು ಬಂದ ಸಿಪಾಯಿಗಳ ಮುಖ್ಯಾಧಿಕಾರಿಯು ಎದ್ದು ನಿಂತು-“ ನ್ಯಾಯಾಧಿಕಾರಿಗಳೇ, ರಾಮರಾಯನ ಶೋಧಕ್ಕಾಗಿ

ನಾವು ಯಾವ ಹಳ್ಳಿಗೆ ಹೋಗಿದ್ದೆವೋ, ಆ ಹಳ್ಳಿಯಲ್ಲಿಯ ಎಲ್ಲ ಮನೆ ಗುಡಿ ಗುಂಡಾರಗಳನ್ನು ಹುಡುಕಾಡಿದೆವು. ಆದರೂ ಆತನ ಶೋಧನಾಗಲಿಲ್ಲ. ರಾಮರಾಯನನ್ನೂ ಅವನ ಬಳಿಯಲ್ಲಿರುವ ಕೃಷ್ಣರಾಯನನ್ನೂ ಹಿಡಿದು ತರಲು ಆದ ಅಪ್ಪಣೆಯಂತೆ ರಾಮರಾಯನು ಸಿಗದ್ದರಿಂದ ಕೃಷ್ಣರಾಯನ ಶೋಧಮಾಡುವಾ ಎಂದು ಆತನನ್ನು ಹುಡುಕಾಡಲು ಹೊರಡಬೇಕೆನ್ನುವದರೊಳಗಾಗಿ ಈ ಇಬ್ಬರು (ಗೋವಿಂದರಾಯ ಹಾಗೂ ಕೃಷ್ಣರಾಯರ ಕಡೆಗೆ ಕೈ ಮಾಡಿ) ತಂದೆ ಮಕ್ಕಳು ಸ್ವಸಂತೋಷದಿಂದ ತಾವಾಗಿಯೇ ನಮ್ಮೆಡೆಗೆ ಬಂದರು. ಈ ಚಿಕ್ಕ ಬಾಲಕನೇ ಕೃಷ್ಣರಾಯನು. ರಾಮರಾಯನ ಬಳಿಯಲ್ಲಿರುತ್ತಿದ್ದವನು ಈತನೇ ರಾಮರಾಯನು ಈ ಕೃಷ್ಣರಾಯನನ್ನು ಅಡವಿಯಲ್ಲಿ ಬಿಟ್ಟು ಹೋದಬಳಿಕ, ಅರಣ್ಯದಲ್ಲಿ ಅಳುತ್ತ ಕುಳಿತ ಈ ಬಾಲಕನನ್ನು ಒಬ್ಬನು ತನ್ನ ಊರಿಗೆ ಕರೆದುಕೊಂಡು ಬಂದನು. ಇವನ ತಂದೆ ಗೋವಿಂದರಾಯರು ಅದೇ ಊರಲ್ಲಿರುತ್ತಿದ್ದರು. ಇವನನ್ನು ಕಂಡೊಡನೆ ತಮ್ಮ ಮಗನೆಂದು ಗುರುತಿಸಿ ಮನೆಗೆ ಕರೆದೊಯ್ದರು. ಈ ಮಾತು ನಿಜವೆಂದು ಅಲ್ಲಿಯ ಜನರೂ ಸಾಕ್ಷಿಯ ಹೇಳಿದರು. ಇವರು ನಿರ್ದೋಷಿಗಳು ಆದದರಿಂದಲೇ ತಾವಾಗಿ ನಮ್ಮ ಸ್ವಾಧೀನವಾದರು. ನಾನು ಇದನ್ನು ಚನ್ನಾಗಿ ಪರೀಕ್ಷಿಸಬೇಕೆಂದು ನಿಶ್ಚಯಿಸಿ ಹಳ್ಳಿಯ ಚಿಕ್ಕ ಬಾಲಕರಿಗೆ ಬೆಂಡು ಬತ್ತಾಸಗಳನ್ನು ಕೊಟ್ಟು ರಮಿಸಿ ಕೇಳಿದೆನು. ಆ ಎಳೆ ಮಕ್ಕಳೆಲ್ಲರೂ ಹೀಗೆಯೇ ಹೇಳಿದರು. ಆದುದರಿಂದ ಇವರೀರ್ವರು ನಿರ್ದೋಷಿಗಳೆಂದು ನಾನು ಧೈರ್ಯದಿಂದ ತಮ್ಮ ಸಮ್ಮುಖದಲ್ಲಿ ಅರಿಕೆ ಮಾಡಿಕೊಳ್ಳುವೆನು! ಗೋವಿಂದರಾಯನಿಗೆ ರಾಮರಾಯನ ಭೆಟ್ಟಿಯೇ ಆಗಿಲ್ಲ. ಇದು ಸತ್ಯವು. ಇನ್ನು ಈ ಹುಡುಗನ ಮುಖದಿಂದ ರಾಮರಾಯನ ವಿಷಯವಾಗಿ ಏನಾದರೂ ಕೇಳಿ ತಿಳಿದುಕೊಳ್ಳಬೇಕೆಂದು ತಮ್ಮ ಇಚ್ಛೆಯಿದ್ದರೆ, ಕೇಳಿಕೊಳ್ಳಿರಿ. ಆತನೂ ಉತ್ತರ ಕೊಡಬಲ್ಲನು ತಾವು ಬಾಲಕನ ಭಾಷಣವನ್ನು ಕೇಳಿ ಆನಂದಭರಿತರಾಗುವಿರೆಂದೇ ತಿಳಿದು ಇವರಿಬ್ಬರನ್ನು ಇಲ್ಲಿಯ ವರೆಗೆ ಕರೆತಂದುದು!" ಎಂದು ತನ್ನ ಸ್ವಷ್ಟಾಭಿಪ್ರಾಯವನ್ನು ಹೇಳಿದನು. ಅವನನ್ನು ಹಿಡಿದು ತಂದ ಅಧಿಕಾರಿಯ ಈ ತರದ ಭಾಷಣವನ್ನು ಕೇಳಿದೊಡನೆ 'ಗೋವಿಂದರಾಯನು ನಿರ್ದೋಷಿಯಾಗಿರುವನೆಂದು" ಸಾಹೇಬನಿಗೆ ಮನವರಿಕೆಯಾಯಿತು. ಬಾಲಕನ ಮಧುರ ಭಾಷಣವನ್ನು ಕೇಳಬೇಕೆಂದು ಬಯಸಿ ಕೃಷ್ಣರಾಯನನ್ನು ತನ್ನ ಬಳಿಯಲ್ಲಿ ಕರೆದುಕೊಂಡು ಪ್ರೇಮದಿಂದ ಬೆನ್ನ ಮೇಲೆ ಕೈಯಾಡಿಸಿ "ಬಾಳಾ, ನಿನಗೆ ರಾಮರಾಯನ ಪರಿಚಯವಿರುವದೇನು?" ಎಂದು ಕೇಳಿದನು. ಆಗ ಬಾಲಕನು ತುಸುವಾದರೂ ಬೆದರದೆ ಚಪಲತೆಯಿಂದ "ಸಾಹೇಬರೇ, ನಾನು ನನ್ನ ವಯಸ್ಸಿನ ಐನೆಯ ವರುಷದಿಂದಲೂ, ರಾಮರಾಯನ ಹತ್ತರವೇ ಇರುತ್ತಿದ್ದೆನೆಂದ ಬಳಿಕ ನನಗೆ ಅವನ ಪರಿಚಯವಿರ

ದೇನು ಮಾಡೀತು? ಅವನನ್ನು ಚೆನ್ನಾಗಿ ಬಲ್ಲೆನು ' ಎಂದು ಮುದ್ದಾಗಿ ಉತ್ತರ ವಿತ್ತುದನ್ನು ಕಂಡು ' ಹೀಗಿದ್ದ ಬಳಿಕ ಮಗೂ, ರಾಮರಾಯನು ನಿನ್ನನ್ನು ನಿನ್ನ ತಂದೆಗೆ ಯಾವಾಗ ಒಪ್ಪಿಸಿದನು? ಹೇಳು ನೋಡೋಣ? ' ಎಂದು ಮತ್ತೆ ಪ್ರಶ್ನೆ ಮಾಡಿದನು. ಬಾಲಕನು ತಟ್ಟನೆ- ' ಸಾಹೇಬರೇ, ರಾಮರಾಯನು ನನ್ನನ್ನು ಅಪ್ಪನ ಬಳಿಗೆ ಕಳಿಸಿವನೆಂದು ತಿಳಿದಿರುವಿರೇನು ನೀವು? ಇಲ್ಲ! ಅತನು ನನ್ನನ್ನು ಅಡವಿಯಲ್ಲಿ ಕೂಡ್ರಿಸಿ ' ಕೃಷ್ಣರಾಯಾ, ನಿನಗೆ ತಿನ್ನಲಿಕ್ಕೆ ಬೆಂಡು ಬತ್ತಾಸ ತಕ್ಕೊಂಡು ಈಗ ಬರುವೆನು! ಇಲ್ಲಿಯೇ ಕುಳಿತಿರು ! ಎಂದು ರಮಿಸಿ ನನ್ನನ್ನು ಬಿಟ್ಟು ಹೋದವನು ತಿರುಗಿ ಬರಲಿಲ್ಲ ಕಟ್ಟಡವಿಯಲ್ಲಿ ನನಗೊಬ್ಬನಿಗೇ ಭಯ ವಾಗುತ್ತಿತ್ತು. ಅದರಲ್ಲಿ ಆತನು ತಿರುಗಿ ಬಾರದ್ದರಿಂದ ಭಯವು ಮತ್ತಿಷ್ಟು ಹೆಚ್ಚಾಯಿತು ! ಮೆಲ್ಲನೆ ಸೂರ್ಯಾಸ್ತವಾಯಿತು. ಕತ್ತಲೆಯು ಸುತ್ತಲೂ ಪಸ ರಿಸತೊಡಗಿತು. ಆಗ ನಾನು ಭಯಭೀತನಾಗಿ ದೊಡ್ಡ ದನಿಯಿಂದ ಅಳಬೇ ಕೆಂಬ ವಿಚಾರದಲ್ಲಿದ್ದೆನು. ಅಷ್ಟರಲ್ಲಿ ಕುರಿಗಳನ್ನಟ್ಟಿಕೊಂಡು ಮನೆಯ ಕಡೆಗೆ ಸಾಗಿದ ಒಬ್ಬ ಕುರುಬನು ನನ್ನನ್ನು ಕಂಡು– " ಬಾ, ಬಾಳಾ, ನಿನಗೆ ರಾಮರಾ ರಾಯನ ಭೆಟ್ಟಿಯನ್ನು ಮಾಡಿಸುವೆ"ನೆಂದು ಹೇಳಿ ನನ್ನನ್ನು ಊರಿಗೆ ಕರೆ ತಂದನು. ಅಲ್ಲಿಯೇ ನನ್ನ ಅಪ್ಪನೂ ಅವ್ವನೂ ಇದ್ದರು ಅವರು ನನ್ನನ್ನು ಗುರು ತಿಸಿ ಕರೆದುಕೊಂಡು ಹೋದರು " ಎಂದು ಸವಿಸ್ತರವಾಗಿ ಹೇಳಿದನು.

ಕೃಷ್ಣರಾಯನ ಅಸ್ಖಲಿತವಾದ ಮತ್ತು ದಿಟ್ಟತನದ ಮಾತುಗಳನ್ನು ಕೇಳಿ ನ್ಯಾಯಾಧಿಪತಿಗೆ ಅತ್ಯಾಶ್ಚರ್ಯವಾಯಿತು ! ಅದರಂತೆಯೇ ಆನಂದವೂ ಆಯಿತು. ತರಳನ ಮುದ್ದು ಭಾಷಣವನ್ನು ಇನ್ನಿಷ್ಟು ಕೇಳಬೇಕೆಂದಿನಿಸಿತು. ಆಗ ಆತನು " ಎಲೋ ಹುಡುಗಾ, ಮೈಮೇಲಿನ ಆಭರಣಗಳನ್ನಾರು ಕೊಟ್ಟರು ನಿನಗೆ? " ಎಂದು ಪ್ರಶ್ನೆಮಾಡಿದನು. ಅದಕ್ಕೆ ಆ ಹುಡುಗನು '' ಸಾಹೇಬರೇ, ಕೆಲವು ಗಳನ್ನು ರಾಮರಾಯನೂ ಕೆಲವುಗಳನ್ನು ಭಾಸ್ಕರರಾಯನೂ, ಮತ್ತು ಅವನ ಹೆಂಡತಿಯೂ ನನಗೆ ಕೊಟ್ಟಿದ್ದಾರೆ. ಆದರೆ ಒಂದು ದಿವಸ ಸುಮಾರು ಎರಡು ಪ್ರಹರ ರಾತ್ರಿಯಾಗಿರಬಹುದು. ರಾಮರಾಯನೂ ಆವನ ಹೆಂಡತಿಯೂ ನಾನೂ ಕೂಡಿಕೊಂಡು ಅರಣ್ಯದಲ್ಲಿದ್ದೆವು. ಆಗ ರಾಮರಾಯನ ಹೆಂಡತಿಯು ರಾಮ ರಾಯನ ಕಿವಿಯಲ್ಲಿ ಏನನ್ನೋ ಹೇಳಿದಳು. ಬಳಿಕ ರಾಮರಾಯನು ಸಿಟ್ಟಿಗೆ ದ್ದವನಂತೆ ಮಾಡಿ ನನಗೆ– " ಬಾಳಾ, ನಾವು ಅಡ್ಡಾಡಲಿಕ್ಕೆ ಹೋಗುವಾ ಹ! ನಿನಗೆ ತಿನ್ನುವದಕ್ಕೆ ಏನಾದರೂ ತಕ್ಕೊಂಡು ಬರುತ್ತೇನೆ. ಈಗ! " ಎಂದು ನನ್ನನ್ನು ಬೇರೆ ಸ್ಥಳಕ್ಕೆ ಕರೆದೊಯ್ದು ಅಲ್ಲಿ ಕೂಡ್ರಿಸಿ ಹೊರಟು ಹೋದನು. ತಿರುಗಿ ಬರಲೇ ಇಲ್ಲ ಎಂದು ಮತ್ತೆ! '' ಉತ್ತರವಿತ್ತನು. ಬಾಲಕನು ಹೇಳುವದೆ ಲ್ಲವೂ ನಿಜವಿರುವದೆಂತೂ ಆತನಿಗೆ ಅನಿಸಿತು. ಮತ್ತು ಕೃಷ್ಣರಾಯನ ಮೇಲೆ

ದಯತೋರಿಸುವನೆಂದು ಸಾಹೇಬನ ಮುಖಲಕ್ಷಣದ ಮೇಲಿಂದಲೇ ಜನರು ತಿಳಿದರು.

ಆ ಮೇಲೆ ಸಾಹೇಬನು ಗೋವಿಂದರಾಯನಿಗೆ ತಿರುವುಮುರುವು ಪ್ರಶ್ನಗಳನ್ನು ಮಾಡಿ ರಾಮರಾಯ ಹಾಗೂ ರಾಘೋಪಂತ ಇವರ ವಿಷಯವನ್ನು ಅರಿತುಕೊಳ್ಳಲು ಪ್ರಯತ್ನಿಸಿದನು. ಅವರ ವಿಷಯವನ್ನು ಅರಿಯದ ಗೋವಿಂದರಾಯನು ಹೇಳುವನಾದರೂ ಏನನ್ನು? ಅವರ ವಿಷಯವೇನೂ ಈತನಿಗೆ ಗೊತ್ತಿಲ್ಲವೆಂದು ನ್ಯಾಯಾಧೀಕಾರಿಗೆ ತಿಳಿದು ಹೋಯಿತು. ಆದರೂ ಪ್ರಯತ್ನಿಸದೇ ಬಿಡಬಾರದೆಂದು ತಿಳಿದು ಆ ಆಂಗ್ಲ ಅಧಿಕಾರಿಯು ಗೋವಿಂದರಾಯನಿಗೆ— "ನೀವು ರಾಮರಾವ ಹಾಗೂ ರಾಘೋಪಂತ ಇವರ ಶೋಧವನ್ನು ಮಾಡಿ ಅವರನ್ನು ನಮಗೆ ಹಿಡಿದು ಕೊಟ್ಟರೆ ನಿಮಗೆ ನಾವು ಉಂಬಳಿ ಹಾಕಿಕೊಡುವೆವು. ಅದನ್ನು ನಿಮ್ಮ ವಂಶಪರಂಪರೆಯಾಗಿ ನಡೆಯಿಸುವೆವು!" ಎಂದು ಹೇಳಿದನು. ಅದಕ್ಕೆ ಗೋವಿಂದರಾಯನು ಸರಕಾರ, ದೇವರ ಅನುಗ್ರಹದಿಂದ ನಮಗೀಗ ಇದ್ದ ಉಂಬಳಿಯೇ ಹೆಚ್ಚಾಗಿದೆ. ಈ ಉಂಬಳಿಯ ಉಪಭೋಗ ಮಾಡಲು ಯಾರೂ ಉಳಿಯಲಿಲ್ಲ. ಅಂದಮೇಲೆ ನಿಮ್ಮ ಉಂಬಳಿಯ ಆಶೆಯೇ ನನಗಿಲ್ಲ! ನನಗೆ ಗೊತ್ತಿದ್ದರೆ ಹೇಳಿಬಿಡುತ್ತಿದ್ದೆನು. ಅರಿಯದ್ದನ್ನು ಏನು ಹೇಳಲಿ? ಬಂಡಾಯದ ಗೊಂದಲದಲ್ಲಿ ಯಾರಾರು ಎತ್ತೆತ್ತ ಹೋದರೆಂಬದು ನನಗೆ ಗೊತ್ತಿಲ್ಲ. ಎರಡು ಮಕ್ಕಳು ನನ್ನ ಹೆಂಡತಿ ಇವರನ್ನು ಕರಕೊಂಡು ಹೋಗಬೇಕಾದರೆ ನನಗೆ ಸಾಕಾಗಿ ಹೋಯಿತು! ಉಳಿದ ನನ್ನ ಅಣ್ಣತಮ್ಮಂದಿರ ಸುದ್ದಿಯೇ ಇಲ್ಲ! ಈ ಕೃಷ್ಣರಾಯನು ಕುರುಬನೊಡನೆ ನಮ್ಮೂರಿಗೆ ಬಂದನೆಂದೇ ದೊರೆಕಿದನು. ಪುತ್ರದರ್ಶನವಾದುದು ನಮ್ಮ ಪೂರ್ವಜನ್ಮದ ಪುಣ್ಯವೆಂದೇ ಹೇಳಬಹುದು!

ಗೋವಿಂದರಾಯನ ಈ ತರದ ಸಾತ್ವಿಕ ಭಾಷಣವನ್ನು ಕೇಳಿದೊಡನೆಯೇ ಈತನು ನಿರ್ದೋಷಿಯಿರುವನೆಂಬುದು ಆ ಬ್ರಿಟಿಶ ಅಧಿಕಾರಿಗೆ ತಿಳಿಯಿತು. ಬಳಿಕ ಆತನು ರಾಮರಾಯನ ಕಠೋರ ಕೃತಿಯ ಬಗ್ಗೆ ರೋಷವನ್ನು ವ್ಯಕ್ತಪಡಿಸಿ ಕಚೇರಿಯಲ್ಲಿಯ ಎಲ್ಲ ಜನರಿಗೂ ಕೇಳಬರುವಂತೆ ಈ ಇಬ್ಬರು ತಂದೆಮಕ್ಕಳು ನಿರಪರಾಧಿಗಳಿರುವರು. ಯಾವದೇ ರೀತಿಯಿಂದಾಗಲಿ ಇವರು ದೋಷಿಗಳೆಂದು ಹೇಳಲಿಕ್ಕೆ ಬರುವಂತಿಲ್ಲ. ಈ ಬಾಲಕನು ಜಾಣನೂ ಸುಂದರನೂ ಸಮಯೋಚಿತ ಭಾಷಣಮಾಡುವವನೂ ಆಗಿರುವನು. ಅಂತೇ ರಾಮರಾಯನು ಇವನನ್ನು ತನ್ನ ಬಳಿಯಲ್ಲಿ ಇಟ್ಟುಕೊಂಡಿರಬೇಕು. ಮತ್ತು ಈ ಬೆಲೆಯುಳ್ಳ ಒಡವೆಗಳನ್ನು ಇವನಿಗೆ ಕೊಟ್ಟಿದ್ದರ ಕಾರಣವಾದರೂ ಇದೇ ಇರಲಿಕ್ಕೆ ಬೇಕು ಆದರೆ ರಾಮರಾಯನು ಎಷ್ಟು ಅವಿಚಾರಿಯು ನೋಡಿರಿ! ಬಂಡಾಯದ ಗೊಂದ

ಲವಲ್ಲಿ ತಾನು. ಓಡಿಹೋಗುವಾಗ ಈ ಬಾಲಕನನ್ನು ಇವನ ತಂದೆ ತಾಯಿಗಳಿಗೆ ಮುಟ್ಟಿಸಿ ಹೋಗಬೇಕಾಗಿತ್ತು. ಹಾಗೆ ಮಾಡದೆ ಆಭರಣಗಳನ್ನಿಟ್ಟುಕೊಂಡ ಈ ಹುಡುಗಗನ್ನು ಅಡವಿಯಲ್ಲಿ ಬಿಟ್ಟು ಓಡಿಹೋದನು. ಅಲಂಕಾರಗಳ ಆಶೆ ಯಿಂದ ಯಾರಾದರೂ ನೀಚರು ಆ ಕಟ್ಟಡವಿಯಲ್ಲಿ ಇವನಿಗೆ ಏನಾದರೂ ಕೆಟ್ಟದು ಮಾಡಿದ್ದರೆ, ಇವನ ಇವನ ತಂದೆತಾಯಿಗಳಿಗೆಷ್ಟು ವ್ಯಥೆಯಾಗುತ್ತಿತ್ತೆಂಬದನ್ನು ನೀವೇ ವಿಚಾರಿಸಿರಿ! ಆದರೆ ಇದರಲ್ಲೆಲ್ಲ ಆ ಕಠೋರನಿಗೇನು! ಈ ಎಳೆಗೂಸಿನ ಜೀವಕ್ಕಿಂತಲೂ ಆ ರಾಮರಾಯನಿಗೆ ತನ್ನ ಹಾಗೂ ತನ್ನ ಹೆಂಡತಿಯ ಜೀವಗಳು ಬಹು ಮಹತ್ವದಾಗಿ ತೋರಿದವು! ಇಂತಹ ಅಧಮನಿಗೆ ಧಿಃಕಾರವಿರಲಿ! ಗೋವಿಂದರಾಯರೇ, ನಿಮ್ಮ ಸುದೈವದಿಂದಲೇ ನಿಮ್ಮ ಮಗನು ತಿರುಗಿ ನಿಮ್ಮ ಕೈಸೇರಿದನು. ಇದಕ್ಕಾಗಿ ದೇವರಿಗೆ ನೀವು ಅತ್ಯಂತ ಕೃತಜ್ಞರಾಗಿರತಕ್ಕದ್ದು. ಮತ್ತು ಇನ್ನು ಮೇಲೆ ಈ ಹುಡುಗನನ್ನು ಬಿಟ್ಟಿರಬೇಡಿರಿ. ಈತನನ್ನು ನಮ್ಮ ಬಳಿಯಲ್ಲಿಡಬೇಕೆಂದು ನಿಮಗೆ ಅನಿಸಿದರೆ ನಾವು ಇವನನ್ನು ನಮ್ಮಲ್ಲಿಟ್ಟುಕೊಳ್ಳಲು ಸಿದ್ಧರಿರುವೆವು ಈತನು ಒಳ್ಳೆಯ ತಿಳುವಳಿಕೆಯುಳ್ಳವನಿದ್ದಾನೆ. ಇದಕ್ಕೂ ತುಸು ದೊಡ್ಡವನಿದ್ದರೆ ಎಲ್ಲಿಯಾದರೂ ನಿಯಮಿಸಿಕೊಳ್ಳುತ್ತಿದ್ದೆವು. ಆದರೂ ಅಡ್ಡಿಯಿಲ್ಲ ಇವನು ನಮ್ಮ ಬಳಿಯಲ್ಲಿಯೇ ಇರಲಿ, ನಾವು ಇವನನ್ನು ಸುಶಿಕ್ಷಿತನನ್ನಾಗಿ ಮಾಡಿ ದೊಡ್ಡ ಅಧಿಕಾರಿಯನ್ನಾಗಿ ಮಾಡುವೆವು." ಎಂದು ನುಡಿದನು.

ಹೀಗೆ ಭಾಷಣ ಮಾಡುತ್ತಿರಲು ಸಾಹೇಬನು ಕೃಷ್ಣರಾಯನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರೇಮಾತಿಶಯದಿಂದ ಆತನ ಬೆನ್ನ ಮೇಲೆ ಕೈಯಾಡಿಸುತ್ತಲಿದ್ದನು. ಏನೋ ನೆನಪು ಮಾಡಿಕೊಂಡವನಂತೆ ಮಾಡಿ ಮತ್ತೆ ಸಾಹೇಬನು "ನೀವು ನಿರ್ದೋಷಿಗಳಾದದರಿಂದ, ನಿಮ್ಮ ಮನೆಯಲ್ಲಿ ಬಂದು ಇರಲು ಬೆದರುವ ಕಾರಣವಿಲ್ಲ! ಬ್ರಿಟಿಶ್ ಪ್ರಜೆಗಳಲ್ಲಿಯ ಮಾನವಂತ ಕುಟುಂಬದವರೆಂದು" ತಿಳಿದುಕೊಂಡು ಮೊದಲಿನ ನಿಮ್ಮ ಉಂಬಳಿಯ ಭೂಮಿಯನ್ನು ಪಭೋಗ ಮಾಡುತ್ತ ಆನಂದದಿಂದ ಇಲ್ಲಿಯೇ ಕಾಲಹರಣ ಮಾಡಿರಿ. ಭಾಸ್ಕರರಾಯನಿಂದ ಉಂಬಳಿಗಳನ್ನು ದೊರಕಿಸಿದವರಿಗೆ ಮಾತ್ರ ಉಂಬಳಿಗಳು ನಡೆಸಲ್ಪಡಲಾರವು. ಪಿತ್ರಾರ್ಜಿತ ಇಲ್ಲವೆ ಪೂರ್ವಾರ್ಜಿತ ಆಸ್ತಿಯು ಯಾರದೋ ಅವರಿಗೇ ನಡೆಸಲ್ಪಡುವದು. ಈ ವಿಷಯದಲ್ಲಿ ಸರಕಾರದವರು ಏನೂ ಕೈಹಾಕುವದಿಲ್ಲ. ಈ ಕೃಷ್ಣರಾಯನು ಬಹು ಜಾಣನಿರುವನು. ಈ ದೇಶಕ್ಕೆ ಬಂದಾಗಿನಿಂದಲೂ ವಿಶೇಷವಾಗಿ ಈ ಕಾರ್ಯದ ಮೇಲೆ ನಿಯಮಿಸಲ್ಪಟ್ಟಾಗಿನಿಂದಲೂ ನಾನು ಅನೇಕ ಹುಡುಗರನ್ನು ನೋಡಿದ್ದೇನೆ. ವಿಶೇಷವೇಕೆ ನಿಮ್ಮ ಬಂಧುವಾದ ರಾಘೋಪಂತನ ಎರಡೂ ಮಕ್ಕಳನ್ನು ನೋಡಿದ್ದೇನೆ ಆದರೆ ಈ ನಿಮ್ಮ ಮಗನಷ್ಟು ಬುದ್ಧಿವಂತ ಹುಡುಗನನ್ನು ನಾನಿದುವರೆಗೂ ನೋಡಲಿಲ್ಲ.

ಹುಡುಗರು ಜಾಣರಾಗಲೀ ದಡ್ಡರಾಗಲೀ ಆಗುವದು ಅವರ ತಂದೆತಾಯಿಗಳು ಅವರಿಗೆ ಕೊಡುವ ಶಿಕ್ಷಣವನ್ನೇ ಅವಲಂಬಿಸಿರುತ್ತದೆ. ನೀವೇ ಈ ಕೃಷ್ಣರಾಯನು ನಮ್ಮ ಬಳಿಯಲ್ಲಿರಬೇಕೆಂದು ನಮ್ಮ ಉತ್ಕಟವಾದ ಇಚ್ಛೆಯಿದೆ ಎಂದು ಮೊದಲಾದ ಭಾಷಣಗಳನ್ನು ಮಾಡಿ ಕೃಷ್ಣರಾಯನಿಗೆ-" ಮಗೂ, ನಿನಗೇನು ಬೇಕೋ ಹೇಳು!" ಎಂದು ಕೇಳಿದೊಡನೆ ಬಾಲಕನು ಅಚ್ಛೆಯಿಂದ-" ಸಾಹೇಬರೇ, ನಿಮ್ಮ ಸಿಪಾಯಿಗಳ ಸಂಗಡ ನಾವು ನಿಮ್ಮ ಭೆಟ್ಟಿಗೆ ಇಲ್ಲಿಗೆ ಬರಲು ಹೊರಟೊಡನೆ ನಮ್ಮ ತಾಯಿಯು ಬಹುವಾಗಿ ದುಃಖಮಾಡುತ್ತಿದ್ದಳು. ನಾವು ತಿರುಗಿ ಹೋದ ಹೊರತು ಅವಳ ದುಃಖವು ಶಾಂತವಾಗುವದಿಲ್ಲ. ಆದದರಿಂದ ತಾವು ದಯಮಾಡಿ ನನ್ನ ತಾಯಿಯ ಬಳಿಗೆ ಹೋಗಲು ನಮಗೆ ಅಪ್ಪಣೆ ಪಾಲಿಸಬೇಕು. ಮತ್ತು ನಮ್ಮ ಆಪ್ತರಾರಾದರೂ ಇಲ್ಲಿಗೆ ನಿಮ್ಮಲ್ಲಿ ಬಂದರೆ ಅವರನ್ನು ತಾವು ಶಿಕ್ಷಿಸಬಾರದು. ಇದೇ ನನ್ನ ಬೇಡಿಕೆ!" ಎಂದು ನುಡಿದನು. ಹುಡುಗನು ಹೀಗೆ ಬಿನ್ನವಿಸಿಕೊಂಡುದನ್ನು ಕೇಳಿ ಆಶ್ಚರ್ಯಭರಿತನಾಗಿ, 'ಮಗೂ, ನಿನ್ನ ಇಚ್ಛೆಯಂತೆಯೇ ವರ್ತಿಸುವೆನು! ಆಯಿತೇ?' ಎಂದು ನುಡಿದು ಆತನ ಹಸ್ತಚುಂಬನ ಮಾಡಿ ಅವನನ್ನು ಗೋವಿಂದರಾಯರಿಗೊಪ್ಪಿಸಿ-'ರಾಯರೇ, ಬಂಡಾಯದ ಸಂಬಂಧವಾಗಿ ನಿಮಗಿನ್ನು ಯಾವ ತರದಿಂದಲೂ ಭಯವಿಲ್ಲ! ನಿಮ್ಮ ಮನೆಯವರೊಂದಿಗೆ ಈ ಊರಲ್ಲಿಯ ಮನೆಯಲ್ಲಿ ಸುಖವಾಗಿ ವಾಸಿಸಬೇಕೆಂದು ನಾವು ಮನಃಪೂರ್ವಕವಾಗಿ ಇಚ್ಛಿಸುತ್ತೇವೆ. ಇದರಿಂದ ನಿಮಗೆ ವಿಶೇಷ ಲಾಭವಾಗಬಹುದು!' ಎಂದು ನುಡಿದನು. ಅದಕ್ಕೆ ಗೋವಿಂದರಾಯನು-'ಸಾಹೇಬರೇ, ಮೊದಲು ನಾವು ನಮ್ಮ ನೂರು ಜನ ಸಂಬಂಧಿಕರನ್ನೊಡಗೊಂಡು ಯಾವ ಮನೆಯಲ್ಲಿ ವಾಸಿಸುತ್ತಿದ್ದೆವೋ, ಆ ಮನೆಯಲ್ಲಿ ನಾನೊಬ್ಬನೇ ಬಂದು ನಿಲ್ಲಲಾರೆನು! ಅದು ನನ್ನ ಮನಕ್ಕೆ ಯೋಗ್ಯವಾಗಿ ಕಾಣುವದಿಲ್ಲ! ಈಶ್ವರನ ಕೃಪೆಯಿಂದ ನಾವೆಲ್ಲರೂ ಮೊದಲಿನಂತೆ ಕೂಡಿದೆವೆಂದರೆ ಮಾತ್ರ ಇಲ್ಲಿಗೆ ಬರುವೆನು! ಇಲ್ಲದಿದ್ದರೆ ನಾವು ಈಗಿರುವ ಹಳ್ಳಿಯೇ ನೆಟ್ಟಗಿದೆ. ತಮ್ಮ ಕೃಪೆ ಮಾತ್ರ ನಮ್ಮ ಮೇಲೆ ಪೂರ್ಣವಾಗಿದ್ದರೆ ಸಾಕು. ಎಲ್ಲವೂ ಇದ್ದಂತಾಗುವದು!' ಎಂದೊಡನೆ ಸಾಹೇಬನು ಅವರನ್ನು ತಂದ ಸಿಪಾಯರಿಗೇ ಅವರನ್ನು ತಿರುಗಿ ಕಳಿಸಲು ಅಪ್ಪಣೆ ಮಾಡಿದನು. ಇದನ್ನು ಕೇಳಿ ಗೋವಿಂದರಾಯನಿಗೂ ಮುಖ್ಯವಾಗಿ ಸಭೆಗೆ ಬಂದ ಜನಸಮೂಹಕ್ಕೂ ವಿಶೇಷಾನಂದವಾಯಿತು.

ಬಳಿಕ ಗೋವಿಂದರಾಯನು ಕೃಷ್ಣರಾಯನೊಡನೆಯೂ ತನ್ನನ್ನು ಕಳಿಸಲು ಅಪ್ಪಣೆಯಾದ ಸಿಪಾಯಿಗಳೊಡನೆಯೂ ನ್ಯಾಯ ಸಭೆಯಿಂದ ಹೊರಬಿದ್ದನು. ಉಳಿದ ಪುರಜನವೂ ಅವರ ಹಿಂದೆಯೇ ಹೊರಟಿತು; ಕುಲಸ್ವಾಮಿಯಾದ ವೇಂಕಟಪತಿಗೆ ಲಘು ರುದ್ರವನ್ನು ಮಾಡಿಸುವ ವ್ಯವಸ್ಥೆಯನ್ನು ಮಾಡಿಸಿದನು. ಊರಲ್ಲೆಲ್ಲ ಪೇಡೆಗಳನ್ನು ಹಂಚಿಸಿ ಎಲ್ಲರ ಬಾಯಿ ಸಿಹಿಯಾಗುವಂತೆ ಮಾಡಿಸಿದನು.

ತನ್ನ ಮೇಲೆ ಬಂದ ಕಠಿಣ ಪ್ರಸಂಗದಲ್ಲಿ ತನಗೆ ಸಹಾಯ ಮಾಡಿದವರಿಗೆ ಪಾರಿತೋಷಕಗಳನ್ನು ಕೊಟ್ಟನು. ಬಳಿಕ ಎಲ್ಲರ ಅಪ್ಪಣೆ ಪಡೆದುಕೊಂಡು ಪತ್ನಿಯಾದ ಸತ್ಯಭಾಮಾಬಾಯಿಯು ಇದ್ದ ತನ್ನ ಹಳ್ಳಿಗೆ ಸಿಪಾಯಿರೊಂದಿಗೆ ಹೊರಟನು.

ಮುಂಜಾವಿನಿಂದಲೂ ಮಾರ್ಗಕ್ರಮಿಸುತ್ತಲಿದ್ದ ಗೋವಿಂದರಾಯರು ಇನ್ನೂ ನಾಲ್ಕು ಗಳಿಗೆ ಹೊತ್ತಿರುವಾಗಲೇ ತಮ್ಮ ಹಳ್ಳಿಗೆ ಬಂದು ತಲ್ಪಿದರು. ತಮ್ಮ ಊರಿಗೆ ಮತ್ತೆ ಸಿಪಾಯಿಗಳು ಬಂದುದನ್ನು ಕಂಡೊಡನೆ ಆ ಅಜ್ಞ ಜನರೆಲ್ಲ ಗಾಬರಿಯಾದರು. ಆದರೆ ಅಷ್ಟರಲ್ಲಿ ಅವರ ಹಿಂದೆಯೇ ಇದ್ದ ಗೋವಿಂದರಾಯ ಹಾಗು ಕೃಷ್ಣರಾಯ ಇವರನ್ನು ಕಂಡೊಡನೆ ಆವರೆಲ್ಲರ ಬೆದರಿಕೆಯು ದೂರವಾಯಿತು. ಸತ್ಯಭಾಮಾಬಾಯಿಯು ಪತಿ ಪುತ್ರರ ಮಾರ್ಗ ನಿರೀಕ್ಷಣೆಯನ್ನೇ ಮಾಡುತ್ತ ಕುಳಿತುಕೊಂಡಿದ್ದಳು ಕೃಷ್ಣರಾಯನು ಎಲ್ಲರಿಗಿಂತಲೂ ಮುಂದಾಗಿ ಓಡುತ್ತ ಹೋಗಿ ತಾಯಿಯ ಕೊರಳಿಗೆ ಮುತ್ತಿಗೆ ಹಾಕಿದನು. ಪಾಠಕರೇ ಆಗ ಅವಳಿಗಾದ ಆನಂದವನ್ನು ವರ್ಣಿಸುವದು ನಮಗಂತೂ ಅಸಾಧ್ಯವಾದ ಮಾತು! ಅದನ್ನು ಸ್ವಾನುಭವದಿಂದಲೇ ಅರಿಯಬೇಕಲ್ಲದೆ, ಬರೆಯುವದರಿಂದ ತಿಳಿಯಲಾರದು. ಹದಿನಾಲ್ಕು ವರ್ಷಗಳ ಮೇಲೆ ರಾಮಚಂದ್ರನನ್ನು ಕಂಡೊಡನೆ ಕೌಸಲ್ಯಾಮಾತೆಗೂ, ಬಹುಕಾಲದ ಮೇಲೆ ಸೆರೆಮನೆಯಲ್ಲಿ ಬಿದ್ದುಕೊಂಡಿದ್ದ ದೇವಕೀದೇವಿಗೆ ಕೃಷ್ಣನು ಭೆಟ್ಟಿಯಾದಾಗಲೂ ಆದಷ್ಟು ಆನಂದವು ಈಗ ಸತ್ಯಭಾಮಾಬಾಯಿಗೆ ಆಯಿತೆಂದು ಹೇಳಬಹುದು. ಅಷ್ಟರಲ್ಲಿ ಸಿಪಾಯರಿಂದ ಕೂಡಿಕೊಂಡು ಗೋವಿಂದರಾಯರೂ ಅಲ್ಲಿಗೆ ಬಂದರು. ಅದನ್ನು ಕಂಡು ಗೌರವಶೀಲಳಾದ ಸತ್ಯಭಾಮಾದೇವಿಯು ತೊಡೆಯ ಮೇಲಿದ್ದ ಮಗುವನ್ನು ಹೆಗಲಮೇಲೆತ್ತಿಕೊಂಡು ಒಳಕ್ಕೆ ಹೋದಳು. ಅವಳಿಗೆ ಅತ್ಯಾನಂದವಾಯಿತು !

ತನ್ನ ಹಾಗೂ ತನ್ನ ಪ್ರಿಯ ಮಗನ ಮೇಲೆ ಬಂದ ಸಂಕಟವು ಸುಲಭವಾಗಿ ಪಾರಾದುದಕ್ಕಾಗಿ ಗೋವಿಂದರಾಯನು ಮರುದಿನ ಪಂಚ ಪಕ್ವಾನ್ನದ ಅಡಿಗೆ ಮಾಡಿಸಿ ಬ್ರಹ್ಮವೃಂದಕ್ಕೆಲ್ಲ ಭೋಜನ ಹಾಕಿಸಿದನು. ತನ್ನೊಡನೆ ಬಂದ ಜನರಿಗೂ ಉತ್ತಮ ತರದ ಪ್ರಸ್ಥ ಮಾಡಿಸಿ ಕಳುಹಲು ಬಂದ ಸಿಪಾಯಿಗಳು ರಾಯರ ನಿರೋಪವನ್ನು ತಕ್ಕೊಂಡು ನರಗುಂದಕ್ಕೆ ಹೋದರು.

ಪತ್ನಿ ಪುತ್ರರು ನರಗುಂದದಿಂದ ಸುಖರೂಪವಾಗಿ ತಿರುಗಿ ಬರಲೆಂದು ದೇವರಿಗೆ ಅನೇಕ ಹರಿಕೆಗಳನ್ನು ಹೊತ್ತು ಸತ್ಯಭಾಮಾಬಾಯಿಯು ಮರುದಿನದಿಂದ ಒಂದೊಂದಾಗಿ ಎಲ್ಲವನ್ನೂ ತೀರಿಸಹತ್ತಿದಳು. ಹರಕೆಗಳೆಲ್ಲ ಮುಗಿಯುವವರೆಗೂ ರಾಯರ ಮನೆಯಲ್ಲಿ ಆನಂದವೇ ಆನಂದ ಅವೆಲ್ಲ ಮುಗಿದೊಡನೆ ತಾನು ದೇವರ ಋಣದಿಂದ ಇಂದು ಮುಕ್ತಳಾದೆನೆಂದು ಆ ಭಾವಿಕ ಸತಿಯು ತಿಳಿದುಕೊಂಡಳು!

# ೯ ನೆಯ ಪ್ರಕರಣ.



ಕೊಂಕಣದಲ್ಲಿಯ ಒಂದು ಹಳ್ಳಿಯೊಳಗೆ ಜಾನಕೀಬಾಯಿಯೆಂಬ ಸುಮಾರು ೩೦-೩೫ ವರ್ಷದ ಓರ್ವ ಬ್ರಾಹ್ಮಣ ಸ್ತ್ರೀಯು ಇರುತ್ತಿದ್ದಳು. ದಾರಿದ್ರ್ಯವು ಅವಳ ಮನೆಯಲ್ಲಿ ಮೂರ್ತಿಮತ್ತಾಗಿ ವಾಸವಾಗಿತ್ತು. "ಬಡತನಕ್ಕೆ ಮಕ್ಕಳು ಹೆಚ್ಚು" ಎಂಬ ಲೋಕರೂಢಿಗನುಸಾರವಾಗಿ ಪ್ರತಿ ವರುಷವೂ ಒಂದು ಕೂಸು ಅವಳಿಗೆ ತಪ್ಪದೇ ಹುಟ್ಟುವದು! ಮನೆತನದ ತಾಪಕ್ಕೆ ಬೆಂದು ಬೆಂಡಾದ ಅವಳ ಪತಿಯು ಓರ್ವ ಶ್ರೀಮಂತ ಆಪ್ತನ ಮನೆಯಲ್ಲಿ ಇರಹತ್ತಿದನು. ಇತ್ತ ಹೆಂಡತಿಯಾದರೂ ಮನೆಹಿಡಿದು ಕೂಡ್ರದೆ, ವಿಶೇಷವಾಗಿ ತನ್ನ ತಂದೆ, ಅಣ್ಣ, ತಮ್ಮ ಮೊದಲಾದ ತೌರು ಬಳಗದವರ ಗೃಹದಲ್ಲಿಯೇ ಕಾಲಕಳೆಯುತ್ತಿದ್ದಳು. ಅವರಲ್ಲಿ ಸಿಕ್ಕಷ್ಟು ದ್ರವ್ಯವನ್ನು ಸಂಪಾದಿಸಿಕೊಂಡು ಮನೆಗೆ ಬರುತ್ತಿದ್ದಳು. ಹೀಗೆಯೇ ಕೆಲಕಾಲ ಕ್ರಮಿಸಿದ ಬಳಿಕ ಇವಳ ಗಂಡನು ಉದರಪೋಷಣೆಗಾಗಿ ಆಶ್ರಯಿಸಿಕೊಂಡಿದ್ದ ಆ ಶ್ರೀಮಂತನಾದ ಆಪ್ತನ ಮೇಲೆ ಕಠಿಣ ಪ್ರಸಂಗವು ಬಂದೊದಗಿತು. ಆಗ ಆತನ ಕುಟುಂಬದವರು ತಮ್ಮ ಜೀವದ ಪರಿವೆಯನ್ನು ಸಹ ಮಾಡದೆ, ಈ ಜಾನಕೀಬಾಯಿಯ ಗಂಡನನ್ನು ದಾರಿದ್ರ್ಯದಿಂದ ಮುಕ್ತನನ್ನಾಗಿ ಮಾಡಲು ನಿಶ್ಚಯಿಸಿ ಉಪಾಯದಿಂದ ಆತನನ್ನು ಸಿರಿವಂತನನ್ನಾಗಿ ಮಾಡಿ ಮನೆಗೆ ತಿರುಗಿ ಕಳುಹಿಸಿಕೊಟ್ಟರು. ಜಾನಕೀಬಾಯಿಯ ಪತಿಯಾದ ಈ ಮನುಷ್ಯನು ಯಾರಾಗಿರಬಹುದೆಂದು ತಿಳಿದುಕೊಳ್ಳಲು ವಾಚಕರು ಉತ್ಸುಕರಾಗಿರಬಹುದು. ಅವರ ಉತ್ಸುಕತೆಗೆ ಭಂಗ ಬರಬಾರದೆಂದು ತಿಳಿದು ಅವರಾರೆಂಬದನ್ನು ಇಲ್ಲಿಯೇ ಹೇಳಿಬಿಡುವೆವು.

ಜಾನಕೀಬಾಯಿಯ ಪತಿಯೆಂದರೆ ನರಗುಂದದ ಯಜಮಾನನಾದ ರಾಮರಾಯನ ತಾಯಿಯಾದ ಯಮುನಾಬಾಯಿಯ ದೂರದ ಆಪ್ತನೆಂದು ಹೇಳುತ್ತಿದ್ದ ಹಾಗೂ ಅತ್ತೆಸೊಸೆಯರೊಡನೆ ಮಲಾಪಹಾರಿಯ ನದಿಯ ವರೆಗೆ ಸಂಗಡಿಗನಾಗಿ ಹೋದ ರಾಮಚಂದ್ರನು. ಹಿಂದೆ ಏಳನೆಯ ಪ್ರಕರಣದಲ್ಲಿ ಹೇಳಿದಂತೆ 'ಒಮ್ಮೆಲೇ ಸುಮಾರು ಇಪ್ಪತ್ತು ಸಾವಿರ ರೂಪಾಯಿಗಳ ಬೆಲೆಬಾಳುವ ಚಿನ್ನ ವಜ್ರದೊಡವೆಗಳು ದೊರೆತುದರಿಂದ ರಾಮಚಂದ್ರನು ಒಳ್ಳೇ ಆನಂದದಲ್ಲಿ ಮುಳುಗಿದನು. ದಾರಿಯಗುಂಟ ಹೋಗುವಾಗ ತನ್ನ ಮನದಲ್ಲಿ "ಇನ್ನು ಮುಂದೇನು ಮಾಡಬೇಕು! ನಾನಂತೂ ಈಗ ಶ್ರೀಮಂತನಾದೆನು. ಆದರೆ ಈ ಸಿರಿವಂತಿಕೆಯು ನನಗೆ ಕಡೆತನಕ ಉಳಿಯುವದೋ ಇಲ್ಲವೋ ? ಇವೇ ಮೊದಲಾದ ವಿಚಾರಗಳನ್ನು ಮಾಡುತ್ತಿದ್ದನು. ನಾನೀಗ ತಕ್ಕೊಂಡು

ಬಂದ ಈ ಗಂಟಿನಲ್ಲಿರುವ ಒಡವೆಗಳಾದರೂ ಯಾವವು. ಅವನ್ನೊಮ್ಮೆ ಚೆನ್ನಾಗಿ ನೋಡಿಯಾದರೂ ನೋಡೋಣ ಎಂಬ ವಿಚಾರವು ಅವನ ಮನದಲ್ಲಿ ಬಂದೊಡನೆಯೇ ಸುತ್ತಲೂ ಒಮ್ಮೆ ಸೂಕ್ಷ್ಮವಾಗಿ ನಿರೀಕ್ಷಿಸಿದನು. ಯಾರೂ ಇಲ್ಲವೆಂದು ಮನಕ್ಕೆ ವಿಶ್ವಾಸವಾದ ಬಳಿಕ ಘೋತರದ ಗಂಟನ್ನು ಕೆಳಗಿಟ್ಟು ಅದನ್ನು ಬಿಚ್ಚಿ ಒಂದೊಂದೇ ಆಭರಣವನ್ನು ಕೈಯಲ್ಲಿ ಹಿಡಿದುಕೊಂಡು ನೋಡ ಹತ್ತಿದನು. ಹೀಗೆ ನೋಡಹತ್ತಿದಂತೆ ಆತನ ಆನಂದವೂ ವೃದ್ಧಿಯಾಗತೊಡಗಿತು. ಆಜನ್ಮ ದರಿದ್ರನಾದ ರಾಮಚಂದ್ರನು ಮುತ್ತು ರತ್ನದ ಅಲಂಕಾರಗಳನ್ನು ಕಂಡು ಹುಚ್ಚಾಗಿ ಹೋದನು. ಬಲು ಬೆಲೆಯುಳ್ಳ ಈ ಒಡವೆಗಳನ್ನು ನನ್ನಂಥ ದರಿದ್ರನು ಮಾರುವದಕ್ಕೆ ಜನರು ಏನಾದರೂ ಸಂಶಯ ತೆಗೆದುಕೊಳ್ಳಬಹುದೆಂದು ಅನಿಸಿದ್ದರಿಂದ ಅಂಥವುಗಳನ್ನು ಬೇರೊಂದು ಗಂಟಿನಲ್ಲಿ ಕಟ್ಟಿದನು. ಸಣ್ಣವುಗಳನ್ನೇ ಆರಿಸಿಕೊಂಡು ಮತ್ತೊಂದು ಗಂಟಿನಲ್ಲಿ ಬಿಗಿದುಕೊಂಡನು. ಮತ್ತೊಮ್ಮೆ ಅವನ್ನೆಲ್ಲ ಸೂಕ್ಷ್ಮವಾಗಿ ಅವಲೋಕಿಸಿದನು. ದೇವರ ದಯದಿಂದ ಆ ಹೊತ್ತು ಆ ಮಾರ್ಗದಿಂದ ಯಾರೂ ಓಡಾಡುತ್ತಿದ್ದಿಲ್ಲವೆಂದೇ ನೆಟ್ಟಗಾಯಿತು. ಇಲ್ಲದಿದ್ದರೆ ರಾಮಚಂದ್ರನ ಸಿರಿವಂತಿಕೆಯು ಕ್ಷಣಭಂಗುರವಾಗಿ ಹೋಗುತ್ತಿತ್ತು! ಇರಲಿ. ಬಳಿಕ ಆತನು ಮೂರು ಮುದ್ರೆಯ ಉಂಗುರಗಳನ್ನೂ ಹಾಗೂ ಕೆಲ ಕಾಲುಂಗುರಗಳನ್ನೂ ಮಾರಿಕೊಂಡು ಮನೆಯ ಖರ್ಚಿಗಾಗಿ ಹಣದ ಸಂಗ್ರಹವನ್ನು ಮಾಡಬೇಕೆಂದು ನಿಶ್ಚಯಿಸಿದನು.

'ವ್ಯಾಪಾರವೆಂದರೆ ಒಂದು ಸತ್ಯಾನೃತವಾದ ಉದ್ಯೋಗವೆಂದು ಪೂರ್ವಕಾಲದ ಸುವಿಚಾರಿಗಳಾದ ಜನರು ಮೇಲಿಂದ ಮೇಲೆ ಅನ್ನುತ್ತಿದ್ದರು. ಸತ್ಯರೀತಿಯಿಂದ ವ್ಯಾಪಾರ ಮಾಡಿ ಧನವಂತರಾದವರು ಅತಿ ವಿರಳ. ಬಹುತರವಾಗಿ ಶ್ರೀಮಂತರಾದ ವ್ಯಾಪಾರಿಗಳು, ಒಂದಿಲ್ಲೊಂದು ಅವಿಶ್ವಾಸಕೃತಿಯಿಂದೇ ಎಂಬುದು ನಿಶ್ಚಯವು. ಬಂಡಾಯದ ಕಾಲದಲ್ಲಿ ಹವಳ, ಮುತ್ತು, ರತ್ನ, ಬೆಳ್ಳಿ ಬಂಗಾರ ಇವುಗಳನ್ನು ತೀರ ಕಡಿಮೆ ಬೆಲೆಗೆ ಸಂಗ್ರಹ ಮಾಡಿ ಶಾಂತತೆಯ ಕಾಲಕ್ಕೆ ಧನವಂತರಾದವರೂ ಅನೇಕರು. ಹೀಗೆ ಅಸತ್ಯದಿಂದ ಮುಂದಾದವರು ಎಲ್ಲ ಭಾಗಗಳಲ್ಲಿಯೂ ಇರುವರು. ಇರಲಿ! ರಾಮಚಂದ್ರನು ಅತ್ತೆ ಸೊಸೆಯರ ನಿರೋಪವನ್ನು ತಕ್ಕೊಂಡು ಹೊರಟವನು ದಾರಿಯಲ್ಲಿ ಹತ್ತಿದ ಒಂದು ದೊಡ್ಡ ಪಟ್ಟಣದಲ್ಲಿ ಕೆಲವು ಚಿಕ್ಕ ಪುಟ್ಟ ಆಭರಣಗಳನ್ನು ಮಾರಿ ೮೦೦ರೂ. ಗಳನ್ನು ದೊರಕಿಸಿದನು. ಅಷ್ಟು ಹಣ ನೋಡಿದೊಡನೆ ಅವನ ಕಣ್ಣುಗಳು ತಿರುಗಿ ಹೋದವು.

ಕೆಲವು ದಿವಸಗಳಾದ ಬಳಿಕ ರಾಮಚಂದ್ರನು ತನ್ನ ಊರಿಗೆ ಹೋಗಿ ಮುಟ್ಟಿದನು. ಆತನ ಹೆಂಡತಿಯು ತನ್ನ ಸ್ವಭಾವಕ್ಕನುಸರಿಸಿ ಗಂಡನೊಡನೆ

ಒಳ್ಳೆಯ ಆನಂದದಿಂದ ನಡೆದುಕೊಳ್ಳಹತ್ತಿದಳು. ಗಂಡನ ಬಳಿಯಲ್ಲಿದ್ದ ಹಣವನ್ನೆಲ್ಲ ಹರಣ ಮಾಡುವವರೆಗೆ ಹೀಗೆ ನಡೆದುಕೊಳ್ಳುವದೇ ಅವಳ ಸ್ವಭಾವವಾಗಿತ್ತು. ಅವನ ಬಳಿಯಲ್ಲಿಯ ಹಣವೆಲ್ಲ ತನ್ನ ಸ್ವಾಧೀನವಾದೊಡನೆ ಮತ್ತೆ ಗುರ್ರೆನ್ನುತ್ತಿದ್ದಳು. ರಾಮಚಂದ್ರನು ಮನೆಗೆ ಒಂದ ಬಳಿಕ ಒಂದು ದಿವಸ ಸತಿಪತಿಗಳಲ್ಲಿ ಭಾಷಣವಾಯಿತು. ಅದನ್ನು ಕೆಳಗೆ ಅವರ ಭಾಷೆಯಲ್ಲಿಯೇ ಬರೆಯುತ್ತೇವೆ. ಸಂಜೆಯ ಊಟ ಉಡಿಗೆಗಳೆಲ್ಲ ಮುಗಿದ ಬಳಿಕ, ಮಕ್ಕಳನ್ನೆಲ್ಲ ಮಲಗಿಸಿ, ದೀಪವನ್ನಾರಿಸಿ ಪತಿಯ ಬಳಿಯಲ್ಲಿ ಹೋದಳು. ಹಾಸಿಟ್ಟ ಹಾಸಿಗೆಯಲ್ಲಿ ಮಲಗಿಕೊಂಡು ರಾಮಚಂದ್ರನು ನಿದ್ರೆ ಹೋಗಿದ್ದನು ಅವರ ಸಂವಾದವನ್ನು ಬರೆಯುವ ಮೊದಲು ಜಾನಕೀಬಾಯಿಯ ಸ್ವಭಾವವನ್ನು ಹೇಳಿದರೆ ಅಪ್ರಾಸಂಗಿಕವಾಗಲಾರದು.

ಜಾನಕಿಬಾಯಿಯು ಒಳ್ಳೇ ಧನಲೋಭಿಯೂ ಮಕ್ಕಳೊಂದಿಗಳೂ ಆಗಿದ್ದಳೆಂಬುದನ್ನು ಈ ಮೊದಲೇ ಹಿಂದೊಮ್ಮೆ ಹೇಳಿದ್ದೇವೆ. ಇವಳಲ್ಲಿದ್ದ ಮತ್ತೊಂದು ವಿಶೇಷ ಗುಣವಾವುದೆಂದರೆ ಎರಡನೆಯ ಜನರು ತನ್ನ ಹೇಳಿಕೆಯಂತೆ ವರ್ತಿಸಬೇಕೆಂಬುದು. ಆದರೆ ಅವಳಲ್ಲಿ ಅಷ್ಟು ಜ್ಞಾನವೇ ಇರಲಿಲ್ಲ. ದ್ರವ್ಯ ಸಿಗುವದೆಂದು ಗೊತ್ತಾದರೆ ಅವಳು ಧರ್ಮ ಹಾಗೂ ದೇವರನ್ನು ತ್ಯಜಿಸಿ ಬಿಡಲು ಒಂಟಿಗಾಲಿನ ಮೇಲೆ ನಿಲ್ಲಲು ಸಿದ್ಧಳು. ಎರಡನೆಯವರಲ್ಲಿ ಯಾವದಾದರೊಂದು ಅಂದವಾದ ವಸ್ತುವು ಕಣ್ಣಿಗೆ ಬಿದ್ದರೆ ತೀರಿತು. ಅದು ನನಗೂ ಹೇಗೆ ಪ್ರಾಪ್ತವಾದೀತು ಎಂಬ ಶುಷ್ಕವಾದ ಚಿಂತೆಗಾರಂಭವಾಯಿತೆಂತಲೇ ತಿಳಿಯಬೇಕು. ಪತಿಯ ಮೇಲೆ ವಿಶೇಷವಾದ ಪ್ರೇಮ ಮಾಡುತ್ತಿದ್ದಿಲ್ಲ. ಅದೇಕೆ ಇದ್ದಿಲ್ಲವೆಂದೇ ಹೇಳಬಹುದು! ಆದರೂ ಆಶ್ರಯಕ್ಕಾಗಿಯೆಂದು ಅವನ ಮನೆಹಿಡಿದುಕೊಂಡು ವಾಸವಾಗಿದ್ದಳು! ವಾಚಕರೇ ಇಂಥ ಹೆಂಡತಿಯಿಂದ ಪತಿಯು ಅದಾವ ಸುಖವನ್ನು ಪಡೆಯುವದು! ಇರಲಿ ಅಂತೂ 'ಲೋಭವೂ ಹೋಗದು ಜಗಳವೂ ಮುಗಿಯದು!" ಎಂಬ ಗಾದೆಯ ಮಾತಿನಂತೆ, ಆ ಇಬ್ಬರೂ ಗಂಡಹೆಂಡಿರ ಸ್ಥಿತಿಯಾಗಿತ್ತು. ಸವಿಮಾತುಗಳನ್ನಾಡಿ ಗಂಡನ ಬಳಿಯಲ್ಲಿದ್ದಷ್ಟು ಹಣವನ್ನು ಹರಣಮಾಡದೆ ಅವಳು ಎಂದೂ ಸುಮ್ಮನಿರುತ್ತಿದ್ದಿಲ್ಲ. ಹೀಗಿದ್ದುದರಿಂದಲೇ ರಾಮಚಂದ್ರನು ಮನೆಯಲ್ಲಿ ಕಾಲಿಟ್ಟೊಡನೆ ಏಳುನೂರು ರೂಪಾಯಿಗಳನ್ನೂ ಹಲವು ಅರಿವೆ ಅಂಚಡಿಗಳನ್ನೂ ಅವಳ ವಶಕ್ಕೆ ಕೊಟ್ಟಿದ್ದರೂ, ಆ ಲೋಭಿಯಾದ ಜಾನಕೀಬಾಯಿಗೆ ಇನ್ನೂ ಪತಿಯ ಬಳಿಯಲ್ಲಿ ಹಣವಿರುವದೆಂದು ಭ್ರಮೆಯುಂಟಾಗಿತ್ತು ಮತ್ತು ಪ್ರವಾಸದಿಂದ ತಿರುಗಿ ಬಂದ ಬಳಿಕ ಗಂಡನೊಡನೆ ಏಕಾಂತದಲ್ಲಿ ಭೆಟ್ಟಿಯಾದುದು ಇದೇ ಮೊದಲು.

ಜಾನಕೀಬಾಯಿಯು ತಲೆಬಾಗಿಲಿಗೆ ಬೀಗಹಾಕಿ ಭದ್ರಪಡಿಸಿ, ಕಟ್ಟೆಯ ಮೇಲಿದ್ದ ಕೋಣೆಯಲ್ಲಿ ಮಲಗಿದ ಪತಿಯ ಬಳಿಗೆ ಹೋದಳು. ದಿನದಂತೆ ಕೋಣೆಯ ಬಾಗಿಲಿಗೆ ಒಳಮಗ್ಗಲಿನಿಂದ ಚಿಲಕವನ್ನು ಹಾಕದೆ ಹಾಗೆಯೇ ಮುಂದಕ್ಕೆ ಮಾಡಿತ್ತು. ಬಾಗಿಲವನ್ನು ತೆಗೆಯುತ್ತ "ಅವ್ವಯ್ಯಾ! ಇಂದು ಇವರ ಮನದಲ್ಲಿ ಯಾವ ಉದ್ದೇಶವಿರುವದೋ ಏನೋ ಬಾಗಿಲು ಹಾಗೆಯೇ ತೆರೆಯಲ್ಪಟ್ಟಿದೆಯಲ್ಲ" ಎಂದು ನುಡಿಯುತ್ತ ಬಾಗಿಲಿಗೆ ಚಿಲಕವನ್ನು ಹಾಕಿ ಭದ್ರಮಾಡಿಕೊಂಡು, ಪತಿಯ ಹಾಸಿಗೆಯ ಮೇಲೆ ಹೋಗಿ ಕುಳಿತುಕೊಂಡಳು.

ಅಂದು ರಾಮಚಂದ್ರನಿಗೆ ಇನ್ನೂ ನಿದ್ರೆ ಹತ್ತಿರಲಿಲ್ಲ. ತನ್ನ ಹೆಂಡತಿಯು ತಲೆಬಾಗಿಲಿಗೆ ಬೀಗಹಾಕಿದುದನ್ನು ಕಂಡೊಡನೆಯೇ ಅವನ ಮನದಲ್ಲಿ ನಾನಾ ಪ್ರಕಾರದ ವಿಚಾರಗಳುಂಟಾಗಹತ್ತಿದ್ದವು. ಆದರೆ ಅವಳು ತಿರುಗಿ ಕೋಣೆಯ ಬಾಗಿಲ ಬಳಿಗೆ ಬರುತ್ತಿರುವದನ್ನೂ ನೋಡಿದೊಡನೆ ಅವೆಲ್ಲವೂ ಬಯಲಾಗಿ ಒಳಗೆ ಬಂದು ಏನು ಮಾಡುವಳೆಂಬದನ್ನು ನೋಡಬೇಕೆಂದು ನಿಶ್ಚಯಿಸಿ, ಮುಖದ ಮೇಲೆ ಹಚ್ಚಡವನ್ನೆಳೆದುಕೊಂಡು ನಿದ್ರೆಹೋದವನಂತೆ ಮಲಗಿಕೊಂಡನು.

ಗಂಡನಿಗೆ ಕೇಳಬರಲೆಂದೇ ಜಾನಕೀಬಾಯಿಯು ಕೋಣೆಯ ಬಾಗಿಲ ನೂಕುವಾಗ ಮೇಲೆ ಹೇಳಿದಂತೆ ಘಟ್ಟಿಯಾಗಿ ನುಡಿದದ್ದು ಆದರೂ ಆತನು ಮಾತನಾಡದೆ ಮೌನವಾಗಿದ್ದುದನ್ನು ಕಂಡು "ಹೀಗಾದರೆ ಉಪಾಯವಿಲ್ಲ." ಎಂದು ನುಡಿದು ಪತಿಯ ಪಾದಗಳನ್ನು ಒತ್ತುತ್ತ ಕುಳಿತುಕೊಂಡಳು.

ರಾಮಚಂದ್ರ:- (ನಿದ್ರೆ ತಿಳಿದೆದ್ದವನಂತೆ ನಟಿಸುತ್ತ) ಯಾರವರು! (ಬೆಳಕಿನ ಸಹಾಯದಿಂದ ಅವಳನ್ನು ಗುರ್ತಿಸಿದಂತೆ ಮಾಡಿ) ತಾವೇನು! ವಾಹವಾ! ನನ್ನ ದೈವವು ಇಂದು ತೆರದಂತೆ ಕಾಣುವದು! ಶಹಬಾಸ.

ಜಾನಕೀಬಾಯಿ:- (ಬಾಯಿ ಮೇಲೆ ಕೈ ಇಟ್ಟುಕೊಂಡು ಒಯ್ಯಾರಮಾಡುತ್ತ) ಅವ್ವಯ್ಯಾ ನನಗೆ ಈ ತರಹದ ಕವಡಗಂಟಿಕ ಮಾತಿನ ಅರ್ಥವೇ ತಿಳಿಯುವದಿಲ್ಲ!

ರಾಮಚಂದ್ರ:- ಅಹುದಹುದು! ನೀನು ಏನನ್ನೂ ಅರಿಯದ ಚಿಕ್ಕ ಬಾಲೆ! ನನ್ನ ಮಾತಿನ ಅರ್ಥವು ನಿನಗೆ ಹೇಗೆ ತಿಳಿದೀತು? ಅದು ಹೋಗಲಿ ಬಿಡು! ನಿನಗೆ ಇಂದು ಇಂತಹ ಸುಬುದ್ಧಿಯನ್ನಾವ ದೇವನು ದಯಪಾಲಿಸಿದನೋ ಏನೋ!

ಜಾನಕಿ:- ಯಾವ ದೇವನ್ಯಾತಕ್ಕೆ ಬೇಕು. ಇಂತಹ ಬುದ್ಧಿಯನ್ನು ಕೊಡಲು! ಹೀಗೆ ವರ್ತಿಸುವದು ಪತಿವ್ರತೆಯರಾದ ನಮ್ಮ ಧರ್ಮವು! ಪತಿಯ ಸೇವೆ ಮಾಡಿ ಆತನ ಆಜ್ಞೆಯಂತೆ ವರ್ತಿಸುತ್ತ ಸದಾ ಆತನನ್ನು ಆನಂದದಲ್ಲಿ ಡಿಸುವದಕ್ಕೆ ಪ್ರಯತ್ನಿಸಲು ದೇವರೇನು ಹೇಳುವನೇ!

ರಾಮಚಂದ್ರ:- ಹೀಗೋ! ಹಾಗಾದರೆ ನೀನೊಳ್ಳೆಯ ಪತಿವ್ರತೆಯಾಗಿರುವಿಯಲ್ಲವೇ?

ಜಾನಕಿ:- ಅಂದರೇನು? ನನ್ನ ವಿಷಯದಲ್ಲಿ ಏನಾದರೂ ಸಂಶಯವಿರುವದೋ? (ಸಿಟ್ಟಾಗಿ) ತಮ್ಮ ಮನಸ್ಸಿನಲ್ಲೇನಿರುವದು ಹೇಳಿಬಿಡಿರೊಪ್ಪ! ಇಲ್ಲದೆ ಹೋದರೆ ಇಲ್ಲಿಯೇ ನಿಮ್ಮ ಪಾದದ ಮೇಲೆ ತಲೆಯೊಡೆದುಕೊಳ್ಳುವೆನು. ಎಂದು ನುಡಿವವಳೇ ತುಸು ದೂರ ಸರಿದು ನಿಂತುಕೊಂಡಳು.

ರಾಮಚಂದ್ರ:- (ಎದ್ದು ಅವಳನ್ನು ಹಿಡಿದುಕೊಂಡು) ಏನೇ, ಚೇಷ್ಟೆಗಾಗಿ ನುಡಿದರೆ ಒಳ್ಳೇ ಗೊಂದಲವನ್ನೇ ಎಬ್ಬಿಸಿಬಿಟ್ಟೆಯಲ್ಲೇ? (ಅವಳನ್ನು ಹಾಸಿಗೆಯ ಮೇಲೆ ಎಳೆದುಕೊಂಡು) ಛೀ, ಬಿಡು ಹುಚ್ಚೀ, ನಾಲ್ಕು ವರುಷಗಳ ವರೆಗೂ ನನ್ನ ನಿನ್ನ ದರ್ಶನವಾಗಿದ್ದಿಲ್ಲವಾದ್ದರಿಂದ ಈ ಅವಧಿಯಲ್ಲಿ ಒದಗಿದ ಸುಖದುಃಖದ ಮಾತುಗಳನ್ನಾಡುತ್ತ ಕುಳಿತುಕೊಳ್ಳುವದನ್ನು ಬಿಟ್ಟು, ನಿಮ್ಮ ಸುಖದಲ್ಲಿಯೇ ತಲೆಯೊಡೆದುಕೊಳ್ಳುತ್ತೇನೆ ಎಂದು ನುಡಿಯುವಿಯಲ್ಲ. ಇದಕ್ಕೇನೆನ್ನಬೇಕು?

ಜಾನಕಿ:- (ಶಾಂತಳಾದವಳಂತೆ ನಟಿಸಿ) ಎರಡನೆಯವರ ಜೀವ ತೆಗೆದುಕೊಳ್ಳುವ ನಿಮ್ಮ ಚೇಷ್ಟೆ ಎಂತಹದು! ನಾನೇನು ಇಂತಹ ನಿಮ್ಮ ಭಾಷಣವನ್ನು ಕೇಳಲಾರೆನು. ನಾನಂತೂ ಹುಚ್ಚ ಹೆಂಗಸು. ನನ್ನ ಎರಡೂ ಮನೆತನಗಳನ್ನು ಮುಂದಕ್ಕೆ ತರುವದರ ಹೊರತು ಇನ್ನಾವದೂ ತಿಳಿಯದು. ಆದರೂ ನಿಮ್ಮ ಭಾಷಣದ ಮೇಲಿಂದ ನಿಮ್ಮ ಮನದಲ್ಲೇನು ಹುಟ್ಟಿರುವದೋ ಅದನ್ನು ಆ ಪರಮಾತ್ಮನೊಬ್ಬನೇ ಬಲ್ಲ. (ತುಸು ಹೊತ್ತು ಸುಮ್ಮನಿದ್ದು ಪತಿಯ ಕಂಠಕ್ಕೆ ತೆಕ್ಕೆಬಿದ್ದು) ತಾವು ಇಷ್ಟು ದಿವಸಗಳವರೆಗೂ ಅವರೊಂದಿಗೆ ಹೋಗಿಬಿಟ್ಟಿರಿ. ಇತ್ತ ನಮ್ಮ ಅವಸ್ಥೆ ಏನಾದೀತೆಂಬದರ ಅರಿವು ಸಹ ತಮಗೆ ಉಳಿಯಲಿಲ್ಲ. ನಮ್ಮ ನೆನಪು ಒಮ್ಮೆಯಾದರೂ ತಮಗೆ ಆಗಿದ್ದೀತೋ? ಅದನ್ನು ಯಾರು ಹೇಳಬೇಕು? ತಮಗೆ ನಮ್ಮ ನೆನಪಾಗದಿರುವದೇ ನಿಜವು ಯಾಕೆಂದರೆ ತಾವಿರುತ್ತಿದ್ದುದು ಪಟ್ಟಣದಲ್ಲಿ. ಅದರಲ್ಲಿ ಶ್ರೀಮಂತರ ಮನೆಯಲ್ಲಿ ಅಂದಬಳಿಕ ಕೇಳುವದೇನು? ಅವರೊಂದಿಗೆ ಪ್ರತಿದಿವಸ ಸುಗ್ರಾಸ ಭೋಜನ ಕೈತುಂಬ ದಕ್ಷಿಣೆ. ಮೇಲಾಗಿ ಶ್ರೀಮಂತರ ದೂರದ ಆಪ್ತರು. ಹೀಗಿದ್ದ ಬಳಿಕ ತಮಗೆ ಅಲ್ಲಿ ಯಾತರ ಕೊರತೆ. ದೊಡ್ಡ ಪಟ್ಟಣವಾದುದರಿಂದ ಅಲ್ಲಿ ಬೆಲೆವೆಣ್ಣುಗಳಿಗೇನು ಕಡಿಮೆ. ಹೀಗೆ ತಾವು ಸುಖದಲ್ಲಿ ಕಾಲ ಕಳೆಯುತ್ತಿರುವಾಗ ಮನೆಯಲ್ಲಿದ್ದರೆ ಸದಾ ಕಾಲದಲ್ಲಿಯೂ ಕಟಕಟಿಸುತ್ತಿದ್ದ ನನ್ನಂತಹ ಹೆಂಡತಿಯ ನೆನಪು ಕನಸಿನಲ್ಲಿಯೂ ಕೂಡ ಆಗುವ ಸಂಭವವಿಲ್ಲ. ನಾನು ಹುಚ್ಚಿಯಂತಲೇ ಹಾಗೆ ಕೇಳಿದೆನು. ಅಹುದಲ್ಲೋ ಹೇಳಿರಿ. ಈಗೇಕೆ ಬಸವನಂತೆ ಸುಮ್ಮನೆ ನಿಂತಿರಿ?

ರಾಮಚಂದ್ರ:- ಈಗ ನಾನೇನು ಮಾತನಾಡಲಿ! ನನ್ನನ್ನು ನಿರುತ್ತರನನ್ನಾಗಿ ಮಾಡಿದೆ. ಏನಿದ್ದರೂ ಮಾತಾಡಲೇ ಬೇಕಲ್ಲವೇ! ಆದರೆ ಒಮ್ಮೆಲೆ ನನ್ನ ಮೇಲೆ ಇಷ್ಟೊಂದು ಮಾತು ಹೊರಿಸಬಾರದಾಗಿತ್ತು.

ಜಾನಕಿ:- ಆರಂಭವಾಯಿತು. ಬೆಲ್ಲದಂತಹ ಮಾತುಗಳನ್ನಾಡಿ ಮನಕರಗಿಸಲು ನೋಡಿರಿ, ತಾವು ಹೀಗೆ ಮಾಡಹತ್ತಿದರೆ ನಾನನ್ನದೇನು ಮಾಡಲಿ?

ರಾಮಚಂದ್ರ:- ನಿನ್ನ ಮನಸ್ಸಿಗೆ ಬಂದಂತೆ ಮಾತಾಡು. ನಿನ್ನನ್ನು ಪ್ರತಿಬಂಧಗೊಳಿಸುವರಾರು? ಜಗದೀಶನು ಕೊಟ್ಟ ಬಾಯಿಯಿದೆ. ಮಾತಾಡು! ಮನಬಂದಂತೆ ಮಾತಾಡು! ಮತ್ತೇನು ಹೇಳು?

ಜಾನಕಿ:- ರಾತ್ರಿಯೆಲ್ಲವೂ ಹೀಗೆಯೇ ನಡಿಯುವದೇನು? ಅಥವಾ.......

ರಾಮಚಂದ್ರ:- ಛೀ! ಛೀ! ಹಾಗೇನು ತಿಳಿಯಬೇಡ! ಮನಸ್ಸಿನಲ್ಲಿದ್ದಂತೆ ನಡೆಯುವದು! ನಿನ್ನ ಇಚ್ಛೆ ಏನಿದೆ?

ಜಾನಕಿ:- ನನ್ನ ಇಚ್ಛೆ ಏನಿದರಲ್ಲಿ? ನೀವು ಈ ನಾಲ್ಕು ವರುಷ ಅಲ್ಲಿದ್ದು ಮಾಡಿದುದೇನು?

ರಾಮಚಂದ್ರ:- ಹೀಗೆ ಅಂದರೇನು? ನಾಲ್ಕು ಸಲ ಐವತ್ತೈವತ್ತರಂತೆ ನಿನಗೆ ಒಟ್ಟು ಇನ್ನೂರು ರೂಪಾಯಿಗಳನ್ನು ಕಳಿಸಿಕೊಟ್ಟೆನು.

ಜಾನಕಿ:-(ಕೈಯಿಂದ ಆರತಿ ಬೆಳಗಿದಂತೆ ಮಾಡುತ್ತ) ಅಹಹಹ! ಇನ್ನೂರು ರೂಪಾಯಿ ಕಳಿಸಿದಿರಿ! ಎಷ್ಟು ಪುಣ್ಯಕಾರ್ಯ ಮಾಡಿದಿರಿ ನೋಡಿದಿರಾ! ಇವನ್ನೂ ಕಳಿಸದಿದ್ದರೂ ನಡೆಯುತ್ತಿತ್ತು! ಅನ್ನ ಸಾರಿಗೆ ಏನೂ ಕೊರತೆಯಾಗದಂತೆ ಮಾವನವರು ವ್ಯವಸ್ಥೆ ಮಾಡಿದ್ದಾರೆ. ಅಂದಮೇಲೆ ಯಾತರ ಕೊರತೆ?

ರಾಮಚಂದ್ರ:- ಸಾಕು, ಸಾಕು! ನಿನ್ನ ಸಾಲ ಕೊಡುವದಿತ್ತೆಂದು ಕಳಿಸಿದೆನೆಂದು ತಿಳಿ! ಈಗಲಾದರೂ ಸಂತೋಷವಾಯಿತೋ ಇಲ್ಲೋ! ನೀನು ಇಷ್ಟು ಜಾಣತನದಿಂದ ಪ್ರಪಂಚ ಮಾಡಿಕೊಂಡು ಹೋಗುವದಕ್ಕೆ ಕಲಿತಿರುವಿಯೇನು?

ಜಾನಕಿ:- ನನಗೆ ಜಾಣತನ ಪ್ರಾಣತನ ಗೊತ್ತಿಲ್ಲ. ಸಹಜವಾಗಿ ಕೂಡ ಏನೂ ಕೇಳದ ಬಾರದಾಗಿದೆ ಹೀಗೆ ಕೇಳಿದುದೇ ನನ್ನ ತಪ್ಪಾಗಿದೆ. ಆಯಿತೇ. ಇನ್ನು ಮೇಲೆ ಒಂದು ತುಟಿ ಎರಡು ಮಾಡುವದಿಲ್ಲ.

ರಾಮಚಂದ್ರ:- ಆಯಿತು. ಮತ್ತೆ ಜಮದಗ್ನಿಯ ಸಂಚಾರವಾಯಿತು. ಕ್ಷಣಕ್ಷಣಕ್ಕೆ ಮಾತುಮಾತಿಗೆ ರಾಣೀ ಸರಕಾರಕ್ಕೆ ಕೋಪ! ಏನು ಮಾಡಬೇಕು? ಹೀಗೆ ಮೂಗಿನ ತುದಿಯ ಮೇಲೆ ಸಿಟ್ಟನ್ನು ಕಟ್ಟಿಕೊಂಡು ಕುಳಿತವರ ಸಂಗಡ ಮಾತಾಡುವದೇ ಕಷ್ಟ.

ಜಾನಕಿ:- ತಾವು ಏನೂ ಮಾತಾಡಬೇಡಿರಿ. ಈಗ ನಾಲ್ಕು ವರ್ಷಗಳಲ್ಲಿ ಏನೇನು ಮಾಡಿದಿರೆಂಬದನ್ನಷ್ಟು ಹೇಳಿದರೆ ಸಾಕು. ಇದಕ್ಕೆ ಹೆಚ್ಚಿಗೆ ಏನೂ ಬೇಡ.

ರಾಮಚಂದ್ರ:- ಇಷ್ಟೇ ಅಹುದಲ್ಲೋ, ಹಾಗಾದರೆ ಏನೂ ಅಡ್ಡಿಯಿಲ್ಲ. ಆನಂದದಲ್ಲಿದ್ದಾಗ ಮತ್ತೊಂದಾದರೂ ಹೇಳೇನಂತೆ ಈಗ ರಾತ್ರಿಯು ವಿಶೇಷವಾಗಿದೆ. ಇನ್ನು ಮಲಗುವಾ! ನಾಳೆ ಲಘುರುದ್ರವಿರುವದು ನಸುಕಿನಲ್ಲಿದ್ದು ಹೋಗಬೇಕು ಮೊದಲಿನಂತೆ ಹೋಗಲೇಬೇಕೆಂಬ ಅವಶ್ಯಕತೆಯು ಈಗಿಲ್ಲ. ಆದರೂ ಬಿಡಲಿಕ್ಕಾಗದು.

ಜಾನಕಿ:- ಅವ್ವಯ್ಯಾ! ಮೊನ್ನೆ ತಂದುಕೊಟ್ಟ ಆ ಏಳು ನೂರು ರೂಪಾಯಿಗಳ ಬಿಗುವೇನಿದು? ಇಷ್ಟರಿಂದ ಒಳ್ಳೇ ಸಿರಿವಂತರಾದೆವೆಂದು ತಿಳಿದಿರೇನು? ಎಷ್ಟು ದಿವಸ ಸಾತಾವು ಆ ರೂಪಾಯಿಗಳು! ಕುಳಿತು ಊಟ ಮಾಡುವವನಿಗೆ ಕುಡಿಕೆ ಹೊನ್ನು ಸಾಲದು" ಎಂಬ ಗಾದೆಯ ಮಾತು ನೆನಪಿದೆ ಏನು? ಅಲ್ಲದೆ ನಮ್ಮ ಪ್ರಪಂಚ ದೊಡ್ಡದು. ಬೆಳಗಾದರೆ ಇಬ್ಬರ ಮುಂಜಿವಿಯು. ಒಬ್ಬಳ ಲಗ್ನ ಮಾಡಬೇಕು! ಈಗಲೇ ಜನರು ಕುಚೇಷ್ಟೆ ಮಾಡಲಾರಂಭಿಸಿದ್ದಾರೆ. ಇನ್ನು ವಿಲಂಬ ಮಾಡುವಂತಿಲ್ಲ. ಹುಡುಗರು ದೊಡ್ಡವರಾಗಿದ್ದಾರೆ. ನೀವು ಕೊಟ್ಟದ್ದು ಕಾಚಾಗಲಿಕ್ಕಿಲ್ಲ. ಹೀಗಿದ್ದರೂ ನಾವು ಶ್ರೀಮಂತರಾದೆವೆಂದು ಮನೆಯಲ್ಲಿ ಕೂತು ಉಣ್ಣುವ ಎಣಿಕೆಯಲ್ಲಿ ನೀವಿರುವಿರಿ. ಇದಕ್ಕೇನನ್ನಬೇಕು? ಹೀಗೆ ಮಾತಾಡುತ್ತ ಅವಳು ಕೋಠಡಿಯ ಒಳಚಿಲಕವನ್ನು ಹಾಕಿ, ಪತ್ನಿಯನ್ನು ಬಹು ಪರಿಯಿಂದ ರಮಿಸಿ, ಸಂತೋಷಗೊಳಿಸಿ, ನಿಜ ಸ್ಥಿತಿಯನ್ನೆಲ್ಲ ಅವನಿಂದ ಅರಿತಕೊಂಡಳು. ಅವಳ ಮಾತಿಗೆ ಮರುಳಾಗಿ ಆತನು ತಾನು ಬರುವಾಗ ತನ್ನ ಸಂಗಡ ಏನೇನು ತಂದಿದ್ದನೋ ಅದನ್ನೆಲ್ಲ ಅವಳಿಗೆ ಹೇಳಿದನು. ಆದರೆ ಆ ಒಡವೆಗಳೆಲ್ಲ ಒಡನೆಯೇ ತನ್ನ ಕೈ ಸೇರದ್ದಕ್ಕಾಗಿ ಅವಳು ಮನದಲ್ಲಿ ಚಟಪಡಿಸಿದಳು. ಯಾಕಂದರೆ:- ರಾಮಚಂದ್ರನು ಊರಿಗೆ ಬಂದೊಡನೆಯೇ ತಾನು ತಂದ ವಡವೆಗಳಲ್ಲಿ ಮೂರು ಭಾಗಗಳನ್ನು ಮಾಡಿ, ತನ್ನ ಮನೆಯ ಅಂಗಣದಲ್ಲಿಯೇ ಮೂರು ಬೇರೆ ಬೇರೆ ಸ್ಥಳದಲ್ಲಿ ಅವನ್ನು ಹೂಳಿಟ್ಟು ಬಳಿಕ ಮನೆಯೊಳಕ್ಕೆ ಕಾಲಿಟ್ಟಿದ್ದನು. ಆತನು ಹೀಗೆ ಮಾಡಿದುದು ತನ್ನ ಮತದಂತೆ ಜನರ ಭೀತಿಯಿಂದ ಪಾರಾಗುವದಕ್ಕಾಗಿ ಇರಲಿ. ರಾಮಚಂದ್ರನು ತನ್ನ ಪ್ರವಾಸ ವೆಚ್ಚಕ್ಕೆಂದು ಕೆಲವು ಒಡವೆಗಳನ್ನು ಮಾರಿದ್ದನ್ನಷ್ಟೇ! ಆ ಹಣದಲ್ಲಿಯ ಕೆಲವು ರೂಪಾಯಿಗಳನ್ನು ತನ್ನ ಖರ್ಚಿಗಾಗಿ ತೆಗೆದಿಟ್ಟುಕೊಂಡು ಉಳಿದ ಹಣವನ್ನು ಅಂವರೆ ಮೇಲೆ ಹೇಳಿದಂತೆ ೭೦೦ ರೂ. ಗಳನ್ನು ತನ್ನ ಹೆಂಡತಿ ಕೈಯಲ್ಲಿ ಕೊಟ್ಟಿದ್ದನು. ಅಲ್ಲದೆ ಆತನ ಮಾತಿನ ಮೇಲಿಂದ ಅವನ ಹೆಂಡತಿಯು ಆತನ ಬಳಿಯಲ್ಲಿ ಇನ್ನೂ

ವಿಶೇಷ ಧನವಿರುವದೆಂಬದನ್ನು ತಿಳಿದು, ಅಷ್ಟಕ್ಕೇ ಸಂತುಷ್ಟಳಾಗದೆ ಆ ರಾತ್ರಿಯಲ್ಲಿ ಅವನಿಗೆ ದುಂಬಾಲಬಿದ್ದು ಅವನ ಇಂಗಿತವನ್ನೆಲ್ಲ ಅರಿತುಕೊಂಡಳು. ಹಾಗೂ ಇನ್ನೂ ಬೆಳಗಾಗುವ ಪೂರ್ವದಲ್ಲಿಯೇ ಆತನು ಹೂಳಿಟ್ಟ ಧನವನ್ನೆಲ್ಲ ತನ್ನ ಸ್ವಾಧೀನಪಡಿಸಿಕೊಂಡು ಆನಂದಿತಳಾದಳು.

"ಹೆಂಗಸರ ಬುದ್ಧಿಯು ಮೊಣಕಾಲ ಕೆಳಗೆ" ಎನ್ನುವ ಮಾತೇನು ಸುಳ್ಳಲ್ಲ ಯಾಕಂದರೆ ಜಾನಕಿಯು ಬೆಲೆಯುಳ್ಳ ಆ ಒಡವೆಗಳನ್ನಿಟ್ಟುಕೊಂಡು ಊರಲ್ಲಿ ಅಡ್ಡಾಡಹತ್ತಿದಳು. ಜನ್ಮದರಿದ್ರಳಾದ ಇವಳಿಗೆ ಇಂಥ ಒಡವೆಗಳೆಲ್ಲಿಂದ ದೊರೆತಿರಬಹುದೆಂದು ನೆರೆಹೊರೆಯವರು ತಮ್ಮ ತಮ್ಮೊಳಗೆ ಚರ್ಚಿಸಲಾರಂಭಿಸಿದರು. ಎಷ್ಟೋ ಹೆಂಗಳೆಯರು ಈ ವಿಷಯವಾಗಿ ಅವಳನ್ನು ಕೇಳಹತ್ತಿದರು. ಆಗ ಜಾನಕಿಯು ಅನೇಕರಿಗೆ ಅನೇಕ ತರವಾಗಿ ಹೇಳಿದರು. ದಾನ ಕೊಟ್ಟಿರುವರೆಂದು ಹೇಳಿದಳು. ಆದರೆ ಇವಳ ಸುಳ್ಳು ಕಾರಣಗಳಿಂದ ಜನರ ಸಮಾಧಾನವಾಗಲಿಲ್ಲ. ಇಂತಹ ಅಮೂಲ್ಯವಾದ ಸುವರ್ಣಾಲಂಕಾರಗಳನ್ನು ಯಾರೂ ದಾನವಾಗಿ ಕೊಡುವ ಸಂಭವವಿಲ್ಲೆಂದು ಅವರು ಮಾತಾಡಿದರು. ರಾಮಚಂದ್ರನು ಈ ಒಡವೆಗಳನ್ನೆಲ್ಲ ಎಲ್ಲಿಂದಲಾದರೂ ಕದ್ದು ತಂದಿರಲೇಬೇಕೆಂದು ಅವರು ನಿಶ್ಚಯಿಸಿದರು. ಈತನು ನರಗುಂದದ ಸಂಸ್ಥಾನಿಕನ ಆಶ್ರಯದಲ್ಲಿದ್ದನೆಂಬುದು ಎಲ್ಲರಿಗೂ ಗೊತ್ತಿತ್ತು. ಕಾರಣ ಅವರು ನರಗುಂದದಲ್ಲಿ ಬಂಡಾಯವೆದ್ದೊಡನೆ ಅರಮನೆಯಲ್ಲಿಯ ಈ ವಸ್ತುಗಳನ್ನೆಲ್ಲ ರಾಮಚಂದ್ರನು ಎತ್ತಿಕೊಂಡು ಬಂದಿರಬೇಕೆಂದು ತರ್ಕಮಾಡಿದರು. ಅಷ್ಟರಲ್ಲಿ ನರಗುಂದದಿಂದ ಓಡಿಹೋದವರನ್ನು ಸರಕಾರದವರು ಸೆರೆಹಿಡಿಯುತ್ತಲಿದ್ದಾರೆಂಬ ವಾರ್ತೆಯು ಸುತ್ತಲೂ ಪಸರಿಸಿತು. ದರಿದ್ರನಾದ ರಾಮಚಂದ್ರನು ಹೀಗೆ ಒಮ್ಮೆಲೆ ಸಿರಿವಂತನಾದುದನ್ನು ಕಂಡು ಸಹಿಸಲಾರದ ಕೆಲವು ನೀಚ ಜನರು « ನರಗುಂದದ ಅರಸನಲ್ಲಿದ್ದ ರಾಮಚಂದ್ರನು ಅರಮನೆಯಲ್ಲಿಯ ಹಲವು ಆಭರಣಗಳನ್ನು ಎತ್ತಿಕೊಂಡು ನಮ್ಮಲ್ಲಿಗೆ ಓಡಿಬಂದಿದ್ದಾನೆಂ" ದು ಸರಕಾರಕ್ಕೆ ಸುದ್ದಿ ಹಚ್ಚಿದರು. ಇಷ್ಟಾದಬಳಿಕ ಕೇಳುವದೇನು? ಆತನನ್ನು ಬಂಧಿಸಿಕೊಂಡು ಬರಲು ಮೇಲಧಿಕಾರಿಯ ಅಪ್ಪಣೆಯಾಯಿತು ಕೂಡಲೆ ಸಿಪಾಯಿಗಳು ರಾಮಚಂದ್ರನಿದ್ದ ಊರಿಗೆ ಬಂದು ಆತನ ಶೋಧಮಾಡಹತ್ತಿದರು. ಈ ಸುದ್ದಿಯನ್ನು ಕೇಳಿ ರಾಮಚಂದ್ರನು ಧಾವಿಸಿ ಮನೆಗೆ ಹೋಗಿ ಹೆಂಡತಿಯ ಮೈಮೇಲಿನ ಆಭರಣಗಳನ್ನೆಲ್ಲ ಬಿಚ್ಚಿಕೊಂಡು ಅವನ್ನು ಅಂಗಣದಲ್ಲಿ ಹೂಳಿಟ್ಟು ಕೈಕಾಲು ತೊಳೆದುಕೊಂಡು ಏನೂ ಅರಿಯದವನಂತೆ ಪಡಸಾಲೆಯಲ್ಲಿ ಅಡ್ಡಾಡಹತ್ತಿದನು. ಅಷ್ಟರಲ್ಲಿ ಇವನನ್ನು ಹುಡುಕುತ್ತಿದ್ದ ರಾಜ

ಪೊತರು ಅಲ್ಲಿಗೆ ಬಂದು ಅವನಿಗೆ ಕೆಲ ಪ್ರಶ್ನೆಗಳನ್ನು ಕೇಳಿ ಅವನನ್ನು ಬಂಧಿಸಿದರು.

ಆಗ ರಾಮಚಂದ್ರನು ತನ್ನನ್ನು ಬಂಧಿಸಿದ ಅಧಿಕಾರಿಗೆ "ರಾಯರೇ, ನನ್ನ ಹೆಂಡತಿ ಮಕ್ಕಳಿಗೆ ಭೆಟ್ಟಿಯಾಗಿ ಬರುವೆನು ದಯವಿಟ್ಟು ಅಪ್ಪಣೆ ಕೊಡಬೇಕೆಂದು" ಬಹುಪರಿಯಾಗಿ ಬೇಡಿಕೊಂಡನು ಅದಕ್ಕೆ ಆ ಅಧಿಕಾರಿಯು "ಹಾಗೇ ಆಗಲಿ. ಭೆಟ್ಟಿಯಾಗಿ ತೀವ್ರ ಹೊರಗೆ ಬರಬೇಕು" ಎಂದನು. ಆ ಮಾತಿಗೆ ಒಪ್ಪಿಕೊಂಡು, ರಾಮಚಂದ್ರನು ಮನೆಯೊಳಗೆ ಹೋದನು. ಒಳಗೆ ಅಳುತ್ತ ಕುಳಿತುಕೊಂಡಿದ್ದ ಅವನ ಹೆಂಡತಿ ಹಾಗೂ ಮಕ್ಕಳು ಅವನನ್ನು ನೋಡಿದೊಡನೆ ಎದ್ದು ಬಂದು ಅವನಿಗೆ ತೆಕ್ಕಿಬಿದ್ದು ಮತ್ತಿಷ್ಟು ಅಳಲಾರಂಭಿಸಿದರು. ಆಗ ರಾಮಚಂದ್ರನು ಅವರನ್ನು ಸಮಾಧಾನಗೊಳಿಸಿ ಹೆಂಡತಿಯನ್ನು ಕುರಿತು ಎನೇ, ಸಹಜವಾಗಿ ಪಾರಾದರಂತೂ ಅಡ್ಡಿಯಿಲ್ಲ. ಆದರೆ ನನ್ನ ಜೀವಕ್ಕೆ ಎರವಾಗುವ ಪ್ರಸಂಗ ಬಂದರೆ ಮಾತ್ರ ನಾನು ನಿಜಸ್ಥಿತಿಯನ್ನೆಲ್ಲ ಒಪ್ಪಿಕೊಂಡು, ತಂದ ಒಡವೆಗಳನ್ನೇ ಅವರ ಸ್ವಾಧೀನಮಾಡಿ ಪಾರಾಗಬೇಕೆಂದು ಮಾಡಿದ್ದೇನೆ. ಬದುಕಿದರೆ ಹೊಟ್ಟೆಯನ್ನು ಹೇಗಾದರೂ ತುಂಬಿಕೊಳ್ಳಬಹುದು! ದೇವರಿಗೇನು ಕರುಣ ಬಾರದೇ? ಜೀವವನ್ನೇಕೆ ಕಳೆದುಕೊಳ್ಳಲಿ?'' ಎಂದನು. ಪತಿಯ ಈ ತರದ ಭಾಷಣವನ್ನು ಕೇಳಿ, ಶೋಕಾಕುಲಳಾದವಳಂತೆ ನಟಿಸುತ್ತಿದ್ದ ಆ ಕಠೋರಮನದ ಸ್ತ್ರೀಯು ಕೆರಳಿದ ಸಿಂಹಿಣಿಯಂತೆ ಗರ್ಜಿಸುತ್ತ « ಏನು? ನಿಮ್ಮ ಮೈಮೇಲೆ ಎಚ್ಚರವಿದ್ದಂತೆ ಕಾಣುವದಿಲ್ಲ; ಅಲಂಕಾರಗಳ ಬಗ್ಗೆ ಏನೂ ಹೇಳಬೇಡಿರಿ. ನಿಮಗೆ ಒಂದು ವೇಳೆ ದೇಹಾಂತ ಶಿಕ್ಷೆಯಾದರೂ ಏನಾಯಿತು? ಈಗಿಲ್ಲದಿದ್ದರೂ ಮುಂದೆಯಾದರೂ ಸಾಯಲೇಬೇಕಲ್ಲವೇ; ಅಂದಮೇಲೆ ನೀವು ನಿಜವನ್ನು ಹೇಳಬೇಡಿರಿ. ಇನ್ನೂ ಎಲ್ಲಿಯಾದರೂ ದ್ರವ್ಯವನ್ನು ಹೂಳಿಟ್ಟಿದ್ದರೆ ಹೇಳಿಹೋಗಿರಿ. ಮುಂದೆ ನಮಗೆ ಗೊತ್ತಾಗದೇ ಹೋದೀತು ಮರಣ ಬಂದರೂ ಹೆದರಬೇಡಿರಿ. ಮರಣಕ್ಕಂಜುವ ಗಂಡಸೇ? ನಾನು ನಿಮಗೆ ಬೇಕಾದಷ್ಟು ಉಂಡಿ, ದಶಮಿಗಳನ್ನು ಕಟ್ಟಿಕೊಟ್ಟು ಕಳಿಸುವೆನು. ನಮ್ಮನ್ನು ದಾರಿದ್ರ್ಯದಲ್ಲಿ ನೂಕುವಂತೆ ಮಾತ್ರ ಮಾಡಬೇಡಿರಿ ನಿಮ್ಮ ದೈವದಲ್ಲಿದ್ದದ್ದು ಆದೀತು. ನೀವಿಲ್ಲದಿದ್ದರೂ ನಾನು ಈ ಮಕ್ಕಳನ್ನು ಜೋಪಾನ ಮಾಡಿಕೊಂಡಿರುವೆನು. ನೀವು ಏನೂ ಚಿಂತಿಸಬೇಡಿರಿ. ದೇವರ ದಯದಿಂದ ಪಾರಾಗಿ ಬಂದರಂತೂ ನೆಟ್ಟಗೆ. ಇಲ್ಲದಿದ್ದರೂ ನಾನು ಇದರಿಂದ ಮಕ್ಕಳ ಜೋಪಾನಮಾಡುವೆನು. ಹೆಂಡತಿಯ ಮಾತುಗಳನ್ನು ಕೇಳಿ, ರಾಮಚಂದ್ರನು ಹುಚ್ಚನಂತಾದನು. ಆತನಿಗೆ ಅವಳೊಡನೆ ಮಾತಾಡುತ್ತ ಕುಳ್ಳಿರಲು ಅವಧಿಯಿದ್ದಿಲ್ಲ. ಆದರೂ ಆತನು "ಇನ್ನೂ ನಾನು ಹೂಳಿಟ್ಟ ಹಣವು ಭೂಮಿಯಲ್ಲಿಯೇ ಉಳಿದರೂ ಅಡ್ಡಿ

ಯಿಲ್ಲ ಆದರೆ ಈ ನೀಚಳ ವಶವಾಗಬಾರದು" ಎಂದು ಮನದಲ್ಲಿಯೇ ಚಡಪಡಿಸುತ್ತ ಹೊರಗೆ ಬಂದನು. ಬಳಿಕ ರಾಜಸೇವಕರು ಅವನನ್ನು ಬಂಧಿಸಿಕೊಂಡು ನರಗುಂದಕ್ಕೆ ಹೋದರು. ದೇವರ ದಯೆಯಿಂದ ನ್ಯಾಯಾಧಿಪತಿಯು ಈತನನ್ನು ನಿರ್ದೋಷಿಯೆಂದು ಬಂಧಮುಕ್ತನನ್ನಾಗಿ ಮಾಡಿದನು. "ಸಂಸ್ಥಾನಿಕರ ಹೆಂಡತಿ ಹಾಗು ತಾಯಿಯ ವಿಷಯದಲ್ಲಿ ನನಗೆ ಏನೂ ಗೊತ್ತಿಲ್ಲ. ನಾನೂ ಅವರೂ ಕೂಡಿಯೇ ಹೊರಬಿದ್ದದ್ದು ನಿಜವು. ಆದರೆ ಮುಂದೆ ಅವರು ಎತ್ತ ಹೋದರೆಂಬುದನ್ನು ನಾನು ಅರಿಯೆನು." ಎಂದು ಹೇಳಿ ಆತನು ಸಾರಿದನು. ಅಲಂಕಾರಗಳ ಪ್ರಸ್ತಾಪವೇ ಹೊರಡಲಿಲ್ಲ.



## ೧೦ನೆಯ ಪ್ರಕರಣ



# ಪ್ರೇತದಹನ.

ಭಾಸ್ಕರರಾಯನ ತಾಯಿಯೂ ಮತ್ತು ಆತನ ಸುಶೀಲ ಪತ್ನಿಯಾದ ಸಾವಿತ್ರಿಬಾಯಿಯೂ ಒಬ್ಬರ ಸೆರಗಿಗೊಬ್ಬರು ಗಂಟುಹಾಕೊಂಡು, ಒಬ್ಬರನ್ನೊಬ್ಬರು ಬಲವಾಗಿ ಆಲಿಂಗಿಸಿಕೊಂಡು, ಈರ್ವರೂ ಸಂಗಳ ಗ್ರಾಮದ ಬಳಿಯಲ್ಲಿ ಮಲಾಪಹಾರಿಯಲ್ಲಿ ಪ್ರವೇಶಿಸಿ ಪ್ರಿಯಕರವಾದ ಪ್ರಾಣವನ್ನು ಅವಳಿಗೆ ಅರ್ಪಿಸಿದ ವಿಷಯವನ್ನು ಏಳನೆಯ ಪ್ರಕರಣದಲ್ಲಿ ಬರೆದಿದ್ದೇವೆ. ನದಿಯಲ್ಲಿ ಬಿದ್ದೊಡನೆ ಮುಳುಗುತ್ತ ತೇಲುತ್ತ ಅತ್ತೆಸೊಸೆಯರು ಪ್ರವಾಹದ ಶೆಳವಿಗೆ ಸಿಕ್ಕು ಹರಿದು ಹೋಗಹತ್ತಿದರು. ಪ್ರಾಣೋತ್ಕ್ರಮಣದ ಕಾಲದಲ್ಲಿ ಅದೆಷ್ಟು ಕಸಿವಿಸಿಯಾದರೂ ಅವರು ಒಬ್ಬರನ್ನೊಬ್ಬರು ಬಿಟ್ಟಿದ್ದಿಲ್ಲ. ಇದೊಳ್ಳೆ ಆಶ್ಚರ್ಯಕರವಾದ ಸಂಗತಿಯು! ಪಾತಕರೇ ಅವರು ನೀರು ನಡಕ್ಕೆ ಬರುವವರೆಗೆ ನಡೆದುಹೋಗಿ ಬಳಿಕ ಒಮ್ಮೆಲೇ ಮುಳುಗಿಬಿಟ್ಟಿರಬಹುದು. ಜೀವ ಹೋದಮೇಲೆ ದೇಹಗಳೆರಡೂ ಕಟ್ಟಿಗೆಯಂತೆ ಒಂದನ್ನೊಂದು ಬಿಗಿಯಾಗಿ ಹಿಡಿದುಕೊಂಡು ಸೆಳವಿಗೆ ತೇಲುತ್ತ ಹೋಗಿರಬಹುದು. ಏನೇ ಇರಲಿ, ಪಾಪ! ಆ ಹೆಂಗಳೆಯರೀರ್ವರೂ ಒಂದು ಜನ್ಮದಿಂದ ಪಾರಾಗಿ, ಆ ಜನ್ಮದಲ್ಲಿ ಮಾಡಿದ ಕೃತಿಗಳ ಬಗ್ಗೆ ಜಗದೀಶನೆದುರಿನಲ್ಲಿ ಉಸುರಲು ಹೊರಟುಹೋದರು!

ಹೀಗೆ ಆ ಎರಡೂ ಶವಗಳು ತೇಲುತ್ತ ಸುಮಾರು ಏಳು ಹರದಾರಿಗಳವರೆಗೆ ಹೋಗಿ ಮುಂದೆ ನರಗುಂದ ಸಂಸ್ಥಾನದ ಅಧಿಕಾರಕ್ಕೊಳಪಟ್ಟ ಬೂದ್ಯಾಳವೆಂಬ ಗ್ರಾಮದ ಬಳಿಯಲ್ಲಿ ದಂಡೆಗೆ ಹತ್ತಿದವು. ಆ ಸ್ಥಳದ ಹತ್ತಿರವಲ್ಲಿಯೇ ಇದ್ದ ಒಬ್ಬ ಮನುಷ್ಯನು ಆ ಎರಡೂ ಶವಗಳನ್ನು ನೋಡಿ, ಆ ಸುದ್ದಿಯನ್ನು ಊರಲ್ಲಿ ಯಾರ ಮುಂದೆಯೂ ಹೇಳದೆ, ಹೊಸದಾಗಿ ಇಂಗ್ರೇಜಿ ಸರಕಾರದಿಂದ ನಿಯಮಿಸಲ್ಪಟ್ಟ ಮೇಲಧಿಕಾರಿಯ ಬಳಿಗೆ ಹೋಗಿ, ಆ ಅನಾಥ ಪ್ರೇತಗಳ ಬಗ್ಗೆ ತಿಳಿಸಿದನು. ದಹನಕಾರ್ಯವು ಅದಷ್ಟು ಬೇಗನೇ ಮುಗಿಯುವಂತೆ ಪ್ರಯತ್ನಿಸಹತ್ತಿದನು. ಸುದೈವದಿಂದ ಹೊಸ ಅಧಿಕಾರಿಯು ಒಬ್ಬ ಬ್ರಾಹ್ಮಣನೇ ಆಗಿದ್ದನು. ಆತನು ಈ ವಿಷಯವನ್ನು ತನ್ನ ಮೇಲಧಿಕಾರಿಗೆ ತಿಳಿಸಿ ಅವುಗಳ ಅಗ್ನಿಸಂಸ್ಕಾರಕ್ಕೆ ಅಪ್ಪಣೆ ಪಡೆದುಕೊಂಡು ಆ ಶವಗಳಿದ್ದಲ್ಲಿ ಬರುವಷ್ಟರಲ್ಲಿ ಗ್ರಾಮಸ್ಥರು ಪಂಚನಾಮೆ ಮಾಡಿಯೇಬಿಟ್ಟದ್ದರಿಂದ ಕಟ್ಟಿಗೆಗಳನ್ನೊಟ್ಟಿಸಿ ಶವಗಳನ್ನು ಅವರ ಮೇಲಿ

ಟ್ಟರು. ಅವರ ಪರಿಚಯವಿದ್ದ ಆ ಗುಂಪಿನಲ್ಲಿಯ ಸ್ತ್ರೀಪುರುಷರು ಅವರ ಅತುಲವಾದ ಸಂಪತ್ತು, ಅಧಿಕಾರ ಇವುಗಳನ್ನು ನೆನೆಸಿಕೊಂಡು ಮರುಗಿದರು. ಮುಖಕ್ಕೆ ಸೆರಗು ಹಾಕಿಕೊಂಡು ಅತ್ತರು. ಗೋಳಿಟ್ಟರು. ಅವರೀರ್ವರಿಂದಲೂ ಉಪಕೃತರಾದ ಸ್ತ್ರೀಪುರುಷರು « ನಮ್ಮ ಆಶ್ರಯದಾತಳು ಇಂದು ಹೋದಳು. ನಮ್ಮನ್ನು ದುಃಖಸಾಗರದಲ್ಲಿ ನೂಕಿ ಕಣ್ಮರೆಯಾದಳು. ” ಎಂದು ಮುಂತಾಗಿ ಅಲ್ಲಿ ಮಿಲಿತರಾದವರೆಲ್ಲ ಅವರೀರ್ವರ ಒಂದೊಂದು ಗುಣವನ್ನು ನೆನೆನೆನೆಸಿಕೊಂಡು ಕಣ್ಣೀರುದರಿಸಿದರು. ಅಪರಿಚಿತರಿಗೂ ಕೂಡ ಆ ಶವಗಳ ರೂಪಚರ್ಯೆಯ ಮೇಲಿಂದ ಇವರು ಯಾವದಾದರೂ ಶ್ರೀಮಂತ ಮನೆತನದ ಹೆಣ್ಣುಮಕ್ಕಳಿರಬೇಕೆಂದೆನಿಸಿತು. ಈ ಸುದ್ದಿಯು ಆಂಗ್ಲ ಅಧಿಕಾರಿಗೆ ತಿಳಿದೊಡನೆ ಆತನು “ ಶವಗಳಿಗೆ ಅಗ್ನಿ ಸಂಸ್ಕಾರವನ್ನು ಈಗಲೇ ಮಾಡಕೂಡದು. ಅವರು ಭಾಸ್ಕರರಾಯನ ಮನೆತನದವರಿರಬೇಕೆಂಬ ಸಂಶಯವು ನಮಗೆ ಬಂದಿದೆ. ಕಾರಣ ಜಪ್ತಿ ಇಡಬೇಕು” ಎಂದು ಪತ್ರ ಬರೆದು ಅದನ್ನು ಒಂದು ಚೀಲದಲ್ಲಿ ಹಾಕಿ ಒಬ್ಬ ಸಿಪಾಯಿಯ ಕಡೆಯಿಂದ ಕಳಿಸಿಕೊಟ್ಟನು.

ಇನ್ನು ಶವಗಳಿಗೆ ಅಗ್ನಿ ಸಂಸ್ಕಾರ ಮಾಡಬೇಕೆನ್ನುವಷ್ಟರಲ್ಲಿ ಆ ಸಿಪಾಯಿಯು ಧಾವಿಸಿ ಅಲ್ಲಿಗೇ ಆ ಸ್ಮಶಾನಕ್ಕೇ ಬಂದು, ಆ ಬ್ರಾಹ್ಮಣ ಅಧಿಕಾರಿಗೆ ತಾನು ತಂದ ಚೀಲವನ್ನು ಕೊಟ್ಟನು. ಅವನ್ನು ಕೈಯಲ್ಲಿ ತೆಗೆದುಕೊಂಡು « ಮತ್ತೇನು ಅಪ್ಪಣೆಯಾಗಿರಬಹುದೆಂದು ’ ತುಸು ಹೊತ್ತು ವಿಚಾರಮಾಡಿ, ಆ ಧೂರ್ತನಾದ ಅಧಿಕಾರಿಯು ಅದನ್ನು ಬಿಚ್ಚಿ ನೋಡದೆ, ದಹನಕಾರ್ಯವನ್ನಂತೂ ಮೊದಲು ಮುಗಿಸಿಬಿಡೋಣ. ಬಳಿಕ ನೋಡಿಕೊಂಡರಾಯಿತು ಎಂದು ನಿಶ್ಚಯಿಸಿ ತ್ವರೆಯಿಂದ ಆ ಶವಗಳಿಗೆ ಅಗ್ನಿಸಂಸ್ಕಾರಮಾಡಿಸಿದನು. ಶವಗಳು ಅರ್ಧಮರ್ಧ ಸುಟ್ಟಬಳಿಕ ಚೀಲವನ್ನು ಬಿಚ್ಚಿ ಓದಿನೋಡಿದನು. “ ನಾನು ತರ್ಕಮಾಡಿದ್ದು ನಿಜವಾಯಿತು ” ಎಂದು ಮನದಲ್ಲಿಯೇ ಅಂದುಕೊಂಡು, ಅದಕ್ಕೆ ಉತ್ತರವಾಗಿ “ ತಾವು ಮೊದಲು ಅಪ್ಪಣೆ ಕೊಟ್ಟ ಮೇರೆಗೆ ಶವಗಳನ್ನು ದಹನಮಾಡಲು ಅಪ್ಪಣೆಕೊಟ್ಟೆನು. ನಿಮ್ಮ ಎರಡನೆಯ ಅಪ್ಪಣೆಯಂತೆ ಅವುಗಳನ್ನು ಹಾಗೆಯೇ ಇಡಲು ಪ್ರಯತ್ನಿಸಿದೆನು. ಆದರೆ ಅಗ್ನಿಯ ಮುಂದೆ ಯಾರ ಆಟವೂ ನಡೆಯಲಿಲ್ಲ. ಶವಗಳೆರಡೂ ಭಸ್ಮವಾಗಿಹೋಗಿವೆ. ” ಎಂದು ಬರೆದು ಮತ್ತೊಂದು ಚೀಲದಲ್ಲಿ ಹಾಕಿ ಆ ಸಿಪಾಯಿ ಸಂಗಡ ಕಳಿಸಿಕೊಟ್ಟನು.

ಬ್ರಾಹ್ಮಣ ಅಧಿಕಾರಿಯ ಚಪಲತೆಯಿಂದ ದಹನಕಾರ್ಯವು ಕೊನೆಗಂಡಿತು. ಅತ್ತ ಆ ಸಿಪಾಯಿಯು ಕೊಟ್ಟ ಚೀಲವನ್ನು ಒಡೆದು ಆ ಆಂಗ್ಲ ಅಧಿಕಾರಿಯು ಉತ್ತರವನ್ನು ಓದಿಕೊಂಡನು. ಶವಗಳು ಭಸ್ಮೀಭೂತವಾದವೆಂಬ

ದನ್ನು ಓದಿ ಆತನಿಗೆ ಅತಿಶಯವಾದ ಕೆಡಕೆನಿಸಿತು ದಹಿಸಲು ತಾನೇ ಮೊದಲು ಅಪ್ಪಣೆಕೊಟ್ಟಿದ್ದರಿಂದಲೇ ಆತನು ಸುಮ್ಮನಿದ್ದನು.

ಬೂದ್ಯಾಳ ಜನರೂ, ಅಧಿಕಾರಿಯೂ "ನಾವು ನಮ್ಮ ಕರ್ತವ್ಯವನ್ನು ಮಾಡಿದೆವೆಂದು' ಸಮಾಧಾನ ಹೊಂದಿದರು. ಮನುಷ್ಯಜಾತಿಯ ಸ್ವಭಾವಕ್ಕನುಗುಣವಾಗಿ ಇನ್ನೂ ಅನೇಕ ಜನರು ಶೋಕಮಾಡುತ್ತಲೇ ಇದ್ದರು. ಕೆಲವರು ಅವರೀರ್ವರ ಔದಾರ್ಯವನ್ನು ನೆನಿಸಿ ದುಃಖಿಸುತ್ತಿದ್ದರು ಕೆಲವರು "ಅವರು ಬಹಳ ಅಂತಃಕರುಣಿಗಳಿದ್ದರೆಂದು" ಕಣ್ಣೀರು ಹಾಕುತ್ತಿದ್ದರು. ಹೀಗೆ ಒಂದಿಲ್ಲೊಂದು ಗುಣವರ್ಣನೆಯನ್ನು ಮಾಡುತ್ತ ಮರುಗುತ್ತಲಿದ್ದರು. ಇದನ್ನು ಕಂಡು ಅಲ್ಲಿಯೇ ಇದ್ದ ಒಬ್ಬ ಪಂಡಿತನು ಎಲ್ಲರನ್ನೂ ಸಮಾಧಾನಗೊಳಿಸಬೇಕೆಂದು ಗಟ್ಟಿಯಾಗಿ ...... ಮಿತ್ರರೇ, ನಾವು ಈಗ ಯಾರ ಔರ್ಧ್ವದೇಹಿಕ ಕಾರ್ಯಕ್ಕಾಗಿ ಒಮ್ಮನದಿಂದ ಇಲ್ಲಿ ಕೂಡಿರುವೆವೋ, ಅವರು ಜೀವದಿಂದಿದ್ದಾಗ ಎಷ್ಟೇ ದೊಡ್ಡ ಯೋಗ್ಯತಾಸಂಪನ್ನರಿದ್ದಾಗ್ಯೂ, ಕೂಡ ಸದ್ಯಕ್ಕೆ ಅನಾಥ ಸ್ಥಿತಿಯಲ್ಲಿ ಅವರು ಇದ್ದರು. "ಅನಾಥಪ್ರೇತ ಸಂಸ್ಕಾರಂ ಕೋಟಿಯಜ್ಞಫಲಂ ಲಭೇತ್" ಎಂಬ ನಮ್ಮ ಧರ್ಮವಚನಕ್ಕನುಸಾರವಾಗಿ ನಾವು ನಮ್ಮ ಕರ್ತವ್ಯವನ್ನು ಮಾಡಿದೆವು ನಮ್ಮ ಈ ಆಂಗ್ಲನಿಯೋಜಿತ ನೂತನ ಅಧಿಕಾರಿಗಳು ಈ ಕಾರ್ಯವನ್ನು ಜರಗಿಸುವದಕ್ಕೆ ನಮಗೆ ಒಳ್ಳೇ ಸಹಾಯಮಾಡಿದ್ದರಿಂದ ಇವರನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ ಸರಿ. ಇನ್ನು ಇಲ್ಲಿ ನೆರೆದವರೆಲ್ಲನೇಕರು "ಅವರೀರ್ವರು ಭಾಸ್ಕರರಾಯನ ಮನೆತನದವರೆಂದು" ಮಾತನಾಡುತ್ತಿರುವರು. ನಿಜವಾಗಿ ಅವರು ಭಾಸ್ಕರರಾಯನ ಆಪ್ತರೇ ಇದ್ದಾಗ್ಯೂ ಕೂಡ ಸದ್ಯದ ಅವರ ಸ್ಥಿತಿಯನ್ನು ನೋಡಿದರೆ, ಅಂದರೆ ಅವರು ಹೀಗೆ ನದಿಯಲ್ಲಿ ಬಿದ್ದು ಪ್ರಾಣತ್ಯಾಗಮಾಡಿದುದು ಯೋಗ್ಯವಾಗಲಿಲ್ಲ. ಒಂದುವೇಳೆ ಅವರು ಜೀವಂತವಾಗಿದ್ದರೆ ಇಂಗ್ಲಿಷ ಸರಕಾರದವರು ಅವರನ್ನು ತೋಫಿನ ಬಾಯಿಗೆ ಕೊಟ್ಟಾಗಲೀ, ಅಥವಾ ನೇಣಹಾಕಿಸಿಯಾಗಲೀ ಕೊಲ್ಲುತ್ತಿರಲಿಲ್ಲ. ಪಾಪ! ಇವರೇನು ಮಾಡಿಯಾರು ? ನಿಜವಾದ ಅಪರಾಧಿಯು ಭಾಸ್ಕರರಾಯನು; ಅವನು ಸಿಕ್ಕಿದ್ದರೆ ಅವನಿಗೆ ಮಾತ್ರ ದೇಹಾಂತ ಶಿಕ್ಷೆಯಾಗುತ್ತಿತ್ತು. ಈಗಲಾದರೂ ಆತನು ಸಿಕ್ಕರೆ ಅವನಿಗೆ ಆ ಶಿಕ್ಷೆಯು ಕಟ್ಟಿಟ್ಟದ್ದೇ! ಈ ಸ್ತ್ರೀಯರಿಗೆ ಉಪಜೀವನಕ್ಕಾಗಿ ಸರಕಾರದವರು ವರ್ಷಾಶನವನ್ನು ಕೊಡುತ್ತಿದ್ದರು. ಇದು ನಿಜವು. ಇದೊಂದು ದೃಷ್ಟಿಯ ವಿಚಾರ. ಇನ್ನು ಮತ್ತೊಂದು ರೀತಿಯಿಂದ ವಿಚಾರಮಾಡುವಾ. ಇಂಗ್ಲಿಷರ ವಿರುದ್ಧವಾಗಿ ಬಂಡಾಯವನ್ನು ಹೂಡಿದವರಲ್ಲಿ ಭಾಸ್ಕರರಾಯನೇ ಮುಖ್ಯನಾದುದರಿಂದ, ಅವರು ಇವನ ಮೇಲೆ ಬೆಂಕಿ ಕಾರುತ್ತಿದ್ದದ್ದು ಸ್ವಾಭಾವಿಕವು. ಬಂಡಾಯದ ಗೊಂದಲದಲ್ಲಿ ಭಾಸ್ಕರರಾಯನ ಸಂಬಂ

ಧಿಕರೆಂದು ಭಾವಿಸಿದ ಈ ಹೆಣ್ಣುಮಕ್ಕಳು ನೀಚ ಜನರ ಕೈಯಲ್ಲಿ ಒಂದುವೇಳೆ ಸಿಕ್ಕಿದ್ದರೆ ನಾನಾ ತರಹದ ಸಂಕಟಗಳಿಗೂ, ಮಾನಹಾನಿಗೂ ಗುರಿಯಾಗಬೇಕಾಗುತ್ತಿತ್ತು. ನಿಜವಾಗಿಯೂ ಈ ಹೆಂಗಳೆಯರು ಅವರೇ ಆಗಿದ್ದರೆ, ಹೀಗೆ ವಿಚಾರಮಾಡಿಯೇ ಅವರು ತಮ್ಮ ಧರ್ಮ, ಹಾಗು ಮಾನರಕ್ಷಣೆಗಾಗಿ ಇಹಲೋಕಯಾತ್ರೆಯನ್ನು ಮುಗಿಸಿರಲಿಕ್ಕೆ ಸಾಕು. ಏನೇ ಇರಲಿ ಪ್ರಾಣ ಕಳೆದುಕೊಂಡುದಂತೂ ನಿಜವಲ್ಲವೇ ? ಮಿತ್ರರೇ, ಇದೆಷ್ಟು ಕರುಣಾಜನಕವಾದ ಸ್ಥಿತಿಯು ನೋಡಿರಿ! ಶಿರಿವಂತರ ಮನೆಯಲ್ಲಿ ಹುಟ್ಟಿ ಬೆಳೆದು ಆಗಭ-ಶ್ರೀಮಂತನನ್ನು ವರಿಸಿ ದುಃಖದ ಕಲ್ಪನೆಯು ಕನಸಿನಲ್ಲಿಯೂ ಕೂಡ ಬಾರದ, ಉದಾರ ಹೆಂಗಸರಿಗೆ ಒಮ್ಮೆಲೆ ಎಂಥ ಪ್ರಸಂಗ ಒದಗಿ ಬಂದಿತು ನೋಡಿರಿ. ಅವರು ಅಪಮಾನದ ಭಯದಿಂದ ಕೋಮಲವಾದ ತನುವನ್ನು ಮಲಾಪಹಾರಿಯಲ್ಲಿ ಈಡಾಡಿ, ಪ್ರಾಣ ತ್ಯಜಿಸಿದರು. ಮುಂದೆ ಒದಗಬಹುದಾದ ಅವಮಾನದಿಂದ ಮುಕ್ತರಾಗಿ ಈಶಬಳಿಗೆ ಪ್ರಯಾಣ ಬೆಳೆಸಿದರು. ಇನ್ನು ನಾವು ಅವರ ವಿಷಯದಲ್ಲಿ ಹೀಗೆ ಶೋಕಮಾಡುತ್ತ ಕೂಡ್ರುವದು ತರವಲ್ಲ. ಪರಲೋಕದಲ್ಲಿಯಾದರೂ ಭಯವಿಮ್ಮುಕ್ತವಾದ ಆತ್ಮಕ್ಕೆ ಶಾಂತಿ ದೊರೆಯಲೆಂದು ಶಾಂತ ಚಿತ್ತದಿಂದ ಪರಮೇಶ್ವರನನ್ನು ಪ್ರಾರ್ಥಿಸುವಾ. ಅಂದರೆನೇ ನಾವು ನಮ್ಮ ಕರ್ತವ್ಯವನ್ನು ಪೂರ್ಣ ಮಾಡಿದಂತಾಗುವದೆಂದು ನನ್ನ ಪ್ರಾಮಾಣಿಕವಾದ ಮತವು ಇನ್ನು ಆ ಹೆಂಗಸರು ' ನಮ್ಮ ಅಪಮಾನವಾದೀತು ನಾವು ನಾನಾ ಪ್ರಕಾರದ ಕಷ್ಟಗಳಿಗೆ ಯಾತನೆಗಳಿಗೆ ಗುರಿಯಾಗಬೇಕಾದೀತು '' ಎಂದು ವಿಚಾರ ಮಾಡಿದುದು ನಿಜವೋ ಹೇಗೆಂಬದನ್ನು ವಿಚಾರಿಸುವಾ ! ಅವರು ತಮ್ಮ ಅಂತಃಪುರದಲ್ಲಿಯೇ ನಿಂತುಕೊಂಡಿದ್ದರೆ ಬ್ರಿಟಿಶ್ ಸೈನ್ಯದಲ್ಲಿಯ ನೀಚ ನರಪಶುಗಳ ದೃಷ್ಟಿಗೆ ಬಿದ್ದಿದ್ದರೆ, ಏನಾಗುತ್ತಿತ್ತೆಂಬದನ್ನು ಹೇಳಲು ಬರುವಂತಿಲ್ಲ. ಇನ್ನು ಮತ್ತೊಂದು ವಿಚಾರ ನೀಚ ಜನರು ಅಂತಃಪುರದಲ್ಲಿ ಪ್ರವೇಶ ಮಾಡದೆ ಮೊದಲಿಗೆ ಸದ್ಗುಣಿಗಳಾದ ಮೇಲಧಿಕಾರಿಗಳೇ ಕಾಲಿಟ್ಟಿದ್ದರೆ ಅವರ ಸ್ಥಿತಿಯು ಈ ತರದ್ದಾಗುತ್ತಿದ್ದಲ್ಲವೆಂದೇ ಹೇಳಲೂ ಬರುವಂತಿಲ್ಲ. ಯಾಕಂದರೆ " ಆರಾಜಕತೆಯ ಕಾಲದಲ್ಲಿ ಬುದ್ಧಿವಂತರ ಬುದ್ಧಿಯೂ ಕೂಡ ಭ್ರಂಶವಾಗುವದು '' ಎಂದು ಬಲ್ಲವರು ಅನ್ನುವರು. ಹೊನ್ನು, ಹೆಣ್ಣು, ಮಣ್ಣುಗಳನ್ನು ಬಯಸದ ಪ್ರಾಣಿಯೇ ಇಲ್ಲವೆಂದು ಒಂದು ಗಾದೆಯ ಮಾತಿದೆ. ಈ ಸ್ತ್ರೀಯರಲ್ಲಿ ಎರಡೂ ಜೋಡಿಯಾಗಿದ್ದವು. ಹೀಗೆ ಯಾವ ದೃಷ್ಟಿಯಿಂದ ವಿಚಾರ ಮಾಡಿ ನೋಡಿದರೂ ಈಗ ಆದದ್ದೇ ಒಳಿತಾಯಿತೆನ್ನಲು ಏನೂ ಅಡ್ಡಿ ಕಾಣುವದಿಲ್ಲ. ಕಾರಣ ಎಲ್ಲರೂ ಸಮಾಧಾನ ಪಡಬೇಕೆಂದು ನನಗೆ ಅನಿಸುತ್ತದೆ. '' ಎಂದು ಮಾತನಾಡಿದನು.

ಶಾಸ್ತ್ರಿಗಳ ಭಾಷಣದಿಂದ ಜನರು ಶಾಂತಚಿತ್ತರಾಗಿ ಮನೆಗೆ ಹೋದರು. ಆದರೂ ಮುಂದೆ ಎಷ್ಟೋ ದಿವಸಗಳ ವರೆಗೆ ಆ ಸಂಗತಿಯನ್ನು ಅವರು ಮರೆತಿರಲಿಲ್ಲ.

'ಭಾಸ್ಕರರಾಯನೂ ಅವನ ಮುತ್ಸದ್ದಿಗಳೂ, ಅವನ ಮನೆಯವರೂ ಎತ್ತ ಹೋಗಿರಬಹುದು' ಎಂಬ ದೊಡ್ಡ ವಿಚಾರವು ಇಂಗ್ಲಿಷ ಅಧಿಕಾರಿಗಳನ್ನು ಗೊಂದಲದಲ್ಲಿ ಕೆಡವಿತ್ತು. ಬೂದ್ಯಾಳದಲ್ಲಿ ಸುಟ್ಟ ಆ ಎರಡೂ ಶವಗಳು ಭಾಸ್ಕರರಾಯನ ಮನೆತನದ ಹೆಣ್ಣುಮಕ್ಕಳವೇ ಎಂದು ಅನ್ನಬೇಕಾದರೆ ಮೈಮೇಲೆ ಒಂದು ಗುಂಜಿ ತೂಕ ಬಂಗಾರವಿರಲಿಲ್ಲ. ಅವರ ಮುಖಚರ್ಯದ ಮೇಲಿಂದಲೇ ಯಾವನಾದರೊಬ್ಬ ಶ್ರೀಮಂತನ ಮನೆತನದವರಿರಬೇಕೆಂದು ಜನರು ತರ್ಕಿಸಿದರು. ಆದರೆ ಇವರು ಇಂಥವರ ಮನೆತನದವರೇ ಎಂದು ಯಾರೂ ಹೇಳಲಿಲ್ಲ. ನಿಜಸ್ಥಿತಿಯು ಯಾರಿಗೆ ಗೊತ್ತಿತ್ತು. ಅವರು ಬಾಯಿಮುಚ್ಚಿಕೊಂಡು ಸುಮ್ಮನೆ ಕುಳಿತುಕೊಂಡು ಬಿಟ್ಟರು. ನಿಜವನ್ನು ಹೇಳಿದರೆ ಆ ಶವಗಳ ಅವಮಾನವನ್ನು ಇಂಗ್ಲಿಷರು ಮಾಡದೆ ಬಿಡರೆಂದು ತಿಳಿದುಕೊಂಡೇ ಹೇಳಲಿಲ್ಲ. ಆ ಹೆಣಗಳಾದರೂ ಸುಡದೆ ಹಾಗೆಯೇ ಇಡಲ್ಪಟ್ಟಿದ್ದರೆ ನಿಜವು ಹೊರಬೀಳುತ್ತಿತ್ತು. ಅದಕ್ಕೂ ಮಾರ್ಗವಿಲ್ಲದಾಗಿದೆ "ಇವರು ಭಾಸ್ಕರರಾಯನ ಮನೆಯವರೆಂಬದನ್ನು ಪೂರ್ಣವಾಗಿ ಅರಿತ ಬ್ರಾಹ್ಮಣರು ಯುಕ್ತಿಯಿಂದ ಅಪ್ಪಣೆಯನ್ನು ದೊರೆಕಿಸಿಕೊಂಡು ಅವುಗಳಿಗೆ ಶೂದ್ರರ ಸ್ಪರ್ಶ ಮಾಡಿಸದೆ, ಶಾಸ್ತ್ರದಲ್ಲಿ ಹೇಳಿದ ಮೇರೆಗೆ ವಿಧಾನಪೂರ್ವಕವಾಗಿ ಅಂತ್ಯ ಕರ್ಮಗಳನ್ನು ಶ್ರೀಮಂತರಿಗೊಪ್ಪುವಂತೆ ಮಾಡಿಸಿದರು. ಇದರ ಮೇಲಿಂದ ನೋಡಲಾಗಿ ಅವರ ಸ್ವಾಭಿಮಾನವು ಇನ್ನೂ ಜಾಗ್ರತಾವಸ್ಥೆಯಲ್ಲಿದೆಯೆನ್ನಲು ಏನೂ ಅಡ್ಡಿಯಿಲ್ಲ.

ಭಾಸ್ಕರರಾಯನ ತಾಯಿ ಯಮುನಾಬಾಯಿಯು ಸದ್ಗುಣಿಯೂ ಸುವಿಚಾರಿಯೂ ಇದ್ದದರಿಂದ ಅಂಥ ಬಿಕ್ಕಟ್ಟಿನ ಪ್ರಸಂಗದಲ್ಲಿಯೂ ಧೈರ್ಯಗೆಡದೆ, ಸೊಸೆಯೊಂದಿಗೆ ಕೋಟೆಯಿಂದ ಹೊರಬಿದ್ದು, ಅಬಲೆಯರಿಗೆ ಯೋಗ್ಯವಾದ ಯಾವ ಉಪಾಯವು ಅವಳಿಗೆ ಸೂಚಿಸಿತೋ, ಅದರಂತೆ ಕೂಡಲೆ ಕಾರ್ಯವನ್ನು ಜರುಗಿಸಿ ಬಿಟ್ಟಳು. ಈ ಕೃತ್ಯದಲ್ಲಿಯೂ ಅವಳ ದೂರದರ್ಶಿತ್ವವು ಒಡೆದು ಕಾಣುವಂತಿದೆ. ಹೇಗಂದರೆ ಅವಳು ತನ್ನ ಸೊಸೆಯ ಮೈಮೇಲಿನ ಆಭರಣಗಳನ್ನೆಲ್ಲ ತೆಗಿಸದೆ ಇದ್ದರೆ, ತಮ್ಮ ಮುಂದಿನ ಕಾರ್ಯಕ್ಕೆ ಭಂಗಬಂದೀತೆಂಬ ವಿಚಾರದಿಂದಲೇ ಅವಳು ಆಭರಣಗಳನ್ನೆಲ್ಲ ತೆಗಿಸಿಬಿಟ್ಟಳು. ಇದರಿಂದ ಅವಳು ಎರಡು ಕಾರ್ಯಗಳನ್ನು ಸಾಧಿಸಿದಳು. ತಮ್ಮ ದೇಹದ ವಿಡಂಬನೆಯಾಗದಂತೆ ಎಚ್ಚರ ತೆಗೆದುಕೊಂಡುದು ಮೊದಲನೆಯದು. ಮತ್ತು

ವಿಶೇಷ ದ್ರವ್ಯಪ್ರಾಪ್ತಿಯಾದೀತೆಂಬ ಆಶೆಯಿಂದ ಇವರನ್ನು ಆಶ್ರಯಿಸಿಕೊಂಡಿದ್ದ ರಾಮಚಂದ್ರನ ದಾರಿದ್ರ್ಯವನ್ನು ದೂರಮಾಡಿದುದು ಎರಡನೆಯದು.

ಭಾಸ್ಕರರಾಯನ ಪತ್ನಿಯಾದ ಸಾವಿತ್ರಿಬಾಯಿಯು ಅನುಪಮ ಸೌಂದರ್ಯವತಿಯೂ, ಸಕಲ ಸದ್ಗುಣಮಣಿಯೂ ಆಗಿದ್ದಳು. ಆದದರಿಂದಲೇ ಭಾಸ್ಕರರಾಯನ ಪ್ರೇಮವು ಅವಳಲ್ಲಿ ಅಚಲವಾಗಿ ನೆಲಿಸಿತ್ತು. ಒಂದು ವೇಳೆ ಭಾಸ್ಕರರಾಯನಿಗೆ ಅವಳಲ್ಲಿ ಪುರುಷಸಂತತಿಯಾಗಿ, ಆತನು ಬಂಡಾಯವನ್ನು ಮಾಡದೆ ಇದ್ದರೆ ಈಗಿರುವ ಸ್ವದೇಶಿ ಸಂಸ್ಥಾನಗಳಲ್ಲಿ ಆತನು ಮೊದಲನೆಯ ಸಂಸ್ಥಾನಿಕನಾಗಿರುತ್ತಿದ್ದನು. ಇರಲಿ. ಮೊಗ್ಗೆಯು ಹೂವಾಗುವ ಪೂರ್ವದಲ್ಲಿಯೇ ಅದನ್ನು ಚಿವುಟಿದಂತೆ, ನರಗುಂದ ಸಂಸ್ಥಾನದ ಅವಸ್ಥೆಯಾಯಿತೇ. ನರಗುಂದ ಸಂಸ್ಥಾನವೆಂಬ ಒಂದು ಸಂಸ್ಥಾನವು ಇತ್ತೋ ಇಲ್ಲವೋ ಎಂದು ಈಗಿನ ಜನರು ಪೂರ್ವದ ಹಿರಿಯರನ್ನು ಕೇಳುವಂತಾಯಿತು. ಕಾಲಚಕ್ರವು ಇಷ್ಟು ವಿಪರೀತವಾಗಿದೆ.

ಈಗಿನ ಕಾಲದಲ್ಲಿ ಅತ್ತೆಸೊಸೆಯರು ಒಮ್ಮತದವರಾಗಿ ಅನ್ಯೋನ್ಯ ಪ್ರೀತಿಯಿಂದಿರುವದು ತೀರ ವಿರಳ. ಬಹು ಪ್ರಯಾಸಬಟ್ಟು ಶೋಧಿಸಿದರೆ ಎಲ್ಲಿಯಾದರೂ ಅಂಥವರು ಕ್ವಚಿತ್ತಾಗಿ ದೊರೆಯಬಹುದು. ಆದರೆ ಪೂರ್ವದಲ್ಲಿ ಹೀಗಿರಲಿಲ್ಲ. ಎಲ್ಲ ಮನೆತನಗಳಲ್ಲಿಯೂ ಅವರು ಅನ್ಯೋನ್ಯ ಪ್ರೀತಿಯಿಂದಿದ್ದು ಪೂರ್ಣ ಸುಖಿಗಳಾಗಿದ್ದರು. ಭಾಸ್ಕರರಾಯನ ಪತ್ನಿಯು, ತನ್ನ ಅತ್ತೆಯನ್ನು ತಾಯಿಯೆಂದು ತಿಳಿದು ಅವಳ ಆಜ್ಞೆಯನ್ನು ಮೀರಿ ಎಂದೂ ನಡೆಯುತ್ತಿರಲಿಲ್ಲ. ಒಂದುವೇಳೆ ಅವರಲ್ಲಿ ಒಮ್ಮತವಿಲ್ಲದೆ ಹೋಗಿದ್ದರೆ ಅವರು ಈ ದುರ್ಘಟ ಪ್ರಸಂಗದಿಂದ ಪಾರಾಗದೆ ಇಂಗ್ಲಿಷರ ಕೈಯಲ್ಲಿ ಸಿಗುತ್ತಿದ್ದರೆಂಬುದು ಖಂಡಿತವಾದ ಮಾತು. ಹೀಗಿರದ್ದರಿಂದಲೇ ಅವರು ಒಂದೇ ಕಾಲಕ್ಕೆ ಮುಕ್ತರಾಗಿ ಹೋದರು. ಸಾಯುವವರೆಗೂ ಸಾವಿತ್ರಿಬಾಯಿಯು ಅತ್ತೆಯ ಆಜ್ಞಾನುವರ್ತಿಯಾಗಿಯೇ ಇದ್ದದರಿಂದ ಅವರೀರ್ವರು ಅವಮಾನ ಹೊಂದುವದಕ್ಕಿಂತ ಮೊದಲೇ ಕಣ್ಣು ಮುಚ್ಚಿದರು. ಮುಂದೆಯೂ ಅವರ ಮೇಲೆ ಅನಿಷ್ಟ ಪ್ರಸಂಗವು ಬರಲಿಲ್ಲ.

---

# ೧೧ನೆಯ ಪ್ರಕರಣ.



ತಮಗೆ ಅಪಜಯವಾಗುವದೆಂಬ ಲಕ್ಷಣಗಳು ಕಾಣಹತ್ತಿದೊಡನೆ, ಭಾಸ್ಕರರಾಯನೂ ಅವನ ಮುತ್ಸದ್ದಿಗಳೂ ಜೀವರಕ್ಷಣಾರ್ಥವಾಗಿ ಓಡಿಹೋದ ವಿಷಯವನ್ನು ಈ ಮೊದಲೇ ಐದನೆಯ ಪ್ರಕರಣದಲ್ಲಿ ಹೇಳಿದ್ದೇವೆ. ಅವರೆಲ್ಲರೂ ಭಾಸ್ಕರರಾಯನನ್ನು ಹಿಂಬಾಲಿಸಿರಲಿಲ್ಲ. ಆತನೊಡನೆ, ವಿಷ್ಣು ಕುಲಕರ್ಣಿ, ರಾಘೋಪಂತ, ಮತ್ತು ಮೂರು ನಾಲ್ಕು ಜನರು ಇದ್ದರು. ಇವರೆಲ್ಲರೂ ಕೂಡಿ ಒಂದೇ ಸವನೇ ಕೆಲಕಾಲ ಓಡಿಹೋಗಿ ನಿರ್ಭಯವಾದ ಸ್ಥಳವು ಕಂಡರೆ ತುಸು ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಇಚ್ಛಿಸಿದ್ದರು. ಆದರೆ ವೈರಿಗಳ ಹೆದರಿಕೆಯಿಂದ ಹಾಗೆ ನಿಲ್ಲುವ ಮನಸ್ಸು ಮಾಡದೆ ಹಾಗೆಯೇ ಮುಂದೆ ಪಲಾಯನಕ್ಕಾರಂಭಮಾಡಿದರು. ಓಡಿಓಡಿ ಎಲ್ಲರೂ ದಣಿದರು. ಮುಂದೆ ನಡೆಯಲು ಬಾರದಂತಾಯಿತು. ಆಗ ಭಾಸ್ಕರರಾಯನು “ಮಿತ್ರರೇ, ಓಡಿ ಬಹಳ ದಣುವಾಗಿದೆ. ಕಾರಣ ತುಸು ವಿಶ್ರಾಂತಿಯನ್ನು ತಕ್ಕೊಂಡು ಮುಂದೆ ಹೋಗುವಾ. ನಾವೀಗ ಅರಣ್ಯದಲ್ಲಿಯ ಮಧ್ಯಭಾಗಕ್ಕೆ ಬಂದಿದ್ದೇವೆ. ಇಲ್ಲಿ ವೃಕ್ಷಗಳು ದಟ್ಟವಾಗಿ ಬೆಳೆದಿವೆ. ಸೂರ್ಯನ ಪ್ರಕಾಶವು ಕೂಡ ಇಲ್ಲಿ ಕಾಣುವದಿಲ್ಲ. ಕಾರಣ ಎದುರಿಗೆ ಕಾಣುವ ಆ ವಿಶಾಲವಾದ ಮರದ ಬುಡದಲ್ಲಿ ತುಸು ಹೊತ್ತು ಕುಳಿತುಕೊಳ್ಳೋಣ ಬರ್ರಿ.” ಎಂದು ನುಡಿಯುತ್ತ ಆ ಸ್ಥಳಕ್ಕೆ ಹೋಗಿ ಮುಟ್ಟಿದನು. ಮೊದಲು ತಾನು ಕುಳಿತುಕೊಂಡು, ಅವನಿಗೂ ವಿಶ್ರಮಿಸಲು ಹೇಳಿದನು. ಅವರು ಅವನ ಸುತ್ತಲು ಕುಳಿತುಕೊಂಡರು. ಬಳಿಕ ತುಸು ಹೊತ್ತಿನ ಮೇಲೆ ಏನೋ ವಿಚಾರ ಮಾಡಿದವನಂತೆ ಮಾಡಿ ಭಾಸ್ಕರರಾಯನು ರಘುನಾಥನಿಗೆ “ರಘುನಾಥಾ, ನಮ್ಮ ಸ್ಥಿತಿಯು ಹೀಗಾದೀತೆಂದು ಕನಸಿನಲ್ಲಿಯಾದರೂ ಅನಿಸಿದ್ದಿತೇ? ಆ ಮನೆಮುರುಕರು ನಮ್ಮ ಮದ್ದಿನ ಸಂಗ್ರಹವನ್ನು ಕೆಡಿಸದಿದ್ದರೆ ನಮ್ಮ ಸೀಪಾಯಿಗಳು ಪಲಾಯನ ಮಾಡುತ್ತಿದ್ದರೇ? ಎಂದೂ ಹಿಂಜರಿಯುತ್ತಿದ್ದಿಲ್ಲ. ನಮ್ಮ ದುರ್ಗವು ಬಹು ಭದ್ರವಾದದ್ದಿದ್ದದ್ದರಿಂದ ಶತ್ರುಗಳಿಂದ ನಮಗೆ ಭಯವಿದ್ದಿಲ್ಲ. ನಮ್ಮ ತುಬಾಕಿಯವರೂ, ತೋಪುಗಳನ್ನು ಹಾರಿಸುವ ಸೈನಿಕರೂ ಗುರಿ ಹೊಡಿಯುವವರಲ್ಲಿ ಮೇಲಾದವರು. ಮದ್ದಿನ ಸಂಗ್ರಹವೂ ತೀವ್ರ ತೀರುವಂತಿರಲಿಲ್ಲ. ಇಷ್ಟು ಸೌಕರ್ಯಗಳಿದ್ದರೂ ವ್ಯರ್ಥವಾಯಿತು. ಗೃಹಭೇದಿಗಳಾದ ಆ ನೀಚ ಜನರು ಎಲ್ಲವನ್ನೂ ಕೆಡಿಸಿ ಹಾಳುಮಾಡಿದರು. ಏನು ಮಾಡಲಿ? ಆ ಕೃತಘ್ನರು ನನ್ನ ಕೈಗೆ ಸಿಕ್ಕಿದ್ದರೆ ಅವರನ್ನು ನುಚ್ಚುನುರಿಯಾಗಿ ಕಡಿದು ನನ್ನ ಕ್ರೋಧವನ್ನಾದರೂ ಶಾಂತಗೊಳಿ

ಸುತ್ತಿದ್ದೆನು. ನಮ್ಮವರೇ ಹೀಗೆ ಕೊರಳು ಕತ್ತರಿಸಹತ್ತಿದರೆ ನಮ್ಮ ಆಟವು ಹೇಗೆ ಸಾಗಬೇಕು? ಆದರೂ ಏನಾಯಿತು. ರಘುನಾಥರಾಯಾ, ಆ ಸ್ವಾರ್ಥ ಪರಾಯಣನಾದ ಕೃಷ್ಣರಾಯನು ನಮ್ಮ ಕೃಪೆಯಿಂದ ಪಾರಾದರೂ, ಜಗದೀಶನು ಆತನ ನೀಚ ಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಆತನಿಗೆ ಕೊಡದೇ ಬಿಡನು. ತನ್ನೊಬ್ಬನ ಸ್ವಾರ್ಥದ ಪೆಸೆಯಿಂದ ಸಾವಿರಾರು ಜನರನ್ನು ಸಾವಿಗೀಡು ಮಾಡಿದನು. ಅಸಂಖ್ಯರನ್ನು ಅನ್ನಕ್ಕೆ ಎರವು ಮಾಡಿದನು. ಅವರ ಅನ್ನದಲ್ಲಿ ಮಣ್ಣುಗೂಡಿಸಿದನು. ಇದೆಲ್ಲವನ್ನು ಸರ್ವಸಾಕ್ಷಿಯಾದ ಸ್ವಾಮಿಯು ನೋಡುತ್ತ ಸುಮ್ಮನೆ ಕೂಡ್ರುವನೆಂದು ತಿಳಿದಿಯಾ! ಇಲ್ಲ. ಇಲ್ಲ. ಆಗುವದನ್ನೆಲ್ಲ ಆತನು ಇನ್ನೂ ನೋಡುತ್ತ ಸುಮ್ಮನೆ ಕುಳಿತಿದ್ದಾನೆ. ನಮ್ಮ ಅದೃಷ್ಟದಲ್ಲಿ ವಿಧಿಯು ಏನನ್ನು ಬರೆದಿದ್ದನೋ, ಅದಂತೂ ಆಗಿ ಹೋಯಿತು. ಮುಂದೆಯೂ ಆಗುವದು. ಆದರೆ ಆ ಕೃತಘ್ನನ ಕಲ್ಯಾಣವೆಂದಿಗೂ ಆಗದು. ಇದು ಖಂಡಿತ. ನಮ್ಮ ಸ್ಥಿತಿಯು ಹೀಗಾಯಿತೆಂದು ಶೋಕಮಾಡುವ ಕಾರಣವಿಲ್ಲ. ನೋಡಿರಿ. ದ್ವಾಪರ ಯುಗದಲ್ಲಿಯ ಭೀಮ, ಅರ್ಜುನಾದಿ ಪಾಂಡವರೇನು ಕಡಿಮೆಯ ಶೂರರೇ? ಅಂತಹರನ್ನು ಕೂಡ ದುಷ್ಟರಾದ ದುರ್ಯೋಧನಾದಿಗಳು ಮೋಸಗೊಳಿಸಿ ಲೆತ್ತದಾಟದಲ್ಲಿ ಸೋಲಿಸಿ, ಅವರ ಸೊತ್ತನ್ನೆಲ್ಲ ಅಪಹರಿಸಿ ಅಡವಿಗೆ ಅಟ್ಟಲಿಲ್ಲವೇ? ಅಂತಹರ ಅವಸ್ಥೆಯೇ ಹಾಗಾದ ಬಳಿಕ ನಮ್ಮಂತಹರ ಪಾಡೇನು? '' ಎಂದನು-

ಬಳಿಕ ರಘುನಾಥರಾಯನು " ಮಹಾರಾಜ, ಪಾಂಡವರ ಮಾತೇ ಬೇರೆ. ಪರಾಕ್ರಮಿಗಳಾದ ಅವರು ವನವಾಸಿಗಳಾದರೂ, ಅವರಿಗೆ ಪರಮಾತ್ಮನಾದ ಶ್ರೀಕೃಷ್ಣನ ಪೂರ್ಣ ಸಹಾಯ್ಯವಿತ್ತು. ಹಾಗೆ ನಮಗಾದರೂ ಸಹಾಯಕರಿದ್ದಿದ್ದರೆ ನಾವೂ ಹೆದರುತ್ತಿದ್ದಿಲ್ಲ. ಪಾಂಡವರ ಹಾಗೂ ಕೃಷ್ಣನ ಕಥೆಹಾಗಿರಲಿ. ನಮಗೆ ಈಗಲಾದರೂ ಯಾರಾದರೂ ಸಹಾಯ್ಯ ಮಾಡಲು ಸಿದ್ಧರಾದರೆ ವೈರಿಯ ಹೆಸರುಳಿಯದಂತೆ ಮಾಡುವೆವು. ನಾವು ಹೀಗೆ ಆಶೆಬಡುವದು ಈ ಕಾಲದಲ್ಲಿ ಕೇವಲ ಮೂರ್ಖತನದ್ದಾಗಿದೆ. ಶೂರರೆಂದು ಹೆಸರಾದ ನಾವೇ ಈಗ ಹೆಂಗಳೆಯರಂತೆ ಪ್ರಾಣರಕ್ಷಣೆಗಾಗಿ ವನದಲ್ಲಿ ಓಡಾಡುತ್ತಲಿದ್ದೇವೆ. ಆತ್ಮರಕ್ಷಣೆಗಾಗಿ ಶಸ್ತ್ರವನ್ನು ತರಬೇಕೆಂಬ ಅರಿವು ಕೂಡ ಒಬ್ಬರಿಗೂ ಬರಲಿಲ್ಲ. ನಮ್ಮವರೇ ನಮ್ಮನ್ನು ನಾಶಗೊಳಿಸಲುದ್ಯುಕ್ತರಾದ ಬಳಿಕ, ಮಾಡುವದೇನು? ಇದೆಲ್ಲವನ್ನು ಮನಸ್ಸಿನಲ್ಲಿ ತಂದರೆ, ಸರ್ವಸಂಗ ಪರಿತ್ಯಾಗ ಮಾಡಿ ಗಿರಿಕಂದರಗಳಲ್ಲಿ ಎಲ್ಲಿಯಾದರೂ ಇದ್ದುಕೊಂಡು, ಈಶ ಚಿಂತನೆಯನ್ನು ಮಾಡುತ್ತ ಕಾಲ ಕಳೆಯುವದೇ ಉತ್ತಮವೆಂದು ನನಗನಿಸುತ್ತದೆ. '' ಎಂದು ಮಾತನಾಡಿದನು.

ರಘುನಾಥರಾಯನ ಭಾಷಣವನ್ನು ಕೇಳಿ ಭಾಸ್ಕರರಾಯನು ರಘುನಾ

ಥರಾಯಾ ನಿನ್ನ ಮಾತು ನಿಜವು ಆ ದುರಾತ್ಮರು ನರಗುಂದದಲ್ಲಿ ಪ್ರ ಯವನ್ನುಂಟುಮಾಡಿರಬಹುದು. ಪರಮೇಶ್ವರನು ನಮ್ಮ ಮೇಲೊಂದು ಭಯಂ ಕರವಾದ ಸಂಕಟವನ್ನೇ ತಂದಿದ್ದಾನೆ. ಇದರಿಂದ ಪಾರಾಗುವ ಮಾರ್ಗವೇ ಕಾಣಲೊಲ್ಲದು. ಯಾಕಂದರೆ, ನಮ್ಮ ಸುತ್ತಲೂ ಶತ್ರುಪಿನ ರಾಜ್ಯವು ಪಸ ರಿಸಿದೆ. ನಮ್ಮ ಜನರ ಸ್ಥಿತಿಯಾದರೂ ನಮ್ಮಂತೆಯೇ ಆಗಿದೆ. ಜಾತ್ಯಾಭಿ ಮಾನವೂ, ಸ್ವಜನ ಹಾಗೂ ಸ್ವದೇಶಾಭಿಮಾನವೂ ನಾಮಶೇಷವಾಗಿವೆ. ಅದಪ ರಿಂದ ಈಶೇಚ್ಛೆಯಿದ್ದಂತೆ ಆಗಲಿ. ಎಲ್ಲ ಭಾರವನ್ನು ಆತನ ಮೇಲೆ ಇಟ್ಟು ಸ್ವಸ್ಥರಾಗೋಣ '' ಎಂದು ಅಂದನು.

" ಮಹಾರಾಜ, ನೀವನ್ನುವದು ನಿಜವು. ಆದರೆ ಮನುಷ್ಯನ ಮೇಲೆ ಕಷ್ಟ ಗಳು ಬರತೊಡಗಿದವೆಂದರೆ, ಆತನು ಮೂಢನಾಗುವನು, ವಿಘ್ನಗಳು, ಎತ್ತ ಲಿಂದ, ಹೇಗೆ, ಯಾವಾಗ ಬರುವವೆಂಬುದು ನಿಯಮವಿಲ್ಲ ಈಗ ನನಗೊಂದು ಸಂಗತಿಯು ನೆನಪಾಗಿದೆ. ಅದನ್ನು ತಮಗೆ ತಿಳಿಸದೆಯೂ ಬಿಡುವಂತಿಲ್ಲ. '' ಎಂದು ರಘುನಾಥರಾಯನು ನಿಟ್ಟುಸುರು ಬಿಟ್ಟನು.

' ಹಾಗಿದ್ದರೆ ಹೇಳಿರಿ, ಅನುಮಾನವೇಕೆ? ನಮ್ಮ ಸದ್ಯದ ಸ್ಥಿತಿಯಲ್ಲಿ ಸುಖದುಃಖಗಳೆರಡು ಸಮವಾಗಿವೆ. ಸುಖವೆಂದು ಹಿಗ್ಗುವ ಹಾಗಿಲ್ಲ. ದುಃಖ ಕುಗ್ಗುವ ಹಾಗಿಲ್ಲ. ನೀವು ಹೇಳುವ ಸಂಗತಿಯು ದುಃಖಕರವಾದ್ದದ್ದೇ ಎಂಬು ದರಲ್ಲಿ ಸಂದೇಹವಿಲ್ಲ. ಏನೇ ಇರಲಿ. ಅನುಮಾನಿಸದೆ ಹೇಳಿಬಿಡಿರಿ '' ಎಂದು ನುಡಿದನು.

ಕಠಿಣ ಮನಸ್ಕನಾಗಿ ರಘುನಾಥರಾಯನು ಹೇಳತೊಡಗಿದನು. " ಮಹಾ ರಾಜ, ಮಾತೋಶ್ರೀಯವರೂ ಅತ್ತಿಗೆಯವರೂ ಸಂಗಳ ಬಳಿಯಲ್ಲಿ ಮಲಾಪ ಹಾರಿಯಲ್ಲಿ ಹಾರಿಕೊಂಡು ಸ್ವರ್ಗವನ್ನೈದಿದರು. ಪ್ರೇತಗಳ ಅಂತ್ಯಸಂಸ್ಕಾ ರವು ಬೂದ್ಯಾಳಗ್ರಾಮದಲ್ಲಿ ಕೊನೆಗಂಡಿತೆಂದು ವಿಶ್ವಸನೀಯವಾದ ಸುದ್ದಿ ಬಂದಿದೆ. ''

ಮಮತೆಯ ಮಾತೆ ಹಾಗೂ ಪ್ರೇಮದ ಪತ್ನಿಯರು ಮರಣ ಹೊಂದಿದ ವೃತ್ತಾಂತವನ್ನು ಕೇಳಿದೊಡನೆ ಮೊದಲು ಮೊದಲು ಭಾಸ್ಕರರಾಯನಿಗೆ ಅತಿ ಕಷ್ಟವಾಯಿತು. ಆದರೆ ಅವರು ದುಃಖದ ಬದಲಾಗಿ ಆನಂದವನ್ನೇ ವ್ಯಕ್ತಮಾ ಡಿದರು. ಮತ್ತು " ರಘುನಾಥರಾಯಾ, ಈ ಸುದ್ದಿಯನ್ನು ಕೇಳಿ ನನಗೆ ನನ್ನ ಮೈಮೇಲಿನ ಒಂದು ಭಾರವು ತುಸು ಕಡಿಮೆಯಾದಂತನಿಸಿದೆ. ನಾನಾದರೂ ಮನೆಯಿಂದ ಹೊರಡುವ ಮೊದಲು, ಅವರೀರ್ವರಿಗೂ " ನಿಮಗೆ ಯೋಗ್ಯ ತೋ ರಿದ ಮಾರ್ಗವನ್ನನುಸರಿಸಿರಿ. ನಮ್ಮ ಧರ್ಮದ, ಮತ್ತು ಮನೆತನದ

ಸ್ಥಾನಕ್ಕೆ ಕುಂದು ಬರದಂತೆ ನಡೆಯಿರಿ '' ಎಂದು ಹೇಳಿಯೇ ಹೊರಬಿದ್ದಿದ್ದೆನು. ಆದರೂ ಆಗಾಗ ಅವರ ಸಂಬಂಧದ ವಿಚಾರವು ಮನದಲ್ಲಿ ಹುಟ್ಟುತ್ತಿತ್ತು ಅದೀಗ ಇಲ್ಲದಂತಾಯಿತು. ಆದುದು ಉತ್ತಮವೇ ಆಯಿತು. ಒಂದು ವೇಳೆ ಅವರು ಆ ನೀಚರ ಕೈಗೆ ಸಿಕ್ಕುಬಿದ್ದಿದ್ದರೆ ಅವರ ಅವಸ್ಥೆ ಏನಾಗುತ್ತಿತ್ತೋ ಆ ಪರಮೇಶ್ವರನೇ ಬಲ್ಲ. ಅದಾವುದೂ ಆಗದೆ ಅವರು ಯಾವ ಪ್ರಕಾರದ ಅನಿಷ್ಟವನ್ನೂ ಅನುಭವಿಸದೆ ಕಣ್ಣು ಮುಚ್ಚಿದುದನ್ನು ಕೇಳಿ ನನಗೆ ಅತ್ಯಾನಂದವಾಗಿದೆ. ಇನ್ನೂ ಉಳಿದುದೆಂದರೆ ನನ್ನ ಸ್ವಂತದ್ದೊಂದೇ ಚಿಂತೆ. ಅದಕ್ಕಾಗಿ ನಾನು ಏನೂ ಚಿಂತೆ ಮಾಡುವದಿಲ್ಲ. ಭೋಗದಲ್ಲಿದ್ದದ್ದು ಬಚ್ಚಿಕೊಂಡರೂ ಬಿಡದು. ಆಗಲಿ ಮತ್ತೇನಾದರೂ ಸುದ್ದಿ? ಮತ್ತಾರಾದರೂ ಸಿಕ್ಕಿರುವರೇನು? ' ಎಂದು ಪ್ರಶ್ನೆ ಮಾಡಿದನು.

ಅದನ್ನು ಕೇಳಿದೊಡನೆಯೇ ರಘುನಾಥರಾಯನು " ರಾಮರಾಯನ ಬಳಿಯಲ್ಲಿ ನಮ್ಮ ಗೋವಿಂದರಾಯರ ಮಗ ಕೃಷ್ಣರಾಯನಿದ್ದ ಸುದ್ದಿಯು ಬ್ರಿಟಿಶರಿಗೆ ಗೊತ್ತಾಯಿತು. ಕೂಡಲೆ ಅವರು ಅವನ ಶೋಧವನ್ನು ನಡೆಸಿದರು. ರಾಮರಾಯನು ಕೃಷ್ಣರಾಯನನ್ನು ಅಡವಿಯಲ್ಲಿ ಬಿಟ್ಟು ಹೋಗಿಬಿಟ್ಟನು. ಆದರೆ ಸುದೈವದಿಂದ ಆ ಬಾಲಕನು ಮತ್ತ್ಯಾರ ಕೈಗೂ ಸಿಗದೆ ಗೋವಿಂದರಾಯನ ಕೈಗೆ ಸಿಕ್ಕನು. ಬ್ರಿಟಿಶರು ತಂದೆ ಮಕ್ಕಳನ್ನೂ ನರಗುಂದಕ್ಕೆ ಹಿಡತರಿಸಿದ್ದರು. ಅಲ್ಲಿ ಸಾಹೇಬನು ಸ್ವತಃ ಬಾಲಕನಿಗೆ ಕೆಲವು ಸಂಗತಿಗಳನ್ನು ಕೇಳಿದನು. ಆದರೆ ಅವಕ್ಕೆಲ್ಲ ದಿಟ್ಟತನದಿಂದ ಆ ಬಾಲಕನು ಉತ್ತರಕೊಟ್ಟು ತನಗೆ ಯಾವ ಸಂಗತಿಯೂ ಗೊತ್ತಿಲ್ಲವೆಂದು ಹೇಳಿ ಪಾರಾದನು. ಸಾಹೇಬನು ನಿಜವನ್ನು ಹೊರಡಿಸಬೇಕೆಂದು ಅವನಿಗೆ ತಿನ್ನುವ ಜೀನಸುಗಳನ್ನೂ, ಚಿನ್ನದ ಒಡವೆಗಳನ್ನೂ ಕೊಟ್ಟು ಆಶೆ ಹಚ್ಚಿದನು. ಆದರೆ ಆ ಬಾಲಕನು ಅವಕ್ಕೆ ಮರುಳಾಗದೆ ತನಗೆ ಏನೂ ಗೊತ್ತಿಲ್ಲವೆಂದೇ ಹೇಳಿದನು. ಆತನು ಹೇಳಿದುದು ಸಾಹೇಬನಿಗೂ ನಿಜವೆನಿಸಿದ್ದರಿಂದ ಅವರನ್ನು ಬಿಟ್ಟುಬಿಟ್ಟನು. ಮತ್ತು ಊರ ಜನರೂ ಸಾಹೇಬನೂ ಗೋವಿಂದರಾಯನಿಗೆ ನರಗುಂದದಲ್ಲಿಯೇ ಇರಬೇಕಾಗಿ ಕೇಳಿಕೊಂಡರು. ಆಗ ಅವರು " ನನ್ನ ಬಂಧುಗಳೆಲ್ಲ ಕೂಡಿದಾಗಲೇ ಇಲ್ಲಿ ಇರುವದಕ್ಕೆ ಬರುವೆನು '' ಎಂದು ನುಡಿದರಂತೆ. ನನಗೆ ತಿಳಿದಷ್ಟು ಸರಕಾರದ ಚರಣದಲ್ಲಿ ವಿದಿತಮಾಡಿದ್ದೇನೆ. ಎಂದು ನುಡಿದನು.

" ರಘುನಾಥರಾಯಾ, ಏನಿದು ! ಇನ್ನು ಮೇಲೆ ಸರಕಾರದ ಸನ್ನಿಧಿಯಲ್ಲಿ; ಎನ್ನುವದನ್ನು ಬಿಟ್ಟು ಬಿಡು. ಸಾಮಾನ್ಯ ಮಿತ್ರನಂತೆ ಹೆಸರಿನಿಂದ ಕರೆ. ನನ್ನ ವೈಭವದೊಂದಿಗೆ ನನ್ನ ಬಹುಮಾನವಾಚಕ ಶಬ್ದಗಳು ಹೋದವೆಂದು ತಿಳಿ '' ಎಂದು ಭಾಸ್ಕರರಾಯನು ಮಾತನಾಡಿದನು.

ಛೀ! ಛೀ! ಅದು ಹೇಗೆ? ನಮ್ಮ ದೇಹದಲ್ಲಿ ಎಲ್ಲಿಯವರೆಗೆ ಪ್ರಾಣವಿರುವದೋ ಅಲ್ಲಿಯವರೆಗೆ ತಮ್ಮ ಬಹುಮಾನಕ್ಕೆ ಎಂದೂ ವ್ಯತ್ಯಯ ಬರಲಾರದು. ವೈಭವವು ಹೋದರೂ, ಅದನ್ನು ದೊರಕಿಸುವ ತಾವು ಇದ್ದೇ ಇರುವಿರಿ. ಮತ್ತು ನಿಮ್ಮ ಸೇವಕರಾದ ನಾವೂ ಇರುವೆವು. ಅಂದ ಬಳಿಕ ಆ ಬಹುಮಾನವೊಂದೇ ಎಲ್ಲಿಗೆ ಹೋಗುವದು ?'' ಎಂದು ರಘುನಾಥರಾಯನು ನುಡಿದನು.

ನಿಮ್ಮ ಇಚ್ಛೆಯಿದ್ದಂತಾಗಲಿ! ಆದರೆ ರಘುನಾಥರಾಯಾ, ನೀನು ಹೇಳಿದ ಎರಡೂ ವೃತ್ತಾಂತಗಳನ್ನು ಕೇಳಿದಾಗಿನಿಂದ ನನಗೆ ವಿಶೇಷವಾದ ಆನಂದವೇ ಆಗಿದೆ. ನನ್ನೆದುರಿಗೇ ನನ್ನ ತಾಯಿ, ಹೆಂಡತಿಯರು ಮಾನರಕ್ಷಣೆ ಮಾಡಿಕೊಂಡು ಮುಕ್ತರಾಗಿ ಹೋದರೂ ನಮ್ಮ ಮೇಲೆ ಇಂಗ್ಲಿಷರ ಸಿಟ್ಟು ಬಹಳ. ಓಗಿರುವಲ್ಲಿ ನಮ್ಮ ಮನೆಯವರು ಅವರ ಕೈಗೆ ಸಿಕ್ಕಿದ್ದರೆ, ಅವರ ಪರಿಣಾಮವೇನಾಗುತ್ತಿತ್ತೋ ದೇವರೇ ಬಲ್ಲ. ಅವರು “ನಾವು ಜೀವದಿಂದಿದ್ದು ಎಲ್ಲಿಯಾದರೂ ಗುಪ್ತವಾಗಿದ್ದರೂ ಕೂಡ ಒಮ್ಮಿಲ್ಲೊಮ್ಮೆ ವೈರಿಗಳ ಕೈಗೆ ಸಿಕ್ಕು ಬೀಳಬಹುದೆಂದು” ಭಾವಿಸಿ ಅವರ ಕೈಗೆ ಸಿಗದಂತೆ ಹೋಗಬೇಕೆಂದು ನಿಶ್ಚಯ ಮಾಡಿಯೇ ಪ್ರಾಣ ವಿಸರ್ಜನೆ ಮಾಡಿರಲಿಕ್ಕೆಬೇಕು. ಏನೇ ಮಾಡಲಿ. ನಮ್ಮ ಮಾನವನ್ನು ರಕ್ಷಿಸಿದರು. ಇನ್ನು ಕೃಷ್ಣರಾಯನಾದರೂ ಒಳ್ಳೇ ಜಾಣ ಹುಡುಗ. ನಾನು ನಿಮಗೆ ಹೇಳಿರಲಿಲ್ಲವೇ ಆತನು ದೈವಶಾಲಿಯಾಗುವನೆಂದು ಅವನ ಮುಖಲಕ್ಷಣವೇ ಹಾಗಿದೆ. ಆತನು ತನ್ನ ಬುದ್ಧಿಬಲದಿಂದ ತಾನು ಪಾರಾದುದಲ್ಲದೆ ತನ್ನ ತಂದೆಯನ್ನೂ ಪಾರು ಮಾಡಿದನು. ಆತನಿರದೆ ಮತ್ತೊಬ್ಬ ಯಾವನಾದರೂ ಹುಡುಗನಾಗಿದ್ದರೆ ಗಾಬರಿಗೊಂಡು ಇಲ್ಲದ್ದೊಂದು ಹೇಳಿ ತಂದೆಯನ್ನು ತೋಫಿನ ಬಾಯಿಗೆ ಕೊಡಿಸುತಿದ್ದನಲ್ಲದೆ ತಾನೂ ಮರಣಹೊಂದುತ್ತಿದ್ದನು. ಇದೂ ನೆಟ್ಟಗಾಯಿತು. ನಮಗೆ ಇನ್ನೂ ಯಾರ ಸಹಾಯ್ಯದ ಅವಶ್ಯಕತೆಯು ಇಲ್ಲ. ಬೇಕಾದಂಥ ಕಠಿಣ ಪ್ರಸಂಗವು ಬರಲಿ, ಬೆದರುವದಿಲ್ಲ. ಸಹಿಸಲು ಸಿದ್ಧನಿದ್ದೇನೆ. ಆದರೂ ರಘುನಾಥರಾಯಾ, ನೀನೂ, ಇಲ್ಲಿ ಕುಳಿತವರೂ ಪೂರ್ಣ ವಿಚಾರ ಮಾಡಿ ನಿಶ್ಚಯಾತ್ಮಕವಾದ ಉತ್ತರವನ್ನು ಹೇಳಿರಿ. ನಾನೊಂದು ಪ್ರಶ್ನೆ ಕೇಳತ್ತೇನೆ. ಇಲ್ಲಿ ಕೂಡಿದ ನಾವೆಲ್ಲರೂ ನಿಜವಾಗಿ ಅಪರಾಧಿಗಳಾಗಿರದಿದ್ದರೂ ವೈರಿಗಳ ದೃಷ್ಟಿಯಿಂದ ಪೂರ್ಣ ಅಪರಾಧಿಗಳಿಗಳೇ ಆಗಿರುವೆವು. ಆದದರಿಂದ ಅವರು ನಮ್ಮ ಶೋಧವಾಗದ ತನಕ ಸುಮ್ಮನೆ ಕೂಡರು. ಆಕಾಶ ಪಾತಾಳಗಳನ್ನು ಒಂದು ಮಾಡಿ ಹುಡುಕುವರು. ನಮ್ಮವರಿಗೆ ಧನದ ಆಶೆಹಚ್ಚಿ ನಮ್ಮನ್ನು ಹೆಡಮುರಿಗೆ ಕಟ್ಟಿ ಒಯ್ಯುವರು. ಬಳಿಕ ನಾನಾ ಪ್ರಕಾರದಿಂದ ಪೀಡಿಸಿ ಕೊಲ್ಲುವರು. ಇದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ನಾವೆಲ್ಲ ಒಮ್ಮೆಲೆ ಅವರ ಕೈಗೆ ಸಿಕ್ಕು ಬಿದ್ದು ಅನ್ಯೋನ್ಯ ತಾಪವನ್ನು ನೋಡುವದರಲ್ಲೇನು ಅರ್ಥ

ಏದೆ. ಕಾರಣ ಪ್ರತಿಯೊಬ್ಬರು ತಮಗೆ ಯೋಗ್ಯವೆಂದು ಕಂಡ ಮಾರ್ಗವನ್ನ ನುಸರಿಸಿ ನಡೆಯುವದು ಹಿತವು. ಆದದರಿಂದ ನಿಮ್ಮ ನಿಮ್ಮ ಅಭಿಪ್ರಾಯ ವನ್ನು ತಿಳಿಸಿರಿ. ನನ್ನ ಮಾತನ್ನು ಕೇಳಿ ನಿಮಗೆ ಸಂಶಯ ಉಂಟಾಗಿರಬ ಹುದು. ಹಾಗೇನು ತಿಳಿಯುವ ಕಾರಣವಿಲ್ಲ. ಕೆಲವು ದಿವಸಗಳಿಂದ ನನಗೆ ದುಃಸ್ವಪ್ನಗಳು ಬೀಳಹತ್ತಿವೆ. ಸ್ವಪ್ನಗಳಿಗೆ ನಾನು ಹೆದರುವೆನೆಂದು ಮಾತ್ರ ತಿಳಿಯಬೇಡಿರಿ ಮುಂಜಾನೆ ಬಿದ್ದ ಕನಸು ಎಂದೂ ಸುಳ್ಳಾಗಲಾರವೆಂದು ನನಗೆ ಅನಿಸಿದೆ. ನನ್ನ ಮನದ ನಿಜಸ್ಥಿತಿಯನ್ನು ನಿಮ್ಮ ಮುಂದೆ ಹೇಳಬೇಕೆಂದೆನಿಸಿದ್ದ ರಿಂದಲೂ ಹಾಗೆ ಹೇಳುವದು ನನ್ನ ಕರ್ತವ್ಯವಾದುದರಿಂದಲೂ, ನಿಮಗೆ ತಿಳಿಸಿ ದ್ದೇನೆ. ತಾವು ಯಾವ ಪ್ರಕಾರದ ಸಂಕೋಚವನ್ನು ಹಿಡಿಯದೆ, ನಿರ್ದಾಕ್ಷಿ ಣ್ಯದಿಂದ ನಿಮ್ಮ ನಿಮ್ಮ ಅಭಿಪ್ರಾಯಗಳನ್ನು ಹೇಳಿ ಬಿಡಿರಿ. ಸುಮ್ಮನಿರುವ ದೆಂದರೆ ಸ್ವಘಾತವನ್ನು ಮಾಡಿಕೊಂಡಂತೇ ಸರಿ.' ಎಂದು ನುಡಿದನು.

ಭಾಸ್ಕರರಾಯನ ಭಾಷಣವನ್ನು ಕೇಳಿ, ಎಲ್ಲರೂ ಉದಾಶೀನರಾದರು. ಕೆಲವೇಳೆಯವರೆಗೆ ವಿಚಾರದಲ್ಲಿ ಮಗ್ನರಾದರು. ಬಳಿಕ ರಘುನಾಥರಾಯನು ಮೌನತೆಯನ್ನು ಭಂಗಿಸಿ, "ಮಹಾರಾಜ ಪ್ರಸಂಗದ ಕಡೆಗೆ ಲಕ್ಷ್ಯಗೊಟ್ಟು ಎಲ್ಲರೂ ತಮಗೆ ಯೋಗ್ಯ ಕಂಡ ಕಡೆಗೆ ಹೋಗಬೇಕು. ಯಾಕಂದರೆ, ಬಲಿಷ್ಟ ರನ್ನು ಕೆಣಕಿ ವೈರಿಗಳನ್ನಾಗಿ ಮಾಡಿಕೊಂಡಿದ್ದೇವೆ. ಎಲ್ಲರಿಗೂ ವೈರಿಗಳಾಗಿ ದ್ದೇವೆ. ನಾವು ಜಯಶಾಲಿಗಳಾಗಿದ್ದರೆ ನಮ್ಮ ದೇಶದ ಹಿತವೇ ಆಗುತ್ತಿತ್ತು. ಆದರೇನು, ಎಲ್ಲವೂ ವಿಫಲವಾದುದರಿಂದ ಕಳ್ಳರಂತೆ ಅಡವಿಯಲ್ಲಿ ಕುಳಿತು ಜೀವರಕ್ಷಣಾರ್ಥವಾಗಿ ವಿಚಾರ ಮಾಡಬೇಕಾಗಿದೆ. ಹೀಗೆ ವಿಚಾರ ಮಾಡು ವದು ಯೋಗ್ಯವಿದೆ. ಇಲ್ಲಿಂದ ನಾವು ಪ್ರತಿಯೊಬ್ಬರೂ ಬೇರೆ ಬೇರೆ ಮಾರ್ಗವ ನ್ನನುಸರಿಸಿ ಹೋಗಿ ಒಂದೆಡೆಯಲ್ಲಿ ಒಟ್ಟುಗೂಡಬೇಕು. ಹೀಗೆ ಒಟ್ಟುಗೂ ಡಲು ನೇಪಾಳದ ಹೊರತಾಗಿ ಮತ್ತಾವ ಸ್ಥಳವೂ ಯೋಗ್ಯವಾಗಿ ಕಾಣಲೊ ಲ್ಲದು. ಆದದರಿಂದ ಒಬ್ಬೊಬ್ಬರೇ ಬೇರೆಯಾಗಿ ಹೊರಡುವದು ಉತ್ತಮವು. ಹೀಗೆ ಹೋಗುವಾಗ ಶತ್ರುಗಳ ಕೈ ಸೇರಿದರೆ ಒಬ್ಬನೇ ಸೇರುವನು. ಅವನು ಮಾತ್ರ ಅನುಭೋಗಿಸಬೇಕು. ಹೀಗಾಗದೆ ಎಲ್ಲರೂ ಕೂಡಿ ಹೊರಟರೆ ಎಲ್ಲರೂ ಸಿಕ್ಕು ಬೀಳಬೇಕಾಗುವದು. ಆದ್ದರಿಂದ ಬೇರೆಯಾಗಿ ಹೊರಡು ವದೇ ಮೇಲಾದದ್ದು" ಎಂದು ತನ್ನ ವಿಚಾರವನ್ನು ಹೇಳಿದನು.

ರಘುನಾಥರಾಯನ ವಿಚಾರವು ಎಲ್ಲರಿಗೂ ಸಮ್ಮತವಾಯಿತು. ಕೂಡಲೆ ಎಲ್ಲರೂ ತಮ್ಮ ತಮ್ಮ ವೇಷಗಳನ್ನು ಬದಲಿಸಿಕೊಂಡು ನೇಪಾಳವನ್ನು ಮುಟ್ಟಿದೊಡನೆ ಅಲ್ಲಿ ಒಬ್ಬರ ಶೋಧವನ್ನೊಬ್ಬರು ಮಾಡಿ ಎಲ್ಲರೂ ಒಟ್ಟುಗೂಡ

ಬೇಕೆಂದು ನಿಶ್ಚಯಿಸಿ, ಹೊರಡಲು ಸಿದ್ಧರಾದರು. ಇದು ವರೆಗೂ ಕೂಡಿಯೇ ಇದ್ದ ನಾವು ಅಗಲಬೇಕಾಯಿತಲ್ಲವೆಂದು ಎಲ್ಲರಿಗೂ ಅತಿ ಕೆಡಕೆನಿಸಿತು.

ಭಾಸ್ಕರರಾಯನು ಒಳ್ಳೇ ಧೈರ್ಯಶಾಲಿಯಾದಾಗ್ಯೂ ಕೂಡ “ ಇನ್ನು ಇವರು ನನ್ನನ್ನು ತೊಲಗಿ ಹೋಗುವವರಲ್ಲ” ವೆಂಬ ವಿಚಾರವು ಮನದಲ್ಲಿ ಬಂದೊಡನೆ ತುಸು ಭಯವಾಯಿತು. ದುಃಖವು ಉಕ್ಕಿ ಬಂದಿತು. ಕಣ್ಣೀರು ಧಾರೆಗಟ್ಟಿ ಸುರಿಯಹತ್ತಿತು. ಕುತ್ತಿಗೆಯ ಶಿರಗಳು ಉಬ್ಬಿ ಮಾತಾಡಲು ಬಾರದಾಯಿತು. ಆದರೂ ಮಾತನಾಡದೆ ಗತ್ಯಂತರವಿಲ್ಲೆಂದು ತಿಳಿದು ರಘುನಾಥರಾಯಾ, ವಿಷ್ಣುಪಂತರೇ, ಈ ಘೋರಾರಣ್ಯದಲ್ಲಿ ನನ್ನೊಬ್ಬನನ್ನೇ ಬಿಟ್ಟು ನೀವೆಲ್ಲರೂ ಹೊರಟು ಹೋಗುವಿರಾ? ಶಿವ, ಶಿವ, ಅನ್ಯ ಉಪಾಯವೇ ಇಲ್ಲ. ಆದರೆ ನೀವೆಲ್ಲ ಹೋದ ಬಳಿಕ ನನಗೆ ಸಮಾಧಾನವಾಗಬಹುದೇ? ಇಲ್ಲ! ನಿಮ್ಮ ಅಗಲುವಿಕೆಯಿಂದ ನನ್ನ ಗತಿಯೇನಾಗುವದೋ ಅದನ್ನು ನಾನು ಹೇಳಲಾರೆನು! ಅಯ್ಯೋ, ಸಾವಿರಾರು ಜನರನ್ನು ಸಂರಕ್ಷಿಸುತ್ತಿದ್ದ ನಾನು ಇಂದು ಒಬ್ಬನನ್ನೂ ಸಂರಕ್ಷಿಸದಷ್ಟು ನಿರ್ಗತಿಗನಾದೆನಲ್ಲವೇ! ಜಗದೀಶಾ, ಈ ಸ್ಥಿತಿಯಲ್ಲಿಡುವದಕ್ಕಿಂತ ಮರಣವನ್ನು ದಯಪಾಲಿಸಬಾರದೇ! ಕಾಲಗತಿಯು ವಿಚಿತ್ರವಾದದ್ದು. ಮಿತ್ರರೇ ನನ್ನನ್ನಗಲಿ ಹೋಗುವ ನೀವು ಮತ್ತೆ ನನಗೆಂದು ದರ್ಶನ ಕೊಡುವಿರಿ. ಹೇಳಿರಿ. ಈಶನ ಕೃಪೆಯಿದ್ದರೇನೇ ಪುನಃ ನಾನು ನಿಮ್ಮನ್ನು ಕಾಣುವದು. ಇಲ್ಲದೆ ಹೋದರೆ ಇದೇ ಕಡೆಯ ದರ್ಶನವು! ಮಿತ್ರರೇ, ಸ್ವರ್ಗದಲ್ಲಿಯಾದರೂ ಎಲ್ಲರೂ ಆ ಪರಮಾತ್ಮನ ಬಳಿಯಲ್ಲಿ ಮಿಲಿತರಾಗಿ ಆನಂದದಿಂದಿರೋಣ! ರಘುನಾಥರಾಯಾ ನಮ್ಮ ನಿಮ್ಮಲ್ಲಿ ಸೇವ್ಯಸೇವಕ ಸಂಬಂಧವಿದ್ದರೂ ಮಿತ್ರರಾಗಿ ನಡೆದುಕೊಂಡೆವು. ಆದದರಿಂದಲಾದರೂ ಬಿಗಿಯಾಗಿ ಅಪ್ಪಿಕೊಳ್ಳೋಣ ಬಾ! ಬಳಿಕ ನಮ್ಮ ಎದೆಯಲ್ಲಿ ಬಡಿದಿಟ್ಟ ವಿಯೋಗ ದುಃಖದ ರುಚಿ ನೋಡೋಣ! ” ಎಂದವನೇ ರಘುನಾಥರಾಯನೂ ವಿಷ್ಣುಪಂತನೂ ಕೂತಲ್ಲಿಗೆ ಹೋಗಿ ಇಬ್ಬರನ್ನೂ ಭರದಿಂದ ಅಪ್ಪಿಕೊಂಡನು. ದುಃಖಿತನಾದ ವಿಷ್ಣುಪಂತನು, ತನ್ನ ಶೋಕವನ್ನಾವರಿಸಿಕೊಂಡು “ ಮಹಾರಾಜ, ಏನಿದು? ಧೈರ್ಯಬಿಡಬೇಡಿರಿ! ಕರುಣಾಳುವಾದ ಜಗದೀಶನು ನಮ್ಮ ಮೇಲೆ ದಯೆದೋರಿ ಪುನಃ ಎಲ್ಲರೂ ಒಟ್ಟಾಗಿ ಕೂಡುವಂತೆ ಮಾಡಬಹುದು. ನಳ, ರಾಮ, ಯುಧಿಷ್ಠಿರ, ಮೊದಲಾದ ಚಕ್ರವರ್ತಿಗಳೇ ಕಲ್ಪನಾತೀತವಾದ ಶೋಕಸಾಗರದಲ್ಲಿ ಮುಳುಗಿದವರು ಮತ್ತೆ ಈಶಕೃಪೆಯಿಂದ ಪುನಃ ಸುದಿನಗಳನ್ನು ಕಂಡು ಸುಖವಾಗಿ ಬಾಳಲಿಲ್ಲವೇ? ಹಾಗೆಯೇ ನಾವು ಜಗದೀಶನ ಮೇಲೆ ಪೂರ್ಣ ಭಾರಹಾಕಿ ಒಬ್ಬರನ್ನೊಬ್ಬರು ಅಗಲಿ ಹೋಗಲೇಬೇಕು. ಶೂರರೂ ಧೀರರೂ ಎಂದು ಅನ್ನಿಸಿಕೊಳ್ಳುವ ನಾವೇ ಹೀಗೆ ಹೆಂಗಳೆಯರಂತೆ

ದುಃಖಿಸುತ್ತ ಕುಳಿತರೆ ನಮಗೆ ಜನರೇನಂದಾರು. ತುಸು ವಿಚಾರ ಮಾಡಿರಿ'' ಎಂದು ತುಸು ಪ್ರಯಾಸದಿಂದ ಮಾತಾಡಿದನು.

ವಿಷ್ಣುಪಂತನ ಈ ತರಹದ ಭಾಷಣವನ್ನು ಕೇಳಿ ದುಃಖಿಸುವದನ್ನು ಬಿಟ್ಟು, ಕಂಬನಿಗಳನ್ನೊರಿಸಿಕೊಂಡು ಎಲ್ಲರೂ ಹೊರಡಲು ಸಿದ್ಧರಾದರು. ಆದರ ಯಾರಿಂದಲೂ ಮುಂದಕ್ಕೆ ಹೆಜ್ಜೆಯನ್ನಿಡುವದಾಗಲೊಲ್ಲದು. " ಹೋಗಿ ಬರುವೆವು ' ಎಂದು ನುಡಿಯುವದಾಗಲೊಲ್ಲದು. ಆಗ ವಿಷ್ಣುಪಂತನು, ಮತ್ತೆ ಮಹಾರಾಜ, ಹೀಗೇಕೆ ಮಾಡುವಿರಿ? ನಿಮ್ಮ ಮನಸ್ಸಿದ್ದರೆ ನಾನು ನಿಮ್ಮ ಸಂಗಡಲೇ ಬರುವೆ ' ಎಂದು ನುಡಿದನು.

" ಬೇಡ, ಬೇಡ! ವಿಷ್ಣುಪಂತ ನೀನೊಬ್ಬನು ನನ್ನನ್ನು ಹಿಂಬಾಲಿಸುವದರಿಂದ ಆಗುವದಾದರೂ ಏನು? ಬೇಡ ನನ್ನ ದುರ್ದೈವದ ಫಲವನ್ನು ನಾನೇ ಉಣ್ಣುವೆನು. ಹೊರಡಿರಿನ್ನು ಬರುವೆರಾ ಹಾಗಾದರೆ ರಘುನಾಥ ರಾಯಾ, ಲೋಭ ಪೂರ್ಣವಿರಲಿ. ಎಂದು ಭಾಸ್ಕರರಾಯನು ಬಳ್ಳೀ ಕಷ್ಟ ದಿಂದ ಮಾತಾಡಿದನು.

ಅಷ್ಟರಲ್ಲಿಯೇ ತುಸು ದೂರ ಹೋಗಿದ್ದ ರಘುನಾಥರಾಯನ ಕಿವಿಗೆ ಭಾಸ್ಕರರಾಯನ ಕಡೆಯ ಶಬ್ದಗಳು ಕೇಳಿಸಿದವು. ಆತನ ತಲೆ ತಿರುಗಿದಂ ತಾಗಿ ಬವಳಿ ಬಂದು ಬಿದ್ದು ಬಿಟ್ಟನು. ಇತ್ತ ಭಾಸ್ಕರರಾಯನೂ ಎಚ್ಚರ ತಪ್ಪಿ ಇಳೆಯಲ್ಲಿ ಒರಗಿದನು. ಇದನ್ನು ಕಂಡು ವಿಷ್ಣುಪಂತನು ಧಾವಿಸಿ ಈರ್ವರ ನೆತ್ತಿಗೂ ನೀರು ಬಡಿದು ಕಣ್ಣಿಗೂ ನೀರು ಹಚ್ಚಿ ಗಾಳಿಯು ಬೀಸಹತ್ತಿ ದನು. ಅಲ್ಪಾವಕಾಶದಲ್ಲಿಯೇ ಈರ್ವರೂ ಎಚ್ಚರಾದರು. ರಘುನಾಥರಾ ಯನು " ಮಹಾರಾಜ, ನಮ್ಮ ನಿಮ್ಮಲ್ಲಿ ನೆಲಸಿದ ಅಖಂಡವಾದ ಪ್ರೀತಿಯೇ ಹೀಗಾಗಲು ಕಾರಣವು. ವಿಯೋಗವು ಮನಸ್ಸಿಗೆ ಅಸಹ್ಯವಾಗಿದೆ. ಆದರೂ ಮುಂದಿನ ವಿಚಾರದಲ್ಲಿ ದೃಷ್ಟಿಯನ್ನಿಟ್ಟು ಅಗಲಲೇ ಬೇಕು. ಮನಕ್ಕಾಗು ತ್ತಲಿರುವ ತಾಪವನ್ನು ತಡೆಯಲೇಬೇಕು. ನಾನು ನನ್ನ ಮನಸ್ಸನ್ನು ಗಟ್ಟಿ ಮಾಡಿದ್ದೇನೆ. ತಾವೂ ಸಹನಮಾಡಿಕೊಳ್ಳಿರಿ. ಕಡೆಯ ಆಶೀರ್ವಾದವೇ ಆಗ ಲೊಲ್ಲದೇಕೆ, ನಿಮ್ಮ ಕಾಲಿಗೆರಗುತ್ತಲಿರುವ ನನ್ನನ್ನು ಆಶೀರ್ವದಿಸಿರಿ '' ಎಂದು ನುಡಿದು ನಮಸ್ಕರಿಸಲು ಇನ್ನೂ ಬಾಗತಕ್ಕವನು, ಅಷ್ಟರಲ್ಲಿ ಭಾಸ್ಕರ ರಾಯನು ಹಾಗೆ ಮಾಡಗೊಡದೆ ಅವನನ್ನು ಎದೆಗವಚಿಕೊಂಡು ರೋದಿಸಹ ತ್ತಿದನು. ಆತನ ದುಃಖವನ್ನು ಲೆಕ್ಕಿಸದೆ ಅವನ ಅಪ್ಪಿಗೆಯಿಂದ ಪಾರಾಗಿ 'ಬರುವೆನಿನ್ನು' ಎಂದು ಹೇಳಿದವನೇ ಮಾರ್ಗಕ್ಕೆ ಹತ್ತಿದನು.

ರಘುನಾಥರಾಯನು ಹೋಗಹತ್ತಿದುದನ್ನು ಕಂಡು ವಿಷ್ಣುಪಂತನೂ ಭಾಸ್ಕರರಾಯನ ಚರಣಗಳ ಮೇಲೆ ಮಸ್ತಕವನ್ನಿಟ್ಟು " ಮಹಾರಾಜ, ಪುನಃ ದರ್ಶನವಾದ ದಿನವೇ ಸುದಿನವು '' ಎಂದು ನುಡಿದು ಇನ್ನು ಹೊರಡತಕ್ಕವನು·

ಅಷ್ಟರಲ್ಲಿ ಭಾಸ್ಕರರಾಯನು ಆತನನ್ನು ತಬ್ಬಿಕೊಂಡು “ವಿಷ್ಣೂ ನೀನೂ ಹೊರಟಿಯಪ್ಪ” ಎಂದು ಕೇಳಿದವನೇ ಅಳಹತ್ತಿದನು. ಆಗ ವಿಷ್ಣುಪಂತನು ಉಕ್ಕಿ ಬರುತ್ತಲಿದ್ದ ದುಃಖವನ್ನು ನುಂಗಿಕೊಂಡು ‘ಮಹಾರಾಜ, ಉಪಾಯವಿಲ್ಲ. ಈ ಪಾದಗಳ ಸೇವೆಯನ್ನು ಬಿಟ್ಟು ಹೋಗುವ ಮನಸ್ಸು ಇಲ್ಲ, ನನಗೆ ಆದರೂ ಹೋಗಲೇ ಬೇಕಾಗಿದೆ. ಬರುವೆನು ” ಎಂದು ಅಪ್ಪಣೆ ತೆಕ್ಕೊಂಡು ಆತನೂ ಹೋಗ ಹತ್ತಿದೊಡನೆ, ಹತ್ತೊತ್ತಿ ಹಿಡಿದ ದುಃಖರೂಪೀ ಪ್ರವಾಹವು ಒಮ್ಮೆಲೆ ನೇತ್ರದ್ವಾರಗಳಿಂದ ಹೊರಹೊಮ್ಮಿ ಹರಿಯಹತ್ತಿತು. ಬಾಲಕರಂತೆ ದೊಡ್ಡ ದನಿಯಿಂದ ರೋದಿಸಹತ್ತಿದನು. ಕೆಲ ನಿಮಿಷಗಳವರೆಗೆ ಅತ್ತು ಮತ್ತೆ ದುಃಖವನ್ನು ಬಿಗಿಹಿಡಿದು ಉಳಿದ ಮಂತ್ರಿಗಳಿಗೂ ಅಪ್ಪಣೆ ಕೊಟ್ಟು ಕಳುಹಿದನು.

ಹೀಗೆ ಎಲ್ಲರೂ ಬೇರೆ ಬೇರೆ ಮಾರ್ಗಗಳಿಂದ ಹೊರಟರು. ದೃಷ್ಟಿ ಮರೆಯಾಗುವವರೆಗೂ ಒಬ್ಬರನ್ನೊಬ್ಬರು ಹೊರಳಿನೋಡುತ್ತಲೇ ಇದ್ದರು. ಹೋಗಿರಿ ಎಂದು ಕೈಯಿಂದ ಸಂಜ್ಞೆಯನ್ನು ಮಾಡುತ್ತಿದ್ದರೂ ಒಬ್ಬರಿಗೊಬ್ಬರು ಕಾಣದ ಹಾಗಾಗಲು ಪ್ರತಿಯೊಬ್ಬನು ತಾನು ಮುಂದೇನು ಮಾಡಬೇಕೆಂದು ವಿಚಾರದಲ್ಲಿ ತೊಡಗಿದನು.

ಭಾಸ್ಕರರಾಯನು ಬ್ರಾಹ್ಮಣನಾದುದರಿಂದ ಅವನನ್ನನುಸರಿಸಿ ಬಂದ ಅಧಿಕಾರಿಗಳೆಲ್ಲರೂ ಬ್ರಾಹ್ಮಣರೇ ಆಗಿದ್ದರೆಂದು ಬೇರೆ ಹೇಳುವ ಕಾರಣವಿಲ್ಲ. ವೇಷಗಳನ್ನು ಧರಿಸುವ ಕಲೆಯು ಅವರಿಗೆ ಗೊತ್ತಿದ್ದಿಲ್ಲ. ಅವರೆಲ್ಲರೂ ರಾಜಕಾರಣ ಪಟುಗಳಿದ್ದುದೇನೋ ನಿಜವು. ಆದರೆ ಬಹುರೂಪಿಯಾಗುವ ಜ್ಞಾನವಿರದ್ದರಿಂದ ಬಹುತರವಾಗಿ ಎಲ್ಲರೂ ಬಡಬ್ರಾಹ್ಮಣ ಭಿಕ್ಷುಕರಂತೆ ವೇಷ ಮಾಡಿಕೊಂಡು ಹೊರಟುಹೋದರು. ಅನ್ಯವೇಷಧಾರಣೆ ಮಾಡುವದಕ್ಕೆ ಬೇಕಾಗುವ ಸಾಹಿತ್ಯಗಳು ಬಳಿಯಲ್ಲಿರಲಿಲ್ಲ. ಇದು ಬಗೆಯಾದರೂ ಹೇಗೆ? ಅವರೆಲ್ಲರೂ ಜೀವರಕ್ಷಣೆಗಾಗಿ ಓಡಿ ಬಂದವರು. ಅರಣ್ಯ ಸೇರಿದವರು. ಅಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಉಳಿದ ಒಡವೆಗಳ ನೆನಪಾದರೂ ಹೇಗಾಗಬೇಕು? ಅವರಲ್ಲಿ ವಿಷ್ಣುಪಂತನು ಮಾತ್ರ ಒಳ್ಳೇ ಜಾಣನಿದ್ದನು. ಆತನು ಮಾತ್ರ ವೈರಾಗಿಯಂತೆ ವೇಷಮಾಡಿಕೊಂಡು ಹೋದನು. ರಘುನಾಥರಾಯನೂ ಉಳಿದವರೂ ದೇಶಾವರಿ ಬ್ರಾಹ್ಮಣರಾಗಿ ಬುದ್ಧಿ ತಿಳಿದತ್ತ ಹೋದರು. ಎಲ್ಲರೂ ನೇಪಾಳದಲ್ಲಿ ನಾನಾಸಾಹೇಬನನ್ನು ಕೂಡಿಕೊಳ್ಳಬೇಕೆಂದು ನಿಶ್ಚಯಿಸಿದ್ದರೇನೋ ನಿಜ. ಆದರೆ ಅವರವರಲ್ಲಿ ಒಬ್ಬನಿಗೂ ನೇಪಾಳದ ಮಾರ್ಗವು ಗೊತ್ತಿರಲಿಲ್ಲ. ಇಷ್ಟೇ ಅಲ್ಲ ದಾರಿಯಲ್ಲಿ ಯಾರಾದರೂ “ ನೀವು ಯಾರು ’ ಎಂದು ಕೇಳಿದರೆ ಏನೆಂದು ಉತ್ತರ ಕೊಡಬೇಕೆಂಬದನ್ನು ಸಹ ಅವರು ವಿಚಾರಿಸಿದ್ದಿಲ್ಲ. ಹೀಗೆ ಆ ನರಗುಂದದ ಮುತ್ಸದ್ದಿಗಳ ಸ್ಥಿತಿಯಾಗಿತ್ತು.

---

*

# ಹನ್ನೆರಡನೆಯ ಪ್ರಕರಣ.



ನರಗುಂದದ ಅರಸನನ್ನು ಪೂರ್ಣವಾಗಿ ಸೋಲಿಸಿ, ವಿಜಯಶಾಲಿಗಳಾದ ಬ್ರಿಟಿಶ್ ಅಧಿಕಾರಿಗಳು ಬಂಡಾಯದಲ್ಲಿ ಅಂಗವಿದ್ದ ಜನರನ್ನೆಲ್ಲ ಸೆರೆಹಿಡಿದು ತಂದು ಅವರಿಗೆ ಫಾಸೀ ಶಿಕ್ಷೆಯನ್ನಾಗಲಿ, ತೋಪಿನ ಬಾಯಿಗೆ ಕೊಟ್ಟಾಗಲಿ ಕೊಲ್ಲಿಸುವ ಕಾರ್ಯವು ಕೆಲವು ದಿವಸಗಳ ವರೆಗೆ ಅವ್ಯಾಹತವಾಗಿ ಸಾಗಿತ್ತು. ನರಗುಂದದ ಹೊರಗೆ ಅಡ್ಡಾಡುವ ಜನರು, ಪ್ರತಿದಿವಸ ಏನಿಲ್ಲೆಂದರೂ, ಫಾಶೀ ಕಂಭಕ್ಕೆ ಜೋತುಬಿದ್ದ ४-६ ಜನರನ್ನೂ, ತೋಫಿನ ಬಾಯಿಗೆ ತೂಗಾಡುತ್ತಿದ್ದ ८-१० ಜನರನ್ನೂ ಹಾಗೂ ಹೊಸ ಜನರನ್ನೂ, ಫಾಶೀ ಕಂಭಕ್ಕೆ ಹತ್ತಿಸುವದನ್ನೂ, ಅವರಲ್ಲಿಯೇ ಕೆಲ ಜನರನ್ನೂ ತೋಫಿನ ಬಾಯಿಗೆ ಕಟ್ಟುವದನ್ನೂ ನೋಡುತ್ತಿದ್ದರು. ಹೀಗೆ ಶಿಕ್ಷೆಯನ್ನು ಅನುಭವಿಸುವವರಲ್ಲಿ ಕೆಲವರು, ತಮ್ಮ ತಂದೆತಾಯಿಗಳನ್ನು ನೆನೆದು, ಹಲವರು ಹೆಂಡರು ಮಕ್ಕಳನ್ನೂ ಆಪ್ತ ಇಷ್ಟರನ್ನೂ ನೆನೆನೆನಿಸಿ ಮಾಡುತ್ತಿರುವ ಪ್ರಳಾಪವನ್ನು ಅವರು ಪ್ರತಿದಿನವೂ ಕೇಳಿ ಕೇಳಿ ಅವರ ಕಿವಿಗಳು ಗಡಚಿಕ್ಕಿದ್ದವು. ಈ ನರಬಲಿಯ ಸತ್ರವು ಅನೇಕ ದಿನಗಳ ವರೆಗೆ ಸಾಗಿದರೂ ಮುಖ್ಯ ಮುತ್ಸದ್ದಿಗಳೂ ಭಾಸ್ಕರರಾಯನೂ ಅವರ ಕೈಗೆ ಸಿಗಲೊಲ್ಲರು. ಈ ದೇಶಪ್ರೇಮಿ ಜನರ ಶೋಧ ಮಾಡುವದೇ ಅವರ ಆದ್ಯಕರ್ತವ್ಯವಾಗಿತ್ತು. 'ಅವರನ್ನು ಹಿಡಿದು ಕೊಟ್ಟವರಿಗೆ ದೊಡ್ಡ ದೊಡ್ಡ ಪಾರಿತೋಷಕಗಳು ಕೊಡಲ್ಪಡುವವು' ಎಂಬ ಅರ್ಥದ ಪ್ರಕಟನೆಗಳು ಎಲ್ಲ ಕಡೆಗೂ ಹಂಚಲ್ಪಟ್ಟಿದ್ದವು. ಆದರೆ ಇಂಥ ಪ್ರಕಟನೆಗಳಿಂದ ಏನೂ ಉಪಯೋಗವಾಗಲಿಲ್ಲ. ಅವೆಲ್ಲ ಗಾಳಿಯಲ್ಲಿ ಪಟಗಳಂತೆ ಹಾರಿಹೋದವು. ಇದರಿಂದ ಅವರ ಶೋಧವಾಗುವದಿಲ್ಲೆಂದು ತಿಳಿದೊಡನೆ ಸೂಜ್ಞರಾದ ಆಂಗ್ಲ ಅಧಿಕಾರಿಗಳು ತಮ್ಮ ವಿಶ್ವಾಸಕ್ಕೆ ಪೂರ್ಣ ಪಾತ್ರರಾದ ದಕ್ಷತೆಯಿಂದ ಕಾರ್ಯಮಾಡುವವರೂ ಆದ ಅನೇಕ ಜನರನ್ನು ಅವರನ್ನು ಶೋಧಮಾಡಲು ಅಟ್ಟಿದರು. ಹೀಗೆ ಶೋಧಾರ್ಥವಾಗಿ ಗುಂಪು ಗುಂಪಾಗಿ ಕಳಿಸಿದ ಜನರಲ್ಲಿ ಸರ ಫ್ರಾಂಕ ಸೂಟರನೆಂಬ ಆಂಗ್ಲ ಅಧಿಕಾರಿಯು ತನ್ನ ಸಹಾಯ್ಯಕರಾದ ಇನ್ನೂರು ದೇಸೀ ಸೀಪಾಯಿಗಳೊಂದಿಗೆ ನಾನಾ ಪ್ರಕಾರದ ವೇಷದಿಂದ ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ಗುಪ್ತವಾಗಿ ಸಂಚರಿಸಿ ಶೋಧಮಾಡಹತ್ತಿದರು. ಭಾಸ್ಕರರಾಯನೂ ಅವನ ಜನರೂ ವೇಷಾಂತರವನ್ನು ಮಾಡಿದ್ದರೂ ವಿಶೇಷ ಭಯವೆನಿಸಹತ್ತಿತು.

ದೈವವು ಪ್ರತಿಕೂಲವಾಯಿತೆಂದರೆ ತಾನು ಯೋಚಿಸುವ ಉಪಾಯ

ಗಳೇ ಅಪಾಯಗಳಾಗುವವೆಂದು ಹಿರಿಯರಾಡುವ ಮಾತು ನಿಜವಾದದು. ಅಲ್ಲದೆ 'ಕಳ್ಳನ ಹೆಜ್ಜೆಯನ್ನು ಕಳ್ಳನೇ ಬಲ್ಲ'ನೆಂಬ ಗಾದೆಯ ಮಾತಿನಂತೆ ಭಾಸ್ಕರ ರಾಯನ ಗುಂಪಿನಲ್ಲಿಯ ಜನರು ಬಹುರೂಪಿಗಳಾಗಿ ಅಡ್ಡಾಡುತ್ತಿದ್ದರೂ, ಅವರ ನಡತೆ, ನಡಾವಳಿಗಳಲ್ಲಿಯೂ ಭಾಷೆಯಲ್ಲಿಯೂ ಕಾಣುವ ವ್ಯತ್ಯಾಸ ದಿಂದಲೂ, ಭಯಭೀತವಾದ ಮುಖಮುದ್ರೆಯಿಂದಲೂ ಅವರನ್ನು ಇವರಾರೋ ಗುಪ್ತವೇಷಿಗಳಾದ ಜನರಿರಬಹುದೆಂದು ಅತಿ ಪ್ರಯಾಸವಿಲ್ಲದೆ ತಿಳಿಯಬಹು ದಾಗಿತ್ತು. ಸರ ಫ್ರಾಂಕ ಸೂಟರನೂ ಅವನ ಅನುಯಾಯಿಗಳೂ, ಜನಸ ಮೂಹದಲ್ಲಿಯೂ, ನಿರ್ಜನವಾದ ಅಡವಿಯಲ್ಲಿಯೂ ಛದ್ಮವೇಷದಿಂದ ಅಡ್ಡಾ ಡುತ್ತಿದ್ದದರಿಂದ, ಭಾಸ್ಕರರಾಯನ ಸಂಗಡಿಗರಲ್ಲಿಯ ಕೆಲ ಜನರು ಅವರ ಕೈಗೆ ಸಿಕ್ಕುಬಿದ್ದರು. ಕೂಡಲೇ ಅವರು ನರಗುಂದಕ್ಕೆ ಕಳಿಸಲ್ಪಟ್ಟರು. ಬಂದಿಗಳಾಗಿ ಬಂದವರ ಪರಿಚಯವನ್ನೂ ಅವರ ಯೋಗ್ಯತೆಯನ್ನೂ ತಿಳಿ ಸುವ ಕೆಲಸಕ್ಕೆ ಉಂಡಮನೆಯ ಗಳ ಎಣಿಸುವವರೂ ಸ್ವಜನ ಹಾಗೂ ಸ್ವದೇ ಶದ್ರೋಹಿಗಳೂ ಆದ ಕೃಷ್ಣಾಜಿಪಂತ ಕಾರಭಾರಿಯೂ ಬಾಪೂ ಬನ್ಯಾನೂ ಅಲ್ಲಿ ಸಿದ್ಧವಾಗಿಯೇ ಇರುತ್ತಿದ್ದರು. ಇವರ ಹೇಳಿಕೆಗನುಸಾರವಾಗಿ ಸೆರೆಸಿಕ್ಕ ಆ ದುರ್ದೈವಿಗಳು ಶಿಕ್ಷೆ ಭೋಗಿಸಬೇಕಾಗುತ್ತಿತ್ತು.

ಒಂದು ದಿವಸ ಸಾಯಂಕಾಲದಲ್ಲಿ ಒಂದು ಚಿಕ್ಕ ಹಳ್ಳಿಯಲ್ಲಿಯ ಧರ್ಮ ಶಾಲೆಯಲ್ಲಿ ಎಷ್ಟೋ ಜನ ದಾರಿಕಾರರು ತಮ್ಮ ತಮ್ಮ ಗಂಟುಗದಡಿಗಳನ್ನೆಲ್ಲ ವ್ಯವಸ್ಥಿತವಾಗಿಟ್ಟು ಎಲ್ಲರೂ ಗುಂಪಾಗಿ ಕುಳಿತುಕೊಂಡು ಪ್ರಚಲಿತವಾದ ಬಂಡಾಯದ ಸುದ್ದಿಗಳನ್ನು ಮಾತಾಡುತ್ತ ಕುಳಿತುಕೊಂಡಿದ್ದರು. ಅವರಲ್ಲಿ ಕೆಲ ವರು ಚಂಚಿಯನ್ನು ಬಚ್ಚಿ ತಾಂಬೂಲವನ್ನು ಮೆಲ್ಲುವದಕ್ಕಾರಂಭಿಸಿದರು. ಕೆಲ ವರು ಚಿಲಿಮೆಯನ್ನು ಸಿದ್ಧಗೊಳಿಸಿ ಧೂಮ್ರಪಾನವನ್ನಾರಂಭಿಸಿದ್ದರು. ಅವರ ಲ್ಲಿಯ ಒಬ್ಬನು "ನಾನು ಮೊನ್ನೆ ನರಗುಂದದಲ್ಲಿಯೇ ಇದ್ದೆನು. ಅಂದು ನರಗುಂ ದದ ಕೋಶಾಧಿಕಾರಿಗೆ ಫಾಸೀ ಕೊಟ್ಟರು. ಸಾಹೇಬನು ತನ್ನ ಬಳಿಯಲ್ಲಿ ಕುರ್ಚಿಯಲ್ಲಿ ಕುಳಿತಂಥ ಒಬ್ಬ ಬ್ರಾಹ್ಮಣನ ಕೂಡ ಏನೇನೊ ಮಾತನಾಡಿ ಬಳಿಕ ಪಾಪ ಆ ಕೋಶಾಧಿಕಾರಿಗೆ ಫಾಶೀ ಶಿಕ್ಷೆಯ ಹುಕುಮನ್ನು ಕೊಟ್ಟನು. ಶಿಕ್ಷೆಕೊಡುವ ಮೊದಲು ಕೋಶಾಧಿಕಾರಿಗೆ ಸಾಹೇಬನು ನಾನಾ ಪ್ರಕಾರದ ಆಶೆ ತೋರಿಸಿದನು. ಆದರೂ ಆತನು ಆಶೆಗೊಳಗಾಗದೆ ಭಾಸ್ಕರರಾಯ ಹಾಗೂ ಆತನ ಸಂಗಡಿಗರ ಸುದ್ದಿಯು ತನಗೆ ಏನೂ ಗೊತ್ತಿಲ್ಲವೆಂದು ಹೇಳಿ ದವನು, ಕಡೆಗೂ ತನ್ನ ಹಟ ಬಿಡಲಿಲ್ಲ. ಹೇಳಿದ್ದರೆ ಆತನು ಬದುಕುತ್ತಿ ದ್ದನೋ ಏನೋ ಪಾಪ!" ಎಂದು ನುಡಿದನು. ಕೂಡಲೆ ಬೈರಾಗಿ ವೇಷ ಧಾರಿಯಾದ ಮತ್ತೊಬ್ಬನು ಹಿಂದುಸ್ಥಾನೀ ಭಾಷೆಯಲ್ಲಿ "ಅಯ್ಯೋ ಅಪ್ಪಾ,

ಇಂಗ್ಲಿಷ ಜನರನ್ನೂ ಕಣ್ಣೆತ್ತಿ ನೋಡುವ ಧೈರ್ಯಕೂಡ ಯಾರಿಗೂ ಇಲ್ಲ'' ವೆಂದು ಮಾತಾಡಿ ಗುಡಗುಡಿಯನ್ನು ಒಮ್ಮೆ ಸೇದಿ ಮತ್ತೆ "ಹೋದವರ್ಷ ನಾವು ಉತ್ತರಹಿಂದುಸ್ಥಾನದಲ್ಲಿ ಸಂಚಾರ ಮಾಡುವ ಕಾಲಕ್ಕೆ ನಾನಾಸಾಹೇಬನು ಅಲ್ಲಿ ನಡಿಸಿದ ಪುಂಡಾಟವನ್ನೆಷ್ಟೆಂದು ವರ್ಣಿಸಲಿ? ಹೇಳಲಸಾಧ್ಯವಾಗಿತ್ತು! ಆದರೆ ಯಾವಾಗ ಈ ಟೊಪ್ಪಿಗೆಯ ಜನರು ಗುಂಪು ಗುಂಪಾಗಿ ಅಲ್ಲಲ್ಲಿ ಡೇರೆಗಳನ್ನು ಹೊಡೆದು ಬ್ಯಾಂಡು ಊದಲಾರಂಭಿಸಿದರು, ಆಗ ನಾನಾ ಸಾಹೇಬನು ಬೆಕ್ಕಿನ ಶಬ್ದವನ್ನು ಕೇಳಿ ಇಲಿಗಳು ಹೋರಲ್ಲಿ ಅಡಗಿಕೊಳ್ಳುವಂತೆ ಅಂಜಿ ಅಡವಿಯಲ್ಲಿ ಅಲೆದಾಡಹತ್ತಿದನು. ನಾನು ಸೀಪಾಯಿಗಳ ಸಂಗಡಲೇ ಇದ್ದದರಿಂದ ನನಗೆ ಏನೂ ತಾಪವಾಗಲಿಲ್ಲ. ಇಲ್ಲಿ ಎಲ್ಲಿಯೋ ತುಸು ಬಂಡಾಯದ ಗದ್ದಲವಾಗಿದೆ. ಎಷ್ಟು ಹೇಳುತ್ತಿರುವಿರಿ'' ಎಂದನು.

ಆಗ ಚಂಚಿಯನ್ನು ಬಿಚ್ಚಿಕೊಂಡು ಎಲೆಯನ್ನು ತಿನ್ನುತ್ತಿದ್ದ ಮತ್ತೊಬ್ಬನು ಸಿಟ್ಟಿನಿಂದ ಚಂಚಿಯನ್ನು ಅಪ್ಪಳಿಸಿ "ಸಾಧುಗಳೇ ಮಾತಾಡಬೇಡಿರಿ ಹೀಗೆ? ಇತ್ತಲಿನ ಜನರೇನೂ ಹೇಡಿಗಳಿದ್ದಿಲ್ಲ. ಉತ್ತರ ಹಿಂದುಸ್ಥಾನದ ಜನರಷ್ಟೇ ಇಲ್ಲಿಯವರೂ ಶೂರರಿರುವರು. ಮೊದಲೇ ಸಂಕೇತ ಮಾಡಿದಂತೆ ಎಲ್ಲ ಕಡೆಯಲ್ಲಿಯ ಜನರು ತೀವ್ರವಾಗಿ ಬಂದು ನರಗುಂದದಲ್ಲಿ ಕಲೆತಿದ್ದರೆ, ತಿಳಿಯುತ್ತಿತ್ತು. ಈ ಪರದೇಶೀ ಟೊಪ್ಪಿಗೆಯ ಸಾಹೇಬರ ಬಣ್ಣ! ಇಲ್ಲಿಯ ಬ್ರಾಹ್ಮಣ ಅರಸನ ಹೆಸರನ್ನು ಅವರು ಕನಸಿನಲ್ಲಿಯೂ ಕೂಡ ಉಚ್ಚರಿಸಿದರೆ ಬೆದರಿ ಬೀಳುವಂತಾಗುತ್ತಿತ್ತು ಬೆದರಿ ತಿಳಿಯಿತೋ! ಆದರೇನು ಮಾಡುವದು? ಜನರು ಕಲೆಯುವ ಮೊದಲು ಈ ಫಿರಂಗಿಗಳು ಮುತ್ತಿದರು. ನರಗುಂದವನ್ನು ಇಲ್ಲದಿದ್ದರೆ ಗೊತ್ತಾಗುತ್ತಿತ್ತು ಇಲ್ಲಿಯ ಬ್ರಾಹ್ಮಣರ ಕೈ! ಕೆಲಸವು ಕೆಟ್ಟು ಹೋದ ಬಳಿಕ ಆ ಮಾತಿನಿಂದ ಏನು ಪ್ರಯೋಜನ ಎಂದು ಆವೇಶದಿಂದ ಹೇಳಿದನು.

ಹೀಗೆ ಒಳ್ಳೇ ಭರದಿಂದ ಸಾಗಿದ ಅವರ ವಾದವಿವಾದವನ್ನು ಕೇಳುತ್ತ, ಅದೇ ಧರ್ಮಸಾಲೆಯ ಒಂದು ಮೂಲೆಯಲ್ಲಿ ಒಂದು ವ್ಯಕ್ತಿಯು, ಒಂದು ರೇಶಿಮೆಯ ಅಂಚಿನ ಮಲಿನವಾದ ಒಂದು ತುಂಡನ್ನು ಹಾಸಿಕೊಂಡು ಅವರದೇ ಮತ್ತೊಂದು ತುಂಡನ್ನು ಹೊದ್ದುಕೊಂಡು ಅದ್ದಾಗಿತ್ತು. ಈ ಜನರ ಭಾಷಣವನ್ನು ಕೇಳುತ್ತಲಿರುವಾಗ ಅದರ ಮುಖಚರ್ಯೆಯಲ್ಲಿ ಅನೇಕ ಹೆಚ್ಚುಕಡಿಮೆಗಳಾಗುತ್ತಿದ್ದವು. ನಡುನಡುವೆ ಆ ವ್ಯಕ್ತಿಯು ನಿಟ್ಟುಸಿರುಬಿಡುತ್ತಿದ್ದನು. ಆತನು ತನ್ನ ಮನಸ್ಸಿನಲ್ಲುಂಟಾಗುತ್ತಿರುವ ಭಿನ್ನ ಭಾವಗಳು ಅಲ್ಲಿಯವರಿಗೆ ತಿಳಿಯದಂತೆ ಬಹು ಎಚ್ಚರಪಡುತ್ತಿದ್ದನು. ಮಾತಾಡುತ್ತ ಕುಳಿತ ಆ ದಾರಿಕಾರರಲ್ಲಿ ಯಾವನೋ ಒಬ್ಬನು, ಆ ವ್ಯಕ್ತಿಯನ್ನು ಎವೆಯಿಕ್ಕದೆ ಆತನಿಗೆ

ತಿಳಿಯದಂತೆ ಕಳ್ಳತನದಿಂದ, ನೋಡುತ್ತಲಿದ್ದನು. ಆ ವ್ಯಕ್ತಿಯು ಮುಖದ ಲ್ಲಾಗುವ ಭಿನ್ನ ಭಿನ್ನ ಲಕ್ಷಣಗಳನ್ನು ಕಂಡ ಕಂಡಂತೆ ಆತನಿಗೆ ಒಳ್ಳೇ ಆನಂದವಾಗುತ್ತಿದ್ದಂತೆ ತೋರಿತು. ಕಡೆಯಲ್ಲಿ ಆತನು ಮೂಲೆಯಲ್ಲಿ ಮಲಗಿದ ವ್ಯಕ್ತಿಯನ್ನು ಕುರಿತು "ಮಹಾರಾಜ ತಾವು ಎತ್ತಲಿಂದ ಬರೋಣ ವಾಯಿತು. ಮತ್ತು ಹೋಗುವದೆತ್ತ ಕಡೆಗೆ? ಇದನ್ನು ಹೇಳಿದರೆ ನನ್ನ ಮೇಲೆ ದೊಡ್ಡ ಉಪಕಾರ ಮಾಡಿದಂತಾಗುವದು. ಯಾಕಂದರೆ ತಮ್ಮನ್ನು ನೋಡಿ ನಮಗೆ ಬಹಳ ಕೆಡಕೆನಿಸಿದೆ. ಈ ಪ್ರವಾಸದಲ್ಲಿ ನಿಮ್ಮ ಬಳಿಯಲ್ಲಿದ್ದ ಕೇವಲ ಈ ಎರಡು ಹರಕು ಅರಿವೆಯ ಘಡಕಿಗಳಿಂದ ತಾವು ಕಾಲಹರಣ ಮಾಡುವುದು ಹೇಗೋ ನನಗೆ ತಿಳಿಯದಾಗಿದೆ" ಎಂದನು.

"ದಯಮಾಡಿ ಆ ವಿಷಯವನ್ನು ಮಾತ್ರ ಕೇಳಬೇಡಿರಿ! ಮನುಷ್ಯನು ಆಪತ್ತಿಗೆ ಗುರಿಯಾದನೆಂದರೆ ಬಳಿಯಲ್ಲಿದಷ್ಟು ವಸ್ತುಗಳಿಂದಲೇ ತನ್ನ ಕಾರ್ಯ ವನ್ನು ಮಾಡಿಕೊಳ್ಳಲೇ ಬೇಕಾಗುವದು. ಹೆಚ್ಚಿನ ವಸ್ತುಗಳು ದೊರೆಯುವ ಬಗೆ ಹೇಗೆ? ನಾನು ಬೆಳಗಾವಿಗೆ ನನ್ನ ಸ್ವಂತದ ಕಾರ್ಯಕ್ಕಾಗಿ ಈ ಮಾರ್ಗ ದಿಂದ ಹೋಗುತ್ತಿರಲು ಈ ಹಳ್ಳಿಯಿಂದ ಸುಮಾರು ಮೈಲುಗಳ ಹಿಂದೆ ದಾರಿ ಯಲ್ಲಿ ೮-೧೦ ಜನ ಕಳ್ಳರು ಬಂದು ನನ್ನನ್ನು ಮುತ್ತಿದರು. ನನ್ನ ಸಂಗ ಡಿಗನಾದ ಬೇರೊಬ್ಬ ಕುದುರೆಯ ಸವಾರನನ್ನು ಕೊಂದೇ ಬಿಟ್ಟರು. ಬಳಿಕ ನನ್ನ ಹತ್ತರ ಬಂದು ಕುದುರೆಯಿಂದ ಕೆಳಗಿಳಿಯೆಂದು ನನಗೆ ಹೇಳಿದರು. ಕೂಡಲೆ ನಾನು ಕೆಳಗಿಳಿದು ಅವರು ಬೇಡಿದೊಡನೆ ನನ್ನ ಬಳಿಯಲ್ಲಿಯ ಒಂದೊಂದೇ ಒಡವೆಯನ್ನು ಅವರ ಸ್ವಾಧೀನ ಮಾಡಿದೆನೆಂತಲೇ ನಾನು ಜೀವ ದಿಂದ ಪಾರಾಗಿ ಬಂದೆನು. ಮಾನರಕ್ಷಣೆಗಾಗಿ ಈ ಉಟ್ಟುಕೊಂಡ ದೋತರ ವೊಂದನ್ನು ದಯವಿಟ್ಟು ಬಿಡಿರಿ ಎಂದು ಬೇಡಿಕೊಂಡೆನಾದುದರಿಂದ ಅವರು ಅದನ್ನು ಕಸಿದುಕೊಳ್ಳಲಿಲ್ಲ. ಅವರು ದಯೆತೋರಿದರೆಂದು ಇದು ಉಳಿಯಿತು ಇಲ್ಲದಿದ್ದರೆ ಇದೂ ಹೋಗಿ ಒಂದು ಲಂಗೋಟಿಯು ಪ್ರಾಪ್ತವಾಗುತ್ತಿತ್ತು. ಆ ಸ್ಥಿತಿಯಗಿಂತಲೂ ಇದು ನೆಟ್ಟಗಲ್ಲವೇ! ಹೊದ್ದಕೊಳ್ಳಲಿಕ್ಕೆ ಒಂದು ಗೇಣು ಅರಿವೆಯಾದರೂ ಉಳಿಯಿತು. ಎರಡು ದಿವಸಗಳ ಹಿಂದೆ ನನ್ನ ಅವಸ್ಥೆ ಹೀಗಾಯಿತು. ಈ ಧರ್ಮಸಾಲೆಯಲ್ಲಿಯೇ ಬಿದ್ದುಕೊಂಡಿರುವೆನು. ಹೊಟ್ಟೆಗೆ ಅನ್ನವಿಲ್ಲ, ನೀರಡಿಸಿದಾಗ ಝರಿಗೆ ಹೋಗಿ ನೀರು ಕುಡಿದು ಬರಬೇಕು. ಬಳಿಯಲ್ಲಿ ಒಂದು ಪಾತ್ರೆಯೂ ಇಲ್ಲ" ಎಂದು ನುಡಿದನು.

ಆತನ ಈ ದುಃಖಕರವಾದ ಸ್ಥಿತಿಯನ್ನು ಕೇಳಿ ಅಲ್ಲಿ ಕುಳಿತವರೆಲ್ಲ ರಿಗೂ ಕೆಡಕೆನಿಸಿದಂತೆ ತೋರಿತು. ಬಳಿಕ ಆ ಗೃಹಸ್ಥನು ಅವರನ್ನು ಕುರಿತು "ನೀವು ಯಾರು? ಯಾವ ಕಡೆಗೆ ಹೋಗುವಿರಿ? ಎಂದು ಪ್ರಶ್ನ ಮಾಡಿದನು.

ಅವರು ಹೇಳಿದ ಉತ್ತರವು ತೀರ ಅಸಂಬದ್ಧವಾಗಿತ್ತು. ಕೂಡಲೇ ಆತನು " ಇವರಿಗೆ ಈ ಭಾಗದ ಪರಿಚಯವಿಲ್ಲದಾಗ್ಯೂ ಕೂಡ ಹೀಗೆ ತಿರುಗಾಡಬೇಕಾದಪ್ಪೆ, ಇವರು ಆಂಗ್ಲರಿಂದ ಬಂಡುಗಾರರನ್ನು ಶೋಧಿಸಲು ನಿಯಮಿಸಲ್ಪಟ್ಟ ಗುಪ್ತ ಸಿಪಾಯಿಗಳಾಗಿರಬೇಕೆಂದು ಅವನಿಗೆ ಅನಿಸಿತು. ತುಸು ಭಯವೂ ಆಯಿತು. ಆದರೂ ತನ್ನ ಭೀತಿಯನ್ನು ತೋರಗೊಡಲಿಲ್ಲ. ಪರಸ್ಪರರ ಪ್ರಶ್ನೋತ್ತರಗಳಿಂದ ಇಬ್ಬರಲ್ಲಿಯೂ ಸಂಶಯವುಂಟಾಗಹತ್ತಿತು. ಅಷ್ಟರಲ್ಲಿ ಒಬ್ಬನು ರಾತ್ರಿಯು ಬಹಳವಾಗಿದೆ. ಮೊದಲು ಮಲಗಿಕೊಳ್ಳುವಾ, ಈ ವಿಷಯವಾಗಿ ನಾಳೆ ಮಾತಾಡೋಣ ಮತ್ತೆ " ಎಂದನು. ಅದಕ್ಕೆ ಎಲ್ಲರೂ 'ಹಾಗೆಯೇ ಆಗಲಿ' ಎಂದು ಹಾಸಿಗೆ ಹಾಸಿ ಮಲಗಿಕೊಂಡರು. ತುಸು ವೇಳೆಯಲ್ಲಿಯೇ ಎಲ್ಲರಿಗೂ ಗಾಢವಾದ ನಿದ್ರೆ ಹತ್ತಿತು.

ಆದರೆ ಘೋತರದ ತುಂಡಿನ ಮೇಲೆ ಮಲಗಿದ ವ್ಯಕ್ತಿಗೆ ಮಾತ್ರ ನಿದ್ರೆ ಹತ್ತಿರಲಿಲ್ಲ. ಆತನು ನಿದ್ರಿಸುತ್ತಿದ್ದವನ ಹಾಗೆ ಕಣ್ಣು ಮುಚ್ಚಿದ್ದನು ಮಾತ್ರ ಪಾಠಕರೇ, ಈತನು ಯಾರಾಗಿರಬಹುದೆಂದು ನೀವು ವಿಚಾರಿಸುತ್ತಿರಬಹುದಲ್ಲವೇ? ಹೇಳುವೆವು ಕೇಳಿರಿ. ಆತನಾರೆಂಬದನ್ನು

ಭಾಸ್ಕರರಾಯನನ್ನು ಬಿಟ್ಟು ಹೊರಟ ಬಳಿಕ, ಅತ್ಯಂತ ದುಃಖಿತನಾದ ರಘುನಾಥರಾಯನು ತನ್ನಲ್ಲಿಯೇ " ದೈವಲೀಲೆಯು ವಿಚಿತ್ರವಾದುದು. ನನ್ನ ಮೊದಲಿನ ವೈಭವ, ಸುಖ, ಸಂಪತ್ತು, ಅಧಿಕಾರ ಎಲ್ಲವೂ ಒಮ್ಮೆಲೆ ಇಲ್ಲದಂತಾದವು. ಬಂಧು ಬಳಗದವರೆಲ್ಲ ದಿಕ್ಕು ತೋಚಿದತ್ತ ಓಡಿ ಹೋದರು. ನಾನು, ಯಾರೂ ದಿಕ್ಕಿಲ್ಲದ ಓರ್ವ ಅನಾಥ ತಿರುಕನಂತೆ ಅಲ್ಲ ಕೊಲೆ ಮಾಡಿದ ಕಳ್ಳನಂತೆ, ಅಡವಿಯಲ್ಲಿ ಅಲೆದಾಡುತ್ತಲಿದ್ದೇನೆ. ಇಂಥ ಹೀನ ದೀನ ಸ್ಥಿತಿಯಲ್ಲಿಯೂ ಯಾರಾದರು ನನ್ನನ್ನು ಗುರ್ತಿಸಿದರಂತೂ ತೀರಿತು. ತೋಫಿನ ಬಾಯಿಗೆ ಸಿಕ್ಕು ಮರಣ ಹೊಂದಬೇಕು " ಇಂತಹ ಅನೇಕ ವಿಚಾರಗಳು ಅವನ ಮನದಲ್ಲಿ ಹುಟ್ಟಿ, ಅವು ಮೂರ್ತಿಮತ್ತಾಗಿ ಆತನ ದೃಷ್ಟಿಯ ಎದುರಿಗೆ ನಿಂತುಕೊಂಡಂತಾಯಿತು. ಆತನ ಎದೆಯೊಡೆದು ನೀರಾಯಿತು. ಬಳಿಯಲ್ಲಿಯೇ ಇದ್ದ ಒಂದು ವೃಕ್ಷದ ಬುಡದಲ್ಲಿ ಕುಳಿತುಕೊಂಡನು. ಶೋಕವನ್ನು ಮಾಡಲಾರಂಭಿಸಿದನು. ಇದು ವರೆಗೂ ಆತನ ಹೊಟ್ಟೆಯಲ್ಲಿ ತುಂಬಿಕೊಂಡಿದ್ದ ದುಃಖವು ಅಶ್ರುರೂಪದಿಂದ ಅದೆಷ್ಟೋ ಕಾಲದವರೆಗೆ ನೇತ್ರಗಳ ದ್ವಾರದಿಂದ ಹರಿದು ಹೋಯಿತು. ಹೃದಯವು ಬರಿದಾಯಿತಾದ್ದರಿಂದ ಮತ್ತೆ ವಿಚಾರಕ್ಕಾರಂಭವಾಯಿತು. ಮೊತ್ತ ಮೊದಲು ಆತನು " ನಾನು ಯಾರು ನನ್ನ ಗತಿಯೇನಾಗಿದೆ? " ಎಂದು ವಿಚಾರ ಮಾಡುತ್ತ ಮತ್ತೆ ಮಾರ್ಗ ಕ್ರಮಿಸಲಾರಂಭಿಸಿದನು. ಆತನು ತನ್ನಷ್ಟಕ್ಕೆ ತಾನೆ " ನಾನು ರಘುನಾಥರಾ

ಯನು. ಜನರೆಷ್ಟು ಮಾನ ಮರ್ಯಾದೆಯಿಂದ ನನ್ನನ್ನು ಕಾಣುತ್ತಿದ್ದರು. ಪ್ರತ್ಯಕ್ಷ ಭಾಸ್ಕರರಾಯನೂ, ಅವನ ತಾಯಿ ಯಮುನಾಬಾಯಿಯೂ ನನಗೆ ವಿಶೇಷವಾದ ಮಾನಕೊಡುತ್ತಿದ್ದರು. ಅಂದ ಬಳಿಕ ಆತನ ಪ್ರಜೆಗಳು ನನ್ನ ಇಚ್ಛಾನುವರ್ತಿಗಳಾದುದರಲ್ಲೇನಾಶ್ಚರ್ಯವು! ಈಗಲಾದರೋ ಎಲ್ಲವು ಬದಲಾಗಿ ಹೋಗಿದೆ. ಯಾವನಾದರೂ ಈಗ ನನ್ನನ್ನು ಕಂಡರೆ "ಈತನು ಬಂಡಾಯದಲ್ಲಿ ಸೇರಿದವನು" ಎಂದು ಅನ್ನುವದಲ್ಲದೆ ಧನಲೋಭದಿಂದ ನನ್ನನ್ನು ಹಿಡಿದುಕೊಂಡು ಹೋಗಿ ಇಂಗ್ರಜರಿಗೆ ಒಪ್ಪಿಸಬಹುದು. ಆ ಬ್ರಿಟಿಶ್ ಅಧಿಕಾರಿಗಳು 'ನಾನೇ ರಘುನಾಥರಾಯ'ನೆಂಬ ಸಾಕ್ಷಿಗಳು ಸಿಕ್ಕಿದೊಡನೆ 'ತೋಫಿನ ಬಾಯಿಗೆ ಕಟ್ಟಿ ಕೊಲ್ಲರಿ ಇವನನ್ನು' ಎಂದು ಆಜ್ಞೆ ಕೊಡುವರೆಂಬದಲ್ಲೇನೂ ಸಂದೇಹವೇ ಇಲ್ಲ. ಈಗ ನನ್ನ ದೈವವು ಪ್ರತಿಕೂಲವಾಗಿದೆ. ಆದರೂ ಒಬ್ಬನೇ ಅಡವಿಯಲ್ಲಿ ಅಲೆದಾಡಲಾರೆ. ಜನವಸತಿಯಲ್ಲಿಯೇ ಹೋಗಿ ಇರುವೆನು. ಮನಸ್ಸಿನ ದೌರ್ಬಲ್ಯದ ಮೂಲಕವಾಗಿ ಹಾಗೆ ಮಾಡುವದಾಗಲೊಲ್ಲದು. ಆದರೂ ಏನಾಯಿತು! ಜಗದೀಶಾ, ನಾನೀಗ ಎಲ್ಲಿ ಹೋಗಲಿ? ಯಾರ ಆಶ್ರಯದಲ್ಲಿರಲಿ? ನನ್ನನ್ನು ಗುರ್ತಿಸಿದರೂ ಗುಪ್ತವಾಗಿಡುವಂಥ ಉದಾರ ಮನಸ್ಸಿನ ಪುಣ್ಯವಂತನಾವನಿರುವನು? (ತುಸು ತಡೆದು, ಮತ್ತೆ, ಛೀ! ಛೀ! ನಾನು ಮಾಡುತ್ತಿರುವ ನಾನಾ ವಿಚಾರಗಳು, ಸಾಧ್ಯವಾಗದೆ, ನಿಷ್ಫಲವಾಗುತ್ತಲೇ ಇವೆ. ಕಾಲವೇ ಕಠಿಣವಾಗಿದೆ. ನಂಬಿಗೆಯೇ ಇಲ್ಲದಾಗಿದೆ. ನಾನು ನನ್ನ ಹಿತದವರ ಬಳಿಗೆ ಹೋದರೂ ಅವರು ಧನದಾಶೆಯಿಂದ ಹಿಡಿದು ಕೊಡಲಾರರೆಂದು ಹೇಗೆ ಅನ್ನುವದು! ನನ್ನವರೇ ನನ್ನನ್ನು ಆಶೆಯಿಂದ ಸಂಕಟದಲ್ಲಿ ನೂಕಬಹುದು! ಅಂದಬಳಿಕ ದೇವಾ ನಾನು ಪಶುಪಕ್ಷಿಗಳೊಂದಿಗೆ ಅಡವಿಯಲ್ಲಿಯೇ ಕಾಲಕಳೆಯಲಾ! (ಮತ್ತೆ ತುಸು ತಡೆದು) ಅಡವಿಯಲ್ಲಿಯೇ ಇರುವಷ್ಟು ಶಕ್ತಿಯಾದರೂ ಯಾರಲ್ಲಿದೆ? ಇದು ನನ್ನಿಂದಂತೂ ಆಗದ ಮಾತು. ದೇವಾ, ನನ್ನ ಬುದ್ಧಿಯು ಭ್ರಮಿಸಿಹೋಗಿದೆ. ದೈವೀಕ್ಷೋಭಕ್ಕೆ ಪಾತ್ರನಾದ ನನ್ನನ್ನು ನೀನಾದರೂ ರಕ್ಷಿಸುವ ಬಗೆ ಹೇಗೆ? ಆದರೂ ನಿನ್ನ ಮೇಲೆಯೇ ಪೂರ್ಣ ಭಾರವನ್ನು ಹಾಕಿ ನಾನು ಜನವಸತಿಯಿದ್ದಲ್ಲಿಗೆ ಹೋಗುವ ನಿಶ್ಚಯವನ್ನು ಮಾಡಿದ್ದೇನೆ. ದೇವಾ, ವೆಂಕಟೇಶಾ, ನಿಜವಾಗಿಯೂ ಈಗ ನನಗೆ ಜೀವಿತವು ಅಸಹ್ಯವಾಗಿದೆ. ಇಷ್ಟಾದರೂ ಶತ್ರುಗಳ ಕೈಗೆ ಸಿಕ್ಕು ಸಾವಿರಾರು ಜನರ ಸಮ್ಮುಖದಲ್ಲಿ ತೋಫಿನ ಬಾಯಿಗೆ ಕಟ್ಟಲ್ಪಟ್ಟು ಜೀವ ಕಳೆದುಕೊಳ್ಳುವದು ನನಗೆ ಇಷ್ಟವಿಲ್ಲ. ಅದಕ್ಕಿಂತಲೂ, ಈ ವನದಲ್ಲಿರುವ ಹಿಂಸ್ರಪಶುಗಳು ಬಂದು ನನ್ನನ್ನು ಹರಿದು ತಿನ್ನುವದು ನನಗೆ ಅದೆಷ್ಟೋ ಮೇಲು. ಹೀಗೆ ಸಾಯುವದೂ ನನ್ನ ಲಭ್ಯ

ದಲ್ಲಿದ್ದಂತೆ ತೋರುವದಿಲ್ಲ. ಯಾಕಂದರೆ ಇಷ್ಟು ದಿವಸಗಳಾಗಿ ಹೋದರೂ ಅವೂ ನನ್ನ ದೃಷ್ಟಿಗೆ ಬೀಳಲೊಲ್ಲವು.

ಹೀಗೆ ವಿಚಾರ ಮಾಡುತ್ತ ರಘುನಾಥರಾಯನು ಒಂದು ಹಳ್ಳಿಯ ಸಮೀಪಕ್ಕೆ ಬಂದು ಒಂದು ಗಿಡದಡಿಯಲ್ಲಿ ಕುಳಿತು ಮತ್ತೆ "ಇದಾವ ಊರಾಗಿರಬಹುದು? ನಾನು ಇದೇ ವೇಷದಿಂದ ಹೋದರೆ ಜನರು ನನ್ನನ್ನು ತತ್‍ಕ್ಷಣವೆ ಗುರ್ತಿಸಿ ಚಾವಡಿಗೆ ಹೋಗಿ ಹೇಳಿ ದೊಡ್ಡ ಪಾರಿತೋಷಕವನ್ನು ಪಡೆಯ್ಬಹುದು? ಅಂದ ಬಳಿಕ ಮೈಮೇಲಿನ ಅರಿವೆಗಳನ್ನೆಲ ತೆಗೆದು ಬಿಸಾಡಲಾ ಅದನ್ನೂ ಮಾಡುವೆನು. ಆದರೆ ಈ ಥಂಡಿಯನ್ನು ಹೇಗೆ ತಡೆಯಲಿ? ಈ.. ನನಗೆ ಎಲ್ಲ ಬಗೆಯಿಂದಲೂ ಸಂಕಟ ಬಂದೊದಗಿದೆ! ಹೇ, ದಯಾನಿಧೇ, ವೆಂಕಟಪತೇ, ನಾನು ನಿನ್ನ ಸೇವೆಯಲ್ಲಿ ತಿಲಮಾತ್ರವಾದರೂ ಅಂತರ ಮಾಡದಿದ್ದರೂ ಕೂಡ, ನಮ್ಮ ಮೇಲೆ ಹೀಗೇಕೆ ಮುನಿದಿರುವಿ? ಅಯ್ಯೋ! ಬಂಡಾಯವು ಹೂಡುವ ಮೊದಲೇ ಅವಳು (ಹೆಂಡತಿ) ನನಗೆ 'ಸಂಸ್ಥಾನಿಕರು ಬಂಡು ಮಾಡುವ ಪ್ರಯತ್ನದಲ್ಲಿದ್ದರೂ ನೀವು ಅದರಿಂದ ಅಲಿಪ್ತರಾಗಿರ್ರಿ. ಇಲ್ಲವೆ ಏನಾದರೊಂದು ನೆವಮಾಡಿಕೊಂಡು, ಕಾಶೀಯಾತ್ರೆಗಾದರೂ ಹೊರಟುಹೋಗೋಣ' ಎಂದು ಹೇಳಿದಳು. ಆದರೆ ಅವಳ ಮಾತು ಆಗ ನನಗೆ ಸರಿದೋರಲಿಲ್ಲ. ವೀರಶ್ರೀಯು ಮೂರ್ತಿಮತ್ತಾಗಿ ಸಂಚರಿಸುತ್ತಿತ್ತು. ಶೂರನೆಂಬ ಅಹಂಕಾರವಿತ್ತು. ಪ್ರಾಣಪ್ರಿಯೇ, ನಿನ್ನ ಉಪದೇಶವು ಈಗ ನನಗೆ ಪ್ರತೀತಿಗೆ ಬಂತು. ನಿನ್ನ ಮಾತಿನಂತೆ ನಾನು ವರ್ತಿಸಿದ್ದರೆ ಈ ಕಠಿಣ ಪ್ರಸಂಗವು ನನ್ನ ಮೇಲೆ ಬರುತ್ತಿರಲಿಲ್ಲ. ದೇವರು ನಮ್ಮ ಕಣ್ಣು ಮುಚ್ಚುವವರೆಗೂ ಬಳಗದವರೊಂದಿಗೆ ಸುಖವಾಗಿ ಕಾಲಕ್ರಮಣ ಮಾಡುವದಕ್ಕೆ ಯಾವ ತರಹದ ಪ್ರತಿಬಂಧವೂ ಬರುತ್ತಿರಲಿಲ್ಲ. ಆದರೆ ದೇವೀ, ಈಗ ನೀನು ಯಾವ ಸ್ಥಳದಲ್ಲಿರುವೆ? ದೇವ ಬ್ರಾಹ್ಮಣರ ಸನ್ನಿಧಿಯಲ್ಲಿ ನಿನ್ನ ಸಂರಕ್ಷಣೆ ಮಾಡುವೆನೆಂದು ಪ್ರತಿಜ್ಞೆ ಮಾಡಿದ ನಾನು ಊರು ಬಿಟ್ಟು ಓಡಿ ಹೋಗುವ ಮುಂದೆ ನಿನ್ನ ಶೋಧವನ್ನು ಕೂಡ ಮಾಡದೆ ಹಾಗೆಯೇ ಹೊರಟು ಬಂದೆನು. ಈ ಕೃತಘ್ನತೆಯೇ ನನ್ನನ್ನು ದುಃಖಸಾಗರದಲ್ಲಿ ನೂಕಿದೆ. ಶಿವ, ಶಿವ! ಈ ಪಾತಕವೇ ನನಗೆ ತಾಪ ಕೊಡಹತ್ತಿದೆ. ಅವಳು ಈಗ ಎಲ್ಲಿರಬಹುದು? ಎಂಥ ವಿಪತ್ತಿಗೀಡಾಗಿರಬಹುದು? ಇವೇ ಮೊದಲಾದ ವಿಷಯಗಳು ನೆನಪಾದೊಡನೆ ಹೊಟ್ಟೆಯಲ್ಲಿ ಕೆಟ್ಟ ಸಂಕಟವಾಗಹತ್ತುವದು. ನಮ್ಮವರ ಶೋಧ ಮಾಡಬೇಕೆಂದರೆ ನಮ್ಮ ಗೋವಿಂದರಾಯನ ಶೋಧ ಮಾತ್ರ ಆಗಬಹುದೆಂದು ಅನಿಸುತ್ತದೆ. ಆತನ ಬಳಿಯಲ್ಲಿ ಹೋದರೆ ಆತನೊಬ್ಬನು ಮಾತ್ರ ಆಶೆಗೆ ಬೀಳದೆ ಕಡೆಗೂ ನನ್ನನ್ನು ಗುಪ್ತವಾಗಿಟ್ಟು

ರಕ್ಷಿಸುವನೆಂದು ನನಗೆ ಪೂರ್ಣ ವಿಶ್ವಾಸವಿದೆ. ಆದರೆ ಆತನ ಬಳಿಗೆ ಹೋಗಿ ಮುಟ್ಟುವದೇ ನನಗೆ ಭಯವಾಗಿದೆ. ಯಾಕಂದರೆ ಎಲ್ಲರಿಗೂ ನನ್ನ ಪರಿಚಯುವಿದೆ. ಹೀಗಿರದಿದ್ದರೆ ನೆಟ್ಟಗಾಗುತ್ತಿತ್ತು. ಅಯ್ಯೋ ನನಗೆ ಎಲ್ಲ ಪ್ರಕಾರದ ಸಂಪತ್ತಿ ಇದ್ದೂ ಏನೂ ಇಲ್ಲದಂತಾಗಿದೆ. ಜನರು ನನ್ನ ಯಾವ ಗುಣಗಳನ್ನು ಕಂಡು ನನಗೆ ಬುದ್ಧಿವಂತೆರೆನ್ನುತ್ತಿದ್ದರೋ ತಿಳಿಯದು. ಆ ಗುಣಗಳಲ್ಲಿ ಈಗ ನನ್ನಲ್ಲಿ ಒಂದೂ ಗುಣವಿರಲಿಕ್ಕಿಲ್ಲವೇ? ಇದ್ದಿದ್ದರೆ ಯಾವದರೊಂದು ಉಪಾಯವನ್ನು ಸೂಚಿಸುತ್ತಿತ್ತು. (ತುಸು ತಡೆದು) ಈಗ ನನ್ನ ಬುದ್ಧಿಯೇ ಭ್ರಂಶವಾಗಿ ಹೋಗಿದೆ. ನನ್ನಲ್ಲಿಯೂ ಹುಚ್ಚನಲ್ಲಿಯೂ ಏನೂ ಅಂತರವಿಲ್ಲ. ಹೌದು. ನಿಜವಾಗಿಯೂ ನಾನು ಹುಚ್ಚನೇ ಇದುನೆನು. ಇಲ್ಲದಿದ್ದರೆ ಊರು ಬಿಟ್ಟು ಓಡಿ ಬರುವಾಗ ಒಂದು ಪಾತ್ರೆಯನ್ನಾದರೂ ಸಂಗಡ ತೆಗೆದುಕೊಂಡು ಬರುತ್ತಿದ್ದೆನಲ್ಲ! ಇನ್ನು ಈ ಬಹುಬೆಲೆಯ ಪಾಗೋಟೆಯಿಂದೇನು ಪ್ರಯೋಜನವು? ಇದನ್ನು ಹಾಕಿಕೊಂಡೇ ನಾನು ಈ ಹಳ್ಳಿಯಲ್ಲಿ ಹೋದರೆ 'ಯಾವನೋ ಅಧಿಕಾರಿಯು ಬಂದನು' ಎಂದು ನನ್ನನ್ನೇ ಎವೆಯಿಕ್ಕದೆ ನೋಡುತ್ತ ನಿಂತಾರು. ಮತ್ತು ಅವರಲ್ಲಿ ಯಾವನಾದರೊಬ್ಬನು ನನ್ನನ್ನು ನರಗುಂದದ ರಾಜಸಭೆಯಲ್ಲಿ ನೋಡಿದವನಿದ್ದರೆ ಕೆಲಸವೇ ಮುಗಿಯಿತು! ತನಗೆ ಲಾಭವಾಯಿತೆಂದು ತಿಳಿದು ಆತನು ಚಾವಡಿಗೆ ತಿಳಿಸಿ ನನ್ನನ್ನು ಬಂಧಿಸಿ ಬಹುಮಾನ ಪಡೆಯಬಹುದು. ಅಂದು ನನ್ನ ಶಿರೋಭೂಷಣವಾದ ಪಾಗೋಟೆಯೇ ಇಂದು ಶಿರೋದೂಷಣವಾಗಿ ಪರಿಣಮಿಸಿ ಪ್ರಾಣಹರಣಮಾಡಿಸೀತು! ಆದ್ದರಿಂದ ಇದನ್ನು ತ್ಯಜಿಸಿ ಬಡುವದೇ ನೆಟ್ಟಗೆ. ಎಂದು ಅದನ್ನು ತೆಗೆದು ಅಲ್ಲಿಯೇ ಗಿಡದ ಬುಡದಲ್ಲಿ ಇಟ್ಟನು. ವಿಚಾರದ ಗುಂಗಿನಲ್ಲಿಯೇ ಆತನು ಉಟ್ಟದೋತರಬಿಟ್ಟು ಮೈಮೇಲಿನ ಎಲ್ಲ ಅರಿವೆಗಳನ್ನು ತೆಗೆದಿಟ್ಟನು. ಆಗ 'ಇನ್ನು ಹೀಗೆ ಬರಿಯ ಮೈಯಿಂದ ಹೇಗೆ ಊರಲ್ಲಿ ಹೋಗಬೇಕು?' ಎಂಬ ವಿಚಾರವು ಬಂದಿತು. ಕೂಡಲೆ ಹೊರುವ ದೋತರವನ್ನು ತಲೆಗೆ ಸುತ್ತಿಕೊಂಡನು. ಅದನ್ನೇ ಹರಿದು ಅರ್ಧ ಮೈ ಮೇಲೆ ಹೊತ್ತುಕೊಂಡನು. ಬಹುದಿನಗಳಿಂದ ಅಡವಿಯಲ್ಲಿಯೇ ಅಲೆದಾಡಿದ್ದರಿಂದ ಆ ಆ ಅರಿವೆಗಳೆಲ್ಲ ತಾವಾಗಿಯೇ ಮಲಿನವಾಗಿದ್ದವು. ಹೀಗೆ ವಿಭೂಷಿತನಾದರೂ ಹಗಲಲ್ಲಿಯೇ ಊರೊಳಗೆ ಹೋಗಲು ಅವನ ಮನವೊಪ್ಪದ್ದರಿಂದ ಕತ್ತಲಾಗುವವರೆಗೆ ಅಲ್ಲಿಯೇ ಕುಳಿತು ಬಳಿಕ ಹಿಂದೆ ಹೇಳಿದಂತೆ ಆ ಧರ್ಮಶಾಲೆಯನ್ನು ಹೊಕ್ಕು ಮೂಲೆಯಲ್ಲಿ ಬಿದ್ದುಕೊಂಡಿದ್ದನು.

ಬಂಡಾಯದಲ್ಲಿ ಸೇರಿದ ಜನರನ್ನು ಶೋಧಿಸುತ್ತ ತಿರುಗುತ್ತಿದ್ದ ಸಿಪಾಯಿಗಳ ಗುಂಪೊಂದು ಅದೇ ಧರ್ಮಶಾಲೆಯಲ್ಲಿ ಬಂದು ಇಳಿದುಕೊಂಡಿತು.

ಅವರಿಗೂ ರಾಘೋಪಂತನಿಗೂ ಆದ ವಾದವನ್ನು ಈ ಮೊದಲೇ ವಿವರಿಸಿದ್ದೇವೆ. ಆ ವೇಷಧಾರಿಗಳಾದ ಸಿಪಾಯರಲ್ಲಿ ಒಬ್ಬನಿಗೆ ರಾಘೋಪಂತನ ವಿಷಯದಲ್ಲಿ ಸಂಶಯ ಬಂದಿತ್ತು. ಆದರೂ ಈಗ ಗೊಂದಲ ಮಾಡದೆ ಮುಂಜಾನೆ ಎದ್ದಬಳಿಕ ಅವನನ್ನು ಬಂಧಿಸಿದರಾಯಿತೆಂದು ಅವನು ಮಲಗಿಕೊಂಡಿದ್ದನು. ರಘುನಾಥರಾಯನೂ ಈ ಜನರೂ, ಅನೇಕ ವೇಷಗಳನ್ನು ಧಾರಣಮಾಡಿಕೊಂಡು ನಮ್ಮ ಶೋಧಕ್ಕಾಗಿ ತಿರುಗುವ ಜನರಂತೇ ತಿಳಿದುಕೊಂಡು ಸಂಶಯಗ್ರಸ್ತನಾದುದರಿಂದ ಅವನಿಗೆ ನಿದ್ರೆ ಹತ್ತಲಿಲ್ಲ. ಆತನು ಹಾಗೆಯೇ ಮಲಗಿಕೊಂಡನು. ಉಳಿದವರೆಲ್ಲ ಗಡದ್ದಾಗಿ ಮಲಗಿಕೊಂಡರೆಂದು ತಿಳಿದೊಡನೆ ಆತನು ತನ್ನ ಮನದಲ್ಲಿ "ನಾನಾ ವೇಷಗಳನ್ನು ಧರಿಸಿಕೊಂಡು ಈ ಜನರು ನಮ್ಮ ಶೋಧಕ್ಕಾಗಿಯೇ ತಿರಗುತ್ತಾರೆಂಬದಲ್ಲಿ ಏನೂ ಸಂದೇಹವಿಲ್ಲ. ಒಬ್ಬನಂತೂ ನನ್ನ ವಿಷಯದಲ್ಲಿ ಪೂರ್ಣವಾಗಿ ಸಂಶಯಗ್ರಸ್ತನಾಗಿದ್ದಾನೆ. ಆತನು ಬೆಳಿಗ್ಗೆ ಎದ್ದೊಡನೆ ನನ್ನನ್ನು ಹಿಡಿದು ಒಯ್ಯುವದು ನಿಜವು. ಆದ್ದರಿಂದ ಈ ಜನರ ಕೈಯಿಂದ ಪಾರಾಗಿಹೋಗಲಿಕ್ಕೆ ಬೇಕು." ಎಂದು ನಿರ್ಧರಿಸಿ ಮೆಲ್ಲನೆ ಧರ್ಮಶಾಲೆಯಿಂದ ಹೊರಬಿದ್ದು ಒತ್ತರದಿಂದ ಮಾರ್ಗಕ್ರಮಿಸಹತ್ತಿದನು. ಮನುಷ್ಯನು ಎಷ್ಟೇ ತ್ರಾಣಗೆಟ್ಟವನಾದರೂ, ಜೀವದ ಮೇಲಿನ ಪ್ರಸಂಗ ಬಂದಾಗ ದೇವರು ಅವನಲ್ಲಿ ನವಶಕ್ತಿಯನ್ನು ತುಂಬುತ್ತಾನೆಂದು ಹೇಳಬಹುದು. ಯಾಕಂದರೆ ಅಂದು ಸಾಯಂಕಾಲಕ್ಕೆ ಬಂದು ಧರ್ಮಶಾಲೆಯಲ್ಲಿ ಬಿದ್ದುಕೊಂಡ ಆತನಿಗೆ ಇದುವರೆಗೂ ಅಂದರೆ ಆರು ದಿವಸಗಳ ವರೆಗೆ ಅನ್ನದ ದರ್ಶನವಿದ್ದಿಲ್ಲ. ನೀರಿನ ಮೇಲಿಂದಲೇ ಬದುಕಿಕೊಂಡಿದ್ದನು. ಅವನ ಶಕ್ತಿಯು ಕುಂದಿಹೋಗಿತ್ತು. ಆದಾಗ್ಯೂ ಆತನು ಈ ಜನರು ನನ್ನನ್ನು ಹಿಡಿದುಕೊಂಡು ಹೋಗಿ ಫಾಸಿಗೆ ಹಾಕುವರೆಂಬ ಕಲ್ಪನೆಯು ಮನದಲ್ಲಿ ಬಂದೊಡನೆ, ಶಕ್ತಿವಂತನಂತೆ ಚಟಕ್ಕನೆ ಎದ್ದು ಸಪ್ಪಳಿಲ್ಲದೆ ಧರ್ಮಸಾಲೆಯಿಂದ ಹೊರಬಿದ್ದು ಓಡತೊಡಗಿದನು. ಹೀಗೆ ಸುಮಾರು ಐದು ತಾಸು ಓಡುವದರೊಳಗೆ ಅರುಣೋದಯವಾಗಿ ಹೂಬಿಸಿಲು ಬಿದ್ದಿತು. ಬರಬರುತ್ತ ಬಿಸಿಲು ಪ್ರಖರವಾಗತೊಡಗಿತು. ಇನ್ನೂ ಆತನು ಓಡುತ್ತಲೇ ಇದ್ದ. ನಾಲ್ಕಾರು ದಿವಸಗಳಿಂದ ಹೊಟ್ಟೆಯೊಳಗೆ ಅನ್ನವಿಲ್ಲದ್ದರಿಂದಲೂ, ಬಿಸಲಿನ ತಾಪದಿಂದಲೂ ದಾರಿ ನಡೆದ ದಣುವಿಕೆಯಿಂದಲೂ ಆತನು ನಿರ್ವಿಣ್ಣನಾಗಿ ದೈವದಲ್ಲಿದ್ದದ್ದಾಗಲಿ ಎಂದು ಬಳಿಯಲ್ಲಿಯೇ ಕಂಡ ಒಂದು ಚಿಕ್ಕ ದೇವಾಲಯದಲ್ಲಿ ಹೊಕ್ಕು ಮಲಗಿಕೊಂಡನು. ಅಂಥ ಸ್ಥಿತಿಯಲ್ಲಿಯೂ ಅವನಿಗೆ ಗಾಢವಾದ ನಿದ್ರೆ ಹತ್ತಿತು. ಪಾತಕರೇ, ನಿದ್ರೆಯ ಮಹಿಮೆ ಎಷ್ಟಿದೆ ನೋಡಿರಿ!

ಇತ್ತ ಧರ್ಮಸಾಲೆಯಲ್ಲಿ ಮಲಗಿದ ಸರ ಫ್ರಾಂಕ ಸೂಟರನ ಜನರು ಬೆಳಗಾದೊಡನೆ ಎದ್ದು ನೋಡುತ್ತಾರೆ. ನಿನ್ನೆ ಮಾತಾಡಿದ ಆ ಬ್ರಾಹ್ಮಣನು ಎಲ್ಲಿ

ಯೂ ಅವರ ದೃಷ್ಟಿಗೆ ಬೀಳಲಿಲ್ಲ. ಅದನ್ನು ಕಂಡು ಆ ಜನರಿಗೆಲ್ಲ ಬಹಳ ಅಸಮಾಧಾನವಾಯಿತು. ಸಹಜವಾಗಿ ಕೈಗೆ ಸಿಕ್ಕ ಬೇಟೆಯು ಪಾರಾಗಿ ಹೋದ ದ್ದಕ್ಕಾಗಿ ಒಬ್ಬರ ಮೇಲೊಬ್ಬರು ಸಿಟ್ಟಾದರು. ' ಕಡೆಯಲ್ಲಿ, ಇದರಿಂದ ಏನೂ ಆಗದು. ಎಲ್ಲರೂ ಸುತ್ತಲೂ ತಿರುಗಾಡಿ ಅವನನ್ನು ಹಿಡಿಯಬೇಕೆಂದು ನಿಶ್ಚ ಯಿಸಿ ಎಲ್ಲ ಕಡೆಗೂ ಹೊರಬಿದ್ದು ಹೋದರು.

ದೇವಾಲಯದಲ್ಲಿ ಮಲಗಿಕೊಂಡ ರಘುನಾಥರಾಯನು ಸುಮಾರು ಒಂದು ಪ್ರಹರದ ಮೇಲೆ ಎಚ್ಚತ್ತನು. ಆತನಿಗೆ ಅತಿಶಯ ನೀರಡಿಕೆಯಾಗಿತ್ತು. ಬುದ್ಧಿಗೆ ಏನೂ ತಿಳಿಯದ ಹಾಗಾಯಿತು. ಕೂಡಲೆ ಆತನು ದೇವಾಲಯದಿಂದ ಹೊರಬಿದ್ದು ಬಳಿಯಲ್ಲಿಯೇ ಇದ್ದ ಒಂದು ದೊಡ್ಡ ವೃಕ್ಷವನ್ನೇರಿ ಸುತ್ತಲೂ ದೂರದ ವರೆಗೆ ನೋಡಿದನು. ಸುದೈವದಿಂದ ಸಮೀಪದಲ್ಲಿಯೇ ಒಂದು ಕಬ್ಬಿನ ತೋಟವು ಆತನ ಕಣ್ಣಿಗೆ ಕಾಣಿಸಿತು. ಕೂಡಲೇ ವೃಕ್ಷದಿಂದ ಕೆಳಗಿಳಿದು ಅ ಲ್ಲಿಗೆ ಹೋದನು. ಅಲ್ಲಿ ಗಾಣವನ್ನು ಹೂಡಿದ್ದರು. ರಸ ತೆಗೆಯುವವನು ಈತ ನನ್ನು ಕಂಡು ಈ ಬ್ರಾಹ್ಮಣನು ಹಾಲಿಗಾಗಿ ಬಂದಿರುವನೆಂದು ತಿಳಿದು ಸ್ವಚ್ಛ ವಾದ ಒಂದು ದೊಡ್ಡ ತಂಬಿಗೆಯಲ್ಲಿ ಅದೇ ತೆಗೆಯುತ್ತಿದ್ದ ಉತ್ತಮವಾದ ಹಾಲನ್ನು ತುಂಬಿಕೊಂಡು, ತುಸು ಕೆನೆ ಬೆಲ್ಲವನ್ನು ತಕ್ಕೊಂಡು ಬಂದು ಆತನ ಮುಂದಿಟ್ಟನು. ಅದನ್ನು ಕಂಡು ರಘುನಾಥರಾಯನಿಗೆ ಒಳ್ಳೇ ಆನಂದವಾ ಯಿತು. ಆತನು ಬೆಲ್ಲವನ್ನು ತಿಂದು ಮೇಲೆ ರಸವನ್ನು ಕುಡಿದನು. ಹಸಿ ವೆಯು ಹಿಂಗಿತು. ತೃಷೆಯು ಶಮನವಾಯಿತು. ಬಳಿಕ ಆ ತೋಟದಲ್ಲಿಯೇ ಇದ್ದ ಒಂದು ದಟ್ಟವಾಗಿ ಬೆಳೆದ ಅರಳಿಯ ವೃಕ್ಷದ ನೆಳಲಲ್ಲಿ ಹೋಗಿ ಮಲಗಿಕೊಂ ಡನು. ಆ ತೋಟವು ಸಮೀಪದಲ್ಲಿಯೇ ಇದ್ದ ಹೊಸೂರ ಗ್ರಾಮದವನದಾಗಿತ್ತು.

ರಘುನಾಥರಾಯನು ಮಲಗಿಕೊಂಡು ಕೆಲ ಹೊತ್ತಾದ ಬಳಿಕ ಇವನನ್ನು ಶೋಧಿಸುತ್ತಿದ್ದ ಸಿಪಾಯಿರೂ ಆಕಸ್ಮಾತ್ತಾಗಿ ಅದೇ ಗಿಡದ ಬುಡದಲ್ಲಿ ಬಂದು ಕುಳಿತುಕೊಂಡು ತಂಬಾಕ ಹಾಕಿಕೊಳ್ಳಹತ್ತಿದರು. ಕೆಲವರು ಗಾಂಜೀ ಸೇದ ಲಾರಂಭಿಸಿದರು. ಆ ತೋಟದವನನ್ನು ಕರೆದು ಕಬ್ಬಿನ ಹಾಲು ಬೆಲ್ಲ ತರಲಿಕ್ಕೆ ಹೇಳಿದರು. ಈ ಜನರ ಗದ್ದಲಕ್ಕೆ ರಾಘೋಪಂತನು ಎಚ್ಚತ್ತು ಎದ್ದು ಕುಳಿತನು. ಅವರಲ್ಲಿಯ ಅನೇಕರನ್ನು ಗುರ್ತಿಸಿದನು. ಅಷ್ಟರಲ್ಲಿ ರಘುನಾಥರಾಯನನ್ನು ಎವೆಯಿಕ್ಕದೆ ನೋಡುತ್ತ ಧರ್ಮಸಾಲೆಯಲ್ಲಿ ಕುಳಿತ ಸಿಪಾಯಿಯು ಎದ್ದು ಬಂದು ರಘುರಾಯನಿಗೆ ' ನಮಸ್ಕಾರ ರಾಯರೇ, ತಾವು ಬೆಳಗಾವಿಗೆ ಹೋಗು ವವರಲ್ಲವೇ? ಇಲ್ಲಿಗೇಕೆ ಬಂದಿರಿ? ಎನ್ನುತ್ತ ಅವನ ಕೈಯನ್ನು ಹಿಡಿದು ಇನ್ನು ಮೇಲೆ ನೀವು ನಮ್ಮೊಡನೆ ನರಗುಂದಕ್ಕೆ ಬರಬೇಕು. ಎಂದು ನುಡಿದನು. ಆ ಜನರನ್ನು ನೋಡಿದೊಡನೆ ರಘುನಾಥರಾಯನ ಮುಖವು ಬೆಳ್ಳಗಾಯಿತು.

ಎದೆಯೊಡೆದು ನೀರಾಯಿತು. ತನ್ನ ಕೈಹಿಡಿದವನ ವಿಷಯಕ್ಕೆ ಸಿಟ್ಟು ಬಂದಿತು. ಆದರೆ ಮಾಡುತ್ತಾನೇನು? ನಿಃಶಸ್ತ್ರನು, ಅಶಕ್ತನು, ಮೇಲಾಗಿ ಏಕಾಕಿಯು. ಅವರಾದರೋ ಅನೇಕರು. ಅಂದಮೇಲೆ ಅವನ ಆಟವೇನು ನಡೆಯಬೇಕು? ಆದುದರಿಂದ ಒಂದು ತುಟಿ ಎರಡು ಮಾಡದೆ ದೈವದ ಮೇಲೆ ಹೊರೆ ಹಾಕಿ ಸುಮ್ಮನೆ ಅವರ ವಶವಾದನು. ಅವರೊಡನೆ ಮಾತಾಡುವದೂ ಅಸಹ್ಯವೆನಿಸಿತು. ಆದರೂ ಅವನನ್ನು ಬಂಧಿಸಿಕೊಂಡು ಹೋಗಹತ್ತಲು ಆತನು 'ಮಿತ್ರರೇ, ನೀವು ನಮ್ಮವರು, ನಮ್ಮ ದೇಶದವರು, ಈಗ ಬ್ರಿಟಿಶ ಅಧಿಕಾರಿಗಳ ಸೇವಕರಾಗಿದ್ದರೂ ಕೂಡ ನಮ್ಮ ಹಿಂದಿನದನ್ನು ಮರೆಯಬಾರದು. ನಾವು ನಮ್ಮವರ ಅಹಿತ ಕಾರ್ಯವನ್ನೇನೂ ಮಾಡಿಲ್ಲವಾದರೂ ನೀವು ನಮ್ಮ ಮೇಲೆ ತಿರುಗಿ ಬೀಳುವಿರಿ. ಇದು ನಿಮಗೆಲ್ಲರಿಗೂ ಯೋಗ್ಯ ಕಂಡರೆ ನಮ್ಮ ಯತ್ನವಿಲ್ಲ. ನಮ್ಮನ್ನು ಹಿಡಿಯುವದರಿಂದ ನಿಮಗೇನು ಲಾಭವಾಗಬಹುದೋ, ಅಷ್ಟೇ ಲಾಭವು ನಮ್ಮನ್ನು ಬಿಟ್ಟರೂ ಆಗುವದು. ಈ ವಿಷಯದಲ್ಲಿ ವಿಚಾರ ಮಾತ್ರ ಮಾಡಬೇಕು.' ಹೀಗೆ ನುಡಿದು ಅವರ ಮನವೊಲಿಸಲು ಬಹಳ ಪ್ರಯತ್ನ ಮಾಡಿದನು. ಅದರಿಂದ ಆಗತಕ್ಕಷ್ಟು ಉಪಯೋಗವಾಗಲಿಲ್ಲ. ತಿರುಗಿ ಇವನು ಬಹು ಭದ್ರವಾದ ಕಾವಲಿನಲ್ಲಿ ಇಡಲ್ಪಡಹತ್ತಿದನು. ಈ ಜನರಲ್ಲಿ ಅನೇಕರು ರಘುನಾಥರಾಯನ ಯೋಗ್ಯತೆಯನ್ನು ತಿಳಿದವರಾದ್ದರಿಂದ ಅವನಿಗೆ ಏನೂ ತಾಪವಾಗದಂತೆ ನಡೆದುಕೊಂಡರು.

ರಘುನಾಥರಾಯನನ್ನು ಹಿಡಿದು ತಂದರೆಂಬ ಸುದ್ದಿಯು ಊರಲ್ಲೆಲ್ಲ ಪಸರಿಸಿತು. ಜನರೆಲ್ಲ ಹಳಹಳಿಸುತ್ತ ಆತನನ್ನು ನೋಡಲು ಬರತೊಡಗಿದರು. ಅವರ ಆಪ್ತೇಷ್ಟರಿಗೆ ಅವನ ದರ್ಶನಕ್ಕೆ ಅಪ್ಪಣೆ ಸಿಗುವದು ದುರ್ಲಭವಾದಾಗ ಉಳಿದವರ ಪಾಡೇನು? ರಘುನಾಥರಾಯನನ್ನು ತಂದು ಸೆರೆಯಲ್ಲಿಟ್ಟಿದ್ದರೂ ಸೆರೆಮನೆಯಲ್ಲಿ ಕುಳಿತ ಆತನು ತನ್ನಲ್ಲಿ ತಾನೆ "ದೇವಾ ಏನಾಯಿತು ನನ್ನ ಅವಸ್ಥೆ! ಸ್ವರಾಜ್ಯವಿದ್ದಾಗ ಜನರು ನನಗೆ ಎಷ್ಟು ಮಾನ ಕೊಡುತ್ತಿದ್ದರು? ಎಷ್ಟು ಆದರದಿಂದ ನನ್ನನ್ನು ಕಾಣುತ್ತಿದ್ದರು? ಈಗ ಅದೆಲ್ಲ ಲೋಪವಾಗಿದೆ. ನನ್ನ ಆಜ್ಞೆಯನ್ನು ಅನುಸರಿಸಿ ಕಾರ್ಯವನ್ನು ಮಾಡಲು ತತ್ಪರರಾಗುತ್ತಿದ್ದ ಜನರೇ ನನ್ನ ಮೇಲೆ ಕಾವಲು ಮಾಡುತ್ತಿರುವರು. ಬಹಳವಾದರೆ ಇನ್ನು ನಾಲ್ಕಾರು ದಿವಸಗಳಲ್ಲಿ ನನಗೆ ಫಾಸೀ ಶೀಕ್ಷೆಯಾಗಲಿ, ತೋಫಿನ ಬಾಯಿಗೆ ಕಟ್ಟಿ ಕೊಲ್ಲುವ ಆಜ್ಞೆಯಾಗಲಿ, ಆಗುವದು ನಿಜವು. ಇದರಲ್ಲೇನೂ ಸಂದೇಹವಿಲ್ಲ. ಭಗವಂತ, ನನ್ನ ಅವಸ್ಥೆಯ ಅಂತ್ಯದಲ್ಲಿ ಹೀಗಾಗಬೇಕೆಂದು ನಿನ್ನ ಅಪೇಕ್ಷೆಯೋ? ನಿನ್ನ ಇಚ್ಛೆಯೇ ಹೀಗಿದ್ದರೆ ಅದಕ್ಕೆ ಯಾರೇನು ಮಾಡುವರು? ನನ್ನ ಈ ನಾಚಿಗ್ಗೇಡಿ ಜೀವನಕ್ಕೆ ನಾನು ಬೇಸತ್ತಿರುವೆನು. ಇದನ್ನೊಮ್ಮೆ ತ್ಯಜಿಸಿದೆನೆಂದರೆ ನನ್ನ ಆತ್ಮವು ಶಾಂತವಾಗುವದು. ಅನ್ಯ ಉಪಾಯವೇ ಇಲ್ಲ" ಎಂದು ವಿಚಾರಿಸುತ್ತಿದ್ದನು. ನಾನಾ

ತರಹದ ದುಃಖಗಳ ಜಗ್ಗಾಟವಲ್ಲಿ ಸಿಕ್ಕು ಬಿದ್ದ ಆತನು ಪಂಜರದಲ್ಲಿಯ ಹುಲಿ ಯಂತೆ ಉಗ್ರವಾಗಿ ತೋರುತ್ತಿದ್ದನು. ಬಹು ಪ್ರಯತ್ನ ಮಾಡಿದ ಬಳಿಕ ಅಧಿಕಾರಿಗಳು ರಘುನಾಥರಾಯನ ಹೆಂಡರು ಮಕ್ಕಳಿಗೆ ಆತನ ದರ್ಶನಕ್ಕೆ ಅಪ್ಪಣೆ ಕೊಟ್ಟರು. ಕಾವಲುಗಾರರು ಅವರನ್ನೆಲ್ಲ ರಘುನಾಥರಾಯನು ಇದ್ದ ಸ್ಥಳವನ್ನು ತೋರಿಸಿದರು. ಆತನನ್ನು ಕಂಡೊಡನೆ ಎಲ್ಲರ ದುಃಖವೂ ಮೇರೆ ದಪ್ಪಿತು. ಹೆಂಡತಿಯು ಇನ್ನು ಪತಿಯ ದರ್ಶನವು ಇದೇ ಕಡೆಯದೆಂದು ತಿಳಿದು ಅವನನ್ನು ಗಟ್ಟಿಯಾಗಿ ಅಪ್ಪಿಕೊಂಡು ದುಃಖಿಸಹತ್ತಿದಳು. ಅವಳು "ತನ್ನ ಪತಿಗೆ' ಮಹಾರಾಜ ಏನಿದು ನಿಮ್ಮ ಅವಸ್ಥೆ? ನಿಮ್ಮ ಈ ದುರ್ದಸೆಯನ್ನು ನೋಡಲಿಕ್ಕೆ ದೇವರು ನನ್ನನ್ನು ಏಕೆ ಇನ್ನೂ ಜೀವಂತವಾಗಿಟ್ಟಿರುವನೋ? ಯಾವ ಹಸ್ತಗಳಿಂದ ತಾವು ಇಲ್ಲಿಯ ವರೆಗೆ ಅನೇಕ ಸತ್ಕೃತ್ಯಗಳನ್ನು ಮಾಡಿ ದಿರೋ ಆ ಹಸ್ತಗಳಿಗೆ ಕಬ್ಬಿಣದ ಸಂಕೋಲೆಯೇ! ದೇವಾ, ನಿನ್ನ ಮನೆಯಲ್ಲಿ ನ್ಯಾಯವು ಇದೇ ಏನು? ಯಾರಿಗೂ ಇದುವರೆಗೆ ಯಾವ ತರಹದ ಪೀಡೆಯನ್ನು ಕೊಡದ ತಮ್ಮ ಸ್ಥಿತಿಯು ಹೀಗಾಯಿತೇ? ಇನ್ನು ಮುಂದೆ ಏನಾಗುವದೋ? ನಿಮ್ಮನ್ನಗಲುವ ನಾವು ಇನ್ನು ಯಾರ ಆಶ್ರಯ ಹೊಂದಬೇಕು? ದೇವಾ ವೆಂಕ ಟೇಶಾ? ಒಮ್ಮಿಂದೊಮ್ಮೆ ನೀನು ನಿರುಪದ್ರವಿಗಳಾದ ನಮ್ಮ ಮೇಲೆ ಇಷ್ಟೇಕೆ ಕೋಪಗೊಂಡೆ! ನಾವು ಅಜ್ಞರು ನಮಗೆ ಹೇಗೆ ತಿಳಿಯಬೇಕು? ನನ್ನ ಪತಿಯ ವಿಷಯದಲ್ಲಿ ನಿನಗೆ ಇನ್ನೂ ಕರುಣ ಬಾರದೇ? ಅಯ್ಯೋ, ಹದಿನೈದು ದಿವಸಗ ಳಲ್ಲಿ ನಿಮ್ಮ ಅವಸ್ಥೆ ಹೀಗಾಗಿರುವದಲ್ಲ! ಅಡವಿಯಲ್ಲಿ ಅಡ್ಡಾಡಿದ್ದರಿಂದ ಕಾಲು ಬೆರಳುಗಳೆಲ್ಲ ಬಿಚ್ಚಿ ಹೋಗಿವೆ. ಅನ್ನ ನೀರುಗಳಿಲ್ಲದೆ ಮುಖವು ಕಂದಿ ಹೋಗಿದೆ ಕಣ್ಣುಗಳು ಒಳನಟ್ಟಿವೆ. ನಿಮ್ಮ ಈ ಅವಸ್ಥೆಯನ್ನು ನೋಡುವದು ನನ್ನಿಂ ದಾಗದು ದೇವಾ, ನನ್ನ ಕಣ್ಣು ಮುಚ್ಚಿಬಿಡು. ದೀನಳಾದ ನನ್ನ ಮೊರೆಯನ್ನು ಈಗಲಾದರೂ ಕೇಳು. ಇವರ ನ್ಯಾಯ ನಿರ್ಣಯವಾಗುವ ಮೊದಲು ನನ್ನನ್ನು ನಿನ್ನ ಪಾದಾರವಿಂದದಲ್ಲಿ ಸೇರಿಸಿಕೋ! ಇಷ್ಟೇ ನನ್ನ ಬಯಕೆ! ' ಹೀಗೆ ಅವಳು ಶೋಕ ಮಾಡಮಾಡುತ್ತಲೇ ಒಮ್ಮಿಂದೊಮ್ಮೆ ಮೂರ್ಛಿತಳಾಗಿ ಬಿದ್ದಳು ಪತಿಯ ಕೊರಳಿಗೆ ಗಟ್ಟಿಯಾಗಿ ಆಲಿಂಗಿಸಿದ ಅವಳ ಕೈಗಳು ಸಹಜವಾಗಿ ಸಡಿ ಲಾದವು. ಅಷ್ಟರಲ್ಲಿ ಆತನ ಮಕ್ಕಳು ಬಂದು ಅತನನ್ನು ತಬ್ಬಿಕೊಂಡು ಅಳಲಾ ರಂಭಿಸಿದರು. ಆಗ ರಘುನಾಥರಾಯನು ಮಕ್ಕಳಿಗೆ 'ಮಕ್ಕಳಿರಾ! ನೀವು ಪುರು ಷರಾಗಿ ಸ್ತ್ರೀಯರಂತೆ ಅಳಲಾರಂಭಿಸಿರುವಿರಲ್ಲ! ಇದಕ್ಕೇನೆನ್ನಬೇಕು? ಇಗೋ ನೋಡಿರಿ! ಶೋಕಾಕುಲಳಾದ ಇವಳು ಎಚ್ಚರದಪ್ಪಿ ಬಿದ್ದಿದ್ದಾಳೆ. ಮೊದಲು ನೀರು ತಂದು ಅವಳ ಕಣ್ಣಿಗೆ ಹಚ್ಚಿರಿ. ಬಳಿಕ ಹೇಳುವದನ್ನು ಹೇಳಿರಿ" ಎಂದೊ ಡನೆ ಅವರು ಹೋಗಿ ನೀರು ತಂದು ತಾಯಿಯ ಕಣ್ಣುಗಳಿಗೆ ಹಚ್ಚಿ ಮೈ ಮೇಲೆ

ಸಿಂಪಡಿಸಿ ಅವಳನ್ನು ಎಚ್ಚರಗೊಳಿಸಿದರು. ಬಳಿಕ ಅವರೆಲ್ಲರನ್ನೂ ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ' ನೀವು ಹೀಗೆ ಇಲ್ಲಿ ಆಕ್ರೋಶ ಮಾಡುತ್ತ ಕೂಡ್ರಬೇಡಿರಿ. ನೀವಿರುವ ಸ್ಥಳಕ್ಕೆ ಹೋಗಿ ನನ್ನ ದುಃಖವನ್ನು ಮರೆತು ಆನಂದದಿಂದ ಕಾಲಕಳೆಯಿರಿ. ನಮ್ಮೆಲ್ಲರ ದುಃಸ್ಥಿತಿಯನ್ನು ಕಂಡು ಸೆರೆಮನೆಯ ಕಾವಲುಗಾರರು ಕುಚೇಷ್ಟೆ ಮಾಡಹತ್ತುವರು. ಮಾತ್ರ ಕಾರಣ ನೀವು ಹೋಗುವದೇ ವಿಹಿತವೆಂದು ನನಗೆ ಕಾಣುತ್ತದೆ. ಹೀಗೆ ಶೋಕಿಸುವದರಿಂದ ಆಗುವದಾದರೂ ಏನು? ಮಗನೇ ನನ್ನ ಸ್ಥಿತಿಯು ಏನಾಗುವದೆಂಬದು ತಿಳಿದೇ ಅದೆ! ನನ್ನ ಶವವನ್ನು ಮಾತ್ರ ನೀನು ಯಾರಿಂದಲೂ ಅಪವಿತ್ರವಾಗಗೊಡದೆ ನೀನೇ ಅಂತ್ಯ ವಿಧಿಯನ್ನು ಮಾಡು. ಎಷ್ಟೇ ಮೊರೆಯಿಟ್ಟರೂ ಜೀವದಿಂದ ಪಾರಾಗುವಂತಿಲ್ಲ. ಕಾರಣ ಅಳಬೇಡಿರಿ ಬಂಡಾಯವು ಶಾಂತವಾದ ಬಳಿಕ ನಿಮ್ಮ ಉತ್ಪನ್ನದ ಸಲುವಾಗಿ ಯಾವನಾದರೂ ಪುಣ್ಯಾತ್ಮನು ಬಡಿದಾಡಿ ನಿಮ್ಮ ಉದರ ನಿರ್ವಾಹಕ್ಕಾದರೂ ಸಾಲುವಷ್ಟು ಅನುಕೂಲತೆಯನ್ನು ಮಾಡಿಕೊಡುವನು. ನೀವು ಸುಖದಿಂದ ಕಾಲಕ್ರಮಣ ಮಾಡಿರಿ ಇಷ್ಟೇ ನನ್ನ ಹೇಳಿಕೆಯು ' ಎಂದು ಮಾತಾಡುತ್ತಿರಲು ಕಾವಲುಗಾರನು ಬಂದು " ಹು. ಹೊರಡಿರಿನ್ನು ! ನಿಮಗೆ ಭೆಟ್ಟಿಯಾಗಲು ಕೊಟ್ಟ ಅವಧಿಯು ಮುಗಿಯಿತು ' ಎಂದು ಹೊರದೂಡುವ ಪ್ರಯತ್ನ ಮಾಡಹತ್ತಿದನು. ಇಷ್ಟಾದರೂ ತಾಯಿ ಮಕ್ಕಳು ರಘುನಾಥರಾಯನನ್ನು ಮತ್ತೂ ಆಲಿಂಗಿಸಿಕೊಂಡು ಅಳಹತ್ತಿದರು. ಇನ್ನು ಇವರೆಲ್ಲರದೂ ನನ್ನದೂ ಇದೇ ಕಡೆಯ ದರ್ಶನವು ಇನ್ನು ಅಕ್ಷಯ ವಿಯೋಗವಾಗುವದೆಂಬ' ವಿಚಾರವು ಆತನ ಮನದಲ್ಲಿ ಬಂದೊಡನೆ ಕಂಬನಿಗಳು ಹೊರಸೂಸಹತ್ತಿದವು ಅಲ್ಲಿಯೇ ನಿಂತ ಸೇವಕನು " ಏಳಿರಿ. ನಡೆಯಿರಿ ಅಳುತ್ತ ಕೂಡಲು ಇದೇನು ಮನೆಯೇ " ಎಂದು ಅವರನ್ನು ಅಲ್ಲಿಂದ ಹೊರಗೆ ಕಳಿಸಿದನು. ಕಾಲಚಕ್ರದಲ್ಲಿ ಸಿಕ್ಕಿ ದೀನರಾದ ಅವರು ಉಪಾಯವಿಲ್ಲದೆ ಸುಮ್ಮನೆ ಹೊರಟು ಹೋದರು.

ತನ್ನ ಮನೆಯವರು ತನ್ನನ್ನು ಬಿಟ್ಟು ಹೋದ ವಿಷಯವು ರಘುನಾಥರಾಯನ ಮನಕ್ಕೆ ಬಹು ವ್ಯಥೆಯನ್ನುಂಟು ಮಾಡಿತು. ಅವನು ಅನೇಕ ವಿಚಾರಗಳಲ್ಲಿ ಮಗ್ನನಾಗಿರುತ್ತಿದ್ದನು. ಒಂದರ ಹಿಂದೊಂದು ದಿವಸಗಳು ಹೋಗಹತ್ತಿದವು. ಊರ ಜನರು ಈತನ ಭೆಟ್ಟಿಗಾಗಿ ವಿಶ್ವಪ್ರಯತ್ನ ಮಾಡಿದರು. ಆದರೆ ಈತನು ನರಗುಂದದ ಮುಖ್ಯ ಮಂತ್ರಿಯೂ ಬಂಡಾಯದಲ್ಲಿ ಮುಖ್ಯ ಭಾಗ ತಕ್ಕೊಂಡವನೂ ಆದದರಿಂದ ಇವರ ಭೆಟ್ಟಿಗೆ ಯಾರಿಗೂ ಅಪ್ಪಣೆ ದೊರೆಯಲಿಲ್ಲ. ಈತನನ್ನು ಬಹು ಭದ್ರವಾದ ಕಾವಲದಲ್ಲಿಟ್ಟಿದ್ದರು. ಈತನ ಉಳಿದ ಸಂಗಡಿಗರ ಶೋಧವೂ ಒಳ್ಳೇ ಭರದಿಂದ ನಡೆದಿತ್ತು. ಆದರೆ ಯಾರೂ ಸಿಕ್ಕಿದ್ದಿಲ್ಲ. ಆದದರಿಂದ 'ಈ ಒಬ್ಬ ಮುಖ್ಯ ಮಂತ್ರಿಯದೇ ಆಗಲೊಲ್ಲದೇಕೆ ನ್ಯಾಯನಿರ್ಣಯ ಮಾಡಿ ಶಿಕ್ಷೆಯನ್ನು ಕೊಡಬೇಕೆಂದು' ಮುಖ್ಯ ಸಾಹೇಬನ ಮನಕ್ಕೆ ಅನಿಸಿತು.

ತೀವ್ರವೇ ನ್ಯಾಯ ಸಭೆಯು ಏರ್ಪಡಿಸಲ್ಪಟ್ಟಿತು. ನ್ಯಾಯಾಧಿಪತಿಯ ಸಮೀಪದಲ್ಲಿ ರಘುನಾಥರಾಯನನ್ನು ಒಯ್ದು ನಿಲ್ಲಿಸಿದರು. ಕೃತಘ್ನನಾದ ಕೃಷ್ಣರಾಯನಿಂದ ರಘುನಾಥರಾಯನ ವಿಷಯವಾಗಿ ಎಲ್ಲ ಸುದ್ದಿಯು ನ್ಯಾಯಾಧಿಪತಿಗೆ ಈ ಮೊದಲೇ ತಿಳಿದಿತ್ತಾಗ್ದರಿಂದ, ರಘುನಾಥರಾಯನಿಗೆ ಆತನು ಸಂಸ್ಥಾನದ ವಿಷಯವಾಗಿ ಹೆಚ್ಚಿಗೇನೂ ಕೇಳಲಿಲ್ಲ. ರಘುನಾಥರಾಯನು ಆ ವಿಷಯದಲ್ಲಿ ಏನೂ ಉತ್ತರ ಕೊಡಲಿಲ್ಲ. ಪಾಠಕರೇ, ಹಿಂದಕ್ಕೆ ಗೋವಿಂದರಾಯನ ಮಗನಾದ ಕೃಷ್ಣರಾಯನು ಇದೇ ಸಾಹೇಬನಿಗೆ "ನನ್ನ ಆಪ್ತ ಜನರು ನಿಮ್ಮ ಕೈಗೆ ಸಿಕ್ಕಾಗ ಅವರನ್ನು ಪೀಡಿಸಬಾರದೆಂದು" ಮಾಡಿಕೊಂಡ ವಿನಂತಿಯು ನಿಮಗೆ ಜ್ಞಾಪಕದಲ್ಲಿರುವದೇ? ಆ ಹುಡುಗನ ಬಿನ್ನಹಕ್ಕೆ ಮನ್ನಣೆಯನ್ನಿತ್ತ ಸಾಹೇಬನು ರಘುನಾಥರಾಯನಿಗೆ "ಗೋವಿಂದರಾಯನ ಮಗನಾದ ಕೃಷ್ಣರಾಯನ ಪರಿಚಯವಿರುವದೋ ನಿಮಗೆ'' ಎಂದು ಕೇಳಿದನು. 'ಆತನು ನಮ್ಮವನೇ. ಆತನ ಪರಿಚಯವಿರದೇನು ಮಾಡೀತು? ಇರಲಿ. ಆ ಪ್ರಸ್ತಾಪವೇಕೆ? ಇಲ್ಲಿ?' ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಸಾಹೇಬನು "ಅಯ್ಯಾ ಆತನು ನಿಮ್ಮ ಮೇಲೆ ದಯದೋರಿ ನಮ್ಮ ಆಪ್ತರಿಗೆ ನೀವು ಏನೂ ದುಃಖಕೊಡಬಾರದೆಂದು' ನಮಗೆ ಕೇಳಿಕೊಂಡಿದ್ದಾನೆ. ಅದಕ್ಕಾಗಿ ಕೇಳಿದೆನು. ಆ ಹುಡುಗನ ಬೇಡಿಕೆಯಂತೆ ನಾವು ನಡೆದುಕೊಳ್ಳಲು ನಿರ್ಧರಿಸಿದ್ದೇವೆ. ಆದರೆ ನೀವು ಮುಖ್ಯ ಅಪರಾಧಿಗಳಲ್ಲೊಬ್ಬರಾದ್ದರಿಂದ ನಿಮ್ಮ ವಿಷಯದಲ್ಲಿ ನಮ್ಮ ಆಟವೇನೂ ಸಾಗುವಂತಿಲ್ಲ. ಆದರೂ ನೀವು ಭಾಸ್ಕರರಾಯ, ಹಾಗೂ ವಿಷ್ಣು ಇವರ ಶೋಧ ಮಾಡಿಕೊಟ್ಟರೆ ನಾವು ವಿಶ್ವ ಪ್ರಯತ್ನ ಮಾಡಿ ತಮ್ಮನ್ನು ನಿರಪರಾಧಿಗಳೆಂದು ನಿರ್ಣಯಿಸಿ ಮುಕ್ತಮಾಡುವೆವು. ಮತ್ತು ನೀವಾದರೂ ಅವರ ಶೋಧ ಮಾಡಿಕೊಟ್ಟು ಇನಾಮು ಪಡೆದು ಜೀವದಿಂದ ಪಾರಾಗುವದೇ ನಮಗೆ ಉತ್ತಮವಾಗಿ ಕಾಣುವದು' ಎಂದು ಹೇಳಿದನು.

ಸಾಹೇಬನ ಸೌಮ್ಯವಾದ ಮಾತುಗಳನ್ನು ಕೇಳಿದೊಡನೆ ರಘುನಾಥರಾಯನು "ಸಾಹೇಬರೇ, ನನಗೆ ಭಾಸ್ಕರರಾಯನ ಬಗ್ಗೆ ಏನೂ ಗೊತ್ತಿಲ್ಲ. ವಿಷ್ಣುವು ಎತ್ತ ಹೋದನೆಂಬದನ್ನೂ ನಾನರಿಯೆ. ನಮ್ಮ ಬಾಲಕನಾದರೂ ಒಳ್ಳೇ ಜಾಣನಾದ ಕೃಷ್ಣರಾಯನು ಹೇಳಿಕೊಂಡ ಮೇರೆಗೆ ನಡೆಯಿರಿ ಬೇಕಾದರೆ ಬಿಡಿರಿ ನನ್ನಿಂದ ಯಾರ ಶೋಧವೂ ಹತ್ತಲಾರದು. ನೀವು ಒಳ್ಳೇ ಧೈರ್ಯ ಮಾಡಿ ನನಗೆ ಕೊಡಲು ಬಯಸಿದ ಆ ಇನಾಮಿನ ಆಶೆಯೂ ನನಗಿಲ್ಲ ಇದರಲ್ಲಿ ಪಾಪ! ಆ ಭಾಸ್ಕರರಾಯನದಾದರೂ ಏನು ತಪ್ಪಿದೆ? ಬಂಡಾಯಕ್ಕೆ ಕಾರಣರಾದವರು ನಾವು, ಅವನ ಮಂತ್ರಿಗಳು. ಭಾಸ್ಕರರಾಯನು ಏನೂ ಮಾಡಿದವನಲ್ಲ ನಾನು ಸತ್ಯವನ್ನೇ ಹೇಳುತ್ತಿರುವೆನು. ಬಂಡಾಯವನ್ನು ನಾನು ನನ್ನ ಒಬ್ಬನ

ಮಾತ್ರದಿಂದಲೇ ಹೊಡೆದದ್ದು ಅರಸನ ಅಪ್ಪಣೆಯಿಲ್ಲದೆ ನೀನು ಹೀಗೆ ಇದನ್ನು ಮಾಡಲು ಸಮರ್ಥನಾದಿ' ಎಂದು ಕೇಳಬಹುದು. ನಾನು ಕಾರಭಾರಿಯಾಗಿದ್ದದರಿಂದ ನನ್ನ ಅಪ್ಪಣೆಗೆ ಸಂಸ್ಥಾನದಲ್ಲೆಲ್ಲ ಬೆಲೆಯಿತ್ತು. ಎಲ್ಲ ಜನರೂ ನನ್ನ ಅಪ್ಪಣೆಯನ್ನು ಅಕ್ಷರಶಃ ಪಾಲಿಸುತ್ತಿದ್ದರು. ಆದ್ದರಿಂದ ನನಗೆ ಬಂಡಾಯ ಹೂಡಲು ಯಾವ ತೊಂದರೆಯೂ ಬರಲಿಲ್ಲ. ಅರಸನು ಇದರಲ್ಲಿ ಪೂರ್ಣ ನಿರ್ದೋಷಿಯಾಗಿದ್ದಾನೆ. ನಿಜವನ್ನು ಹೇಳಿದೆನು. ಇನ್ನು ಹೇಳುವದೇನೂ ಉಳಿಯಲಿಲ್ಲ. ನಿಮ್ಮ ಮನಕ್ಕೆ ಬಂದಂತೆಮಾಡಬಹುದು' ಎಂದು ನುಡಿದು ಸುಮ್ಮನಾದನು.

ರಘುನಾಥರಾಯನ ಈ ತರಹದ ಭಾಷಣವನ್ನು ಕೇಳಿ ಈತನು ನಿಜವಾದ ಸ್ವಾಮಿಭಕ್ತನಿರುವನಾದ್ದರಿಂದ ತನ್ನ ಸ್ವಾಮಿಯು ನಿರ್ದೋಷಿಯಿರುವನೆಂದು ಕಡೆಯವರೆಗೂ ಸಾಧಿಸುತ್ತಿರುವನು. ವಾಹವ್ವಾ, ರಘುನಾಥರಾಯಾ ನಿನ್ನ ಸ್ವಾಮಿಭಕ್ತಿಗೆ ಎಣೆಯಿಲ್ಲ.' ಎಂದು ಮನದಲ್ಲಿಯೇ ಆತನನ್ನು ಹೊಗಳುತ್ತ ' ಈತನಿಗೆ ಶಿಕ್ಷೆ ವಿಧಿಸದೆ ಬಿಡಲು ಬರುವಂತಿಲ್ಲ ' ಎಂದು ತನ್ನಲ್ಲಿಯೇ ಅಂದುಕೊಂಡು, ತೀರ್ಪನ್ನು ಬರೆಯ ಹತ್ತಿದನು. ಇಂದು ರಘುನಾಥರಾಯನ ನ್ಯಾಯ ನಿರ್ಣಯವಾಗುವದೆಂದು, ನ್ಯಾಯ ಸಭೆಯಲ್ಲಿ ಜನರು ಹೆಚ್ಚಾಗಿ ಕೂಡಿದ್ದರು. ತನ್ನ ಕಾರ್ಯಭಾರಿತನದಲ್ಲಿ ರಘುನಾಥರಾಯನು ಅನೇಕ ಜನರ ಕಲ್ಯಾಣಮಾಡಿದ್ದರಿಂದ ಅವರೆಲ್ಲರೂ ಆ ಪುಣ್ಯಾತ್ಮನ ದರ್ಶನವು ತಮಗೆ ಇಂದು ಆಗುವದೆಂದು ಒಟ್ಟುಗೂಡಿದ್ದರು. ಆದರೆ ಜನರ ಗದ್ದಲದಲ್ಲಿ ಅವನ ಮುಖವು ಕೂಡ ಕಾಣದ ಹಾಗಾದ್ದರಿಂದ ಅವರೆಲ್ಲರೂ ಹಳಹಳಿಸಹತ್ತಿದರು. ಅವನ ಜೀವಂತ ಮುಖವನ್ನು ನೋಡುವದು ತಮ್ಮ ದೈವದಲ್ಲಿ ಇಲ್ಲೆಂದು ಮರುಗಿದರು. ಅಷ್ಟರಲ್ಲಿ ತೀರ್ಪು ಬರೆಯುವದಾಯಿತು. ಶಿರಸ್ತೇದಾರನು ಅದನ್ನು ತಕ್ಕೊಂಡು 'ರಘುನಾಥರಾಯನಿಗೆ ಫಾಸೀ ಶಿಕ್ಷೆಯು ವಿಧಿಸಲ್ಪಟ್ಟಿದೆ' ಎಂದು ಓದಿ ಹೇಳಿದನು. ಜನರೆಲ್ಲ 'ಘಾತವಾಯಿತೆಂದು' ನುಡಿದರು. ರಘುನಾಥರಾಯನನ್ನು ನ್ಯಾಯ ಸಭೆಯಿಂದ ಹೊರಗೆ ತಂದೊಡನೆ ಜನರೆಲ್ಲ ' ಅಯ್ಯೋ ನಮ್ಮ ಕಲ್ಯಾಣಕಾರಿಯಾದ ರಘುನಾಥರಾಯರೇ ನಮ್ಮನ್ನೆಲ್ಲ ಹೀಗೆ ಬಿಟ್ಟು ಹೋಗುವಿರಾ! ' ಎಂದು ದೊಡ್ಡ ದನಿ ತೆಗೆದು ಶೋಕ ಮಾಡಹತ್ತಿದರು ಅವನ ಮೇಲೆ ದುಮುಕ ಹತ್ತಿದರು. ಆದ್ದರಿಂದ ಶಿಪಾಯರು ಅವರನ್ನೆಲ್ಲ ಹೊಡೆದೋಡಿಸಿ ಬಿಟ್ಟರು.

ನಿಯಮಿತ ಕಾಲಕ್ಕನುಸರಿ ಶಿಪಾಯರು ರಘುನಾಥರಾಯನನ್ನು ವಧಸ್ಥಾನಕ್ಕೆ ಕರೆದುಕೊಂಡು ಹೋದರು. ಕಟ್ಟಿಗೆಯಿಂದ ಸಿದ್ಧಮಾಡಿಟ್ಟ ಮೇಟಿಯ ಮೇಲೆ ಏರಿಸಿದರು. ಆಗ ರಘುನಾಥರಾಯನು ಎಲ್ಲರಿಗೂ ಕಾಣಹತ್ತಿದನು. ಆದರೆ ಉಪಯೋಗವೇನು? ಆತನು ಇನ್ನೊಂದು ಘಳಿಗೆಯಲ್ಲಿ ಪರಲೋಕಕ್ಕೆ

ತೆರಳುವನೆಂಬದು ನೆರೆದ ಜನರಿಗೆಲ್ಲ ತಿಳಿದಿತ್ತು. ರಘುನಾಥರಾಯನು ಅಲ್ಲಿ ನಿಲ್ಲಿಸಲ್ಪಟ್ಟ ಬಳಿಕ ಒಬ್ಬ ಅಧಿಕಾರಿಯು ಎದ್ದು ನಿಂತು ಆತನ ಮೇಲಿಟ್ಟ ಆರೋಪಗಳನ್ನೆಲ್ಲ ಜನರಿಗೆ ಕೇಳಬರುವಂತೆ ಗಟ್ಟಿಯಾಗಿ ಓದಿ ಹೇಳಿದನು. ಅದರಂತೆ ವಿಧಿಸಲ್ಪಟ್ಟ ಶಿಕ್ಷೆಯನ್ನು ತಿಳಿಸಿದನು. ಬಳಿಕ ಆತನು ರಘುನಾಥರಾಯನಿಗೆ "ಎಲ್ಲ ಜನರಿಗೂ ನಮಸ್ಕರಿಸಿ ಅವರ ನಿರೋಪವನ್ನು ತಕ್ಕೊಳ್ಳಿರಿ" ಎಂದು ಹೇಳಿದೊಡನೆ ಆತನು ಜನರ ಕಡೆಗೆ ಹೊರಳಿ ಕೈ ಮುಗಿದನು. ತೀರಿತು. ಅಷ್ಟರಲ್ಲಿ ಒಳಿಯಲ್ಲಿಯೇ ನಿಂತುಕೊಂಡಿದ್ದ ಒಬ್ಬ ಕೋಟೆಗಡಕನು ಬಂದು ಮುಖವು ಮುಚ್ಚುವ ಹಾಗೆ ಒಂದು ಟೋಪ್ಪಿಗೆಯನ್ನು ಹಾಕಿ ಕುತ್ತಿಗೆಗೆ ಫಾಸಿಯ ಹಗ್ಗವನ್ನು ತೊಡಕಿಸಿದನು. ಆಗಂತೂ ಜನರೆಲ್ಲರೂ ಹಾಹಾಕಾರವನ್ನೆಬ್ಬಿಸಿದರು. ಅಷ್ಟರಲ್ಲಿ "ಖಡ್‌ಡ್‌ಡ' ಎಂಬ ಶಬ್ದವಾಯಿತು. ರಘೋಪಂತನು ಫಾಸಿಯ ಖಂಬಕ್ಕೆ ನೇತಾಡಹತ್ತಿದನು. ಅದನ್ನು ಕಂಡು ಆತನ ಆಪ್ತರು ಮೂರ್ಛಿತರಾದರು. ನೆರೆದವರು ಅವರಿಗೆ ಅನೇಕ ಉಪಚಾರಗಳನ್ನು ಮಾಡಿ ಮೂರ್ಛೆ ತಿಳಿದೇಳುವಂತೆ ಪ್ರಯತ್ನಿಸಹತ್ತಿದರು. ಅವರು ಎಚ್ಚರಾಗುವದರೊಳಗಾಗಿ ಇತ್ತ ಉರ್ಲುಹಾಕುವ ಕಾರ್ಯವೆಲ್ಲ ಮುಗಿದಿತ್ತು. ರಘುನಾಥರಾಯನ ಆತ್ಮವು ಜಡದೇಹವನ್ನು ಬಿಟ್ಟು ಜಗದೀಶನಲ್ಲಿ ಐಕ್ಯವಾಗಲು ಹೊರಟು ಹೋಗಿತ್ತು. ಹರಣವು ಹಾರಿಹೋದ ಬಳಿಕ ಆತನದೇಹವು ಆತನ ಆಪ್ತ ಜನರಿಗೆ ಒಪ್ಪಿಸಲ್ಪಟ್ಟಿತು. ಪದ್ಧತಿಯಂತೆ ಶವದ ಸಂಸ್ಕಾರ ವಿಧಿಯೂ ಕರ್ಮವೂ ಮಗನಿಂದ ಮಾಡಲ್ಪಟ್ಟವು.

ರಘುನಾಥರಾಯನಿಗೆ ಫಾಶೀ ಕೊಟ್ಟ ದಿವಸ ಆ ಊರ ಜನರಿಗೆ ಅನ್ನವು ಸವಿ ಹತ್ತಲಿಲ್ಲ. ಎಲ್ಲರೂ ಉದಾಶೀನರಾಗಿದ್ದರು. ಮುಂದೆ ಎಷ್ಟೋ ದಿವಸಗಳವರೆಗೆ ಅವರು ಅವನ ಸದ್ಗುಣಗಳ ವರ್ಣನೆಯನ್ನು ಮಾಡುತ್ತಿದ್ದರು. ಆತನು ಉದಾರನೂ, ಚತುರನೂ, ದಾನಶೀಲನೂ, ಸ್ವಧರ್ಮನಿಷ್ಠನೂ ಹಾಗು ಸ್ವದೇಶಾಭಿಮಾನಿಯೂ ಆಗಿದ್ದನು. ನರಗುಂದ ಸಂಸ್ಥಾನವು ಅಳಿಯದೆ ಉಳಿದಿದ್ದರೆ ಈ ಗುಣಗಳು ಇನ್ನೂ ಹೆಚ್ಚಾಗಿ ಬೆಳಕಿಗೆ ಬರುತ್ತಿದ್ದವು. ಆತನು ತನ್ನ ಪ್ರಜರಿಗೂ, ಅರಸನಿಗೂ ಸಾರ್ವಭೌಮ ರಾಜನಿಗೂ ಬೇಕಾಗಿಕೊಂಡು ಕಾರ್ಯಭಾರದಿಂದ ಅವರನ್ನೆಲ್ಲರನ್ನು ಸಂತುಷ್ಟಗೊಳಿಸುತ್ತಿದ್ದನು. ಭಾಸ್ಕರರಾಯನೂ ರಘುನಾಥರಾಯನೂ ಬಾಲ್ಯದಿಂದಲೇ ಕೂಡಿ ಆಡಿ ಕೂಡಿ ಬೆಳೆದವರಾದುದರಿಂದ, ರಘುನಾಥರಾಯನ ಎಲ್ಲ ಗುಣಗಳು ಭಾಸ್ಕರರಾಯನಿಗೆ ಪೂರ್ಣವಾಗಿ ಗೊತ್ತಾದುದರಿಂದ ಆತನು ತನ್ನ ರಾಜ್ಯಭಾರವನ್ನು ಬಹುತರವಾಗಿ ರಘುನಾಥರಾಯನಿಗೆ ಬಿಟ್ಟು ಕೊಟ್ಟಿದ್ದನು. ಅಂಥ ರಘುನಾಥರಾಯನ ಮರಣದ ನಂತರ ಎಷ್ಟೋ ಜನರು ಔದಾಶೀನದಿಂದಲೇ ತಮ್ಮ ಸಂಸಾರವನ್ನು ಸಾಗಿಸಹತ್ತಿದರು.

ಭಾಸ್ಕರರಾಯ, ರಾಮರಾಯ ಹಾಗೂ ವಿಷ್ಣು ಈ ತ್ರಿವರ್ಗರನ್ನು ಶೋಧಿ

ಸುತ್ತ ಅನೇಕ ಜನರು ಪ್ರಚ್ಛನ್ನವೇಷದಿಂದ ಪಟ್ಟಣಗಳಲ್ಲಿಯೂ, ಹಳ್ಳಿಗಳಲ್ಲಿಯೂ ನಿರ್ಜನ ಪ್ರದೇಶದಲ್ಲಿಯೂ ಗುಡಿಗುಂಡಾರದಲ್ಲಿಯೂ ಅಲೆದಾಡುತ್ತಲಿದ್ದರೆಂದು ತೆನುಗೆ ಬೇರೆ ಹೇಳಬೇಕಾಗಿಲ್ಲ. ಅದರಂತೆ ತಮ್ಮ ಜೀವರಕ್ಷಣೆಗಾಗಿ ಭಾಸ್ಕರರಾಯನೂ ಅವನ ಉಳಿದ ಸಂಗಡಿಗರೂ ವೇಷಧಾರಿಗಳಾಗಿ ಮಾರ್ಗಕ್ರಮಿಸುತ್ತಿದ್ದರೆಂಬವನ್ನೂ ಮತ್ತೆ ಹೇಳಬೇಕಾಗಿಲ್ಲ. ಒಂದು ದಿವಸ ಭಾಸ್ಕರರಾಯನು ನಿರ್ಜನವಾದ ಅಡವಿಯಲ್ಲಿಯ ಒಂದು ದೇವಾಲಯದಲ್ಲಿ ಕುಳಿತುಕೊಂಡಿರಲು, ಅಲ್ಲಿಗೆ ನಾಲ್ಕಾರು ವೇಷಧಾರಿಗಳಾದ ಬ್ರಿಟಿಶ ಸಿಪಾಯಿಗಳು ಬಂದು ರಘುನಾಥರಾಯನೊಡನೆ ಹೇಗೆ ಸಂಭಾಷಣೆ ಮಾಡಿದರೋ ಹಾಗೆಯೇ ಭಾಸ್ಕರರಾಯನೊಂದಿಗೂ ಮಾತನಾಡಿದರು. ಚತುರನಾದ ಭಾಸ್ಕರರಾಯನು ಅವರ ಉದ್ದೇಶವನ್ನು ಗೊತ್ತು ಹಚ್ಚಿದನು. ಒಬ್ಬಿಬ್ಬರ ಮುಖಚರ್ಯೆಯೂ ಆತನಿಗೆ ಗೊತ್ತಾಯಿತು. ಆ ಸಿಪಾಯಿಗಳೂ ಭಾಸ್ಕರರಾಯನೊಡನೆ ಸಾಶಂಕ ರೀತಿಯಿಂದ ಮಾತಾಡಹತ್ತಿದರು. ಅದನ್ನು ಕಂಡೊಡನೆ ಶೂರನೂ, ಧೀರನೂ, ಆದ ಭಾಸ್ಕರರಾಯನ ತಲೆ ತಿರುಗಿತು. ಕ್ರೋಧಾವಿಷ್ಟನಾಗಿ ಆತನು ಅವರ ದುಷ್ಟ ಹೇತುವನ್ನು ಕಂಡುಹಿಡಿದು, ಭೀಮನು ಕೌರವರನ್ನು ತನ್ನ ಗದಾಘಾತದಿಂದ ನೆಲಕ್ಕುರುಳಿಸಿದಂತೆ, ಅವರನ್ನು ಮುತ್ತಿ ಒಬ್ಬೊಬ್ಬರನ್ನೇ ಕೆಡವಿ ಪ್ರಾಣಹೀರಿದನು.

ಬಳಿಕ ಭಾಸ್ಕರರಾಯನು "ಇನ್ನು ಇಲ್ಲಿದ್ದರೆ ನಾನಾತರದ ಗಂಡಾಂತರಗಳು ಬರುವವು. ಕಾರಣ ನಿಜಾಮನ ರಾಜ್ಯವನ್ನು ಸೇರುವದೇ ಉತ್ತಮ. ಅಲ್ಲಿ ಇಷ್ಟು ಭಯಬಡಬೇಕಾಗಿಲ್ಲ'ವೆಂದು ನಿರ್ಧರಿಸಿ ಆ ಕಡೆಗೆ ಹೊರಟನು. ಹಗಲು ಹಾದಿ ನಡೆಯುವಂತಿರಲಿಲ್ಲ. ಇವನ ಶೋಧಕ್ಕಾಗಿ ಜನರು ಜಾಲವನ್ನೇ ಹಾಕಿದ್ದರು. ಇವನು ಪ್ರವಾಸಮಾಡುವದು ಕತ್ತಲಲ್ಲಿ. ಹೀಗಾದುದರಿಂದ ನಾಲ್ಕಾರು ದಿವಸಗಳ ವರೆಗೆ ಅನ್ನದರ್ಶನವೇ ಆಗುತ್ತಿದ್ದಿಲ್ಲ. ಅವನು ಹಸಿವನ್ನು ವನದಲ್ಲಿಯ ಹಣ್ಣುಹಂಪಲಗಳಿಂದಲೇ ಹಿಂಗಿಸುತ್ತಿದ್ದನು. ಒಂದು ದಿವಸ ಒಂದು ಹಳ್ಳಿಯಲ್ಲಿ ರಾತ್ರಿ ಗೌಡನ ಮನೆಯಲ್ಲಿ ಮಲಗಿಕೊಂಡಾಗ ಯಾರೋ ಪುಣ್ಯಾತ್ಮರು ಆತನ ಪಾದರಕ್ಷೆಗಳನ್ನು ಕಳುವು ಮಾಡಿದರು. ಆಗ ಮಾತ್ರ ಭಾಸ್ಕರರಾಯನಿಗೆ ಬಹು ಕೆಡಕೆನಿಸಿತು. ಆತನ ಸರ್ವಸ್ವವೇ ಮುಳುಗಿಹೋಗಿದ್ದರೂ ಅನಿಸದಷ್ಟು ಅವನಿಗೆ ವ್ಯಥೆಯಾಯಿತು. ಆಗ ಆತನು ಮನೆಯ ಯಜಮಾನನ್ನು ಆ ವಿಷಯವಾಗಿ ವಿಚಾರಿಸಿದನು. ಆದರೆ ಶೋಧವಾಗಲಿಲ್ಲ ಹಾಗೆಯೇ ಆತನ ನಿರೋಪ ತೆಕ್ಕೊಂಡು ಬರಿಗಾಲಿನಿಂದಲೇ ಪ್ರಯಾಣ ಬೆಳೆಸಿದನು ಹೋಗುವಾಗ ದಾರಿಯಲ್ಲಿ ಆತನು ತನ್ನಲ್ಲಿ "ದೇವಾ ಹೀಗೆ ಕಳ್ಳನಂತೆ ಜೀವ ತೆಕ್ಕೊಂಡು ಓಡಿಹೋಗುವದು ಯಾರ ಸಲುವಾಗಿ? ಈ ಜಗತ್ತಿನಲ್ಲಿ

ನನ್ನ ಪ್ರೇಮದ ಜೀವಿಗಳಾರೂ ಜೀವಿಸಿಲ್ಲ. ಅವರೆಲ್ಲರೂ ನನ್ನ ಕೈಬಿಟ್ಟು ಹೋದ ಬಳಿಕ ನಾನು ಬದುಕಿದ್ದು ಫಲವೇನು? ಈ ನಿರ್ಜನವಾದ ಅಡವಿಯಲ್ಲಿ ಈಗಲೇ ನನ್ನ ಪ್ರಾಣವು ಹೋದರೆ ಒಳ್ಳೆಯದಾಗುವದು. ಅನೇಕ ಪಶು ಪಕ್ಷಿಗಳು ಈ ದೇಹ ಭಕ್ಷಣದಿಂದ ತಮ್ಮ ಕ್ಷುಧೆಯನ್ನು ಶಮನಮಾಡಿಕೊಂಡಾವು. ಸುತ್ತಲೂ ಸುತ್ತುಗಟ್ಟಿದ ವೈರಿಗಳು ನನ್ನನ್ನು ಹಿಡಿದುಕೊಂಡು ಹೋಗಿ ನನ್ನ ಪ್ರಾಣ ತೆಕ್ಕೊಳ್ಳದೆ ಬಿಡರು. ನಾನು ಹೀಗೆ ಮರಣ ಹೊಂದಬಾರದೆಂದು ಮನಸಾ ಬಯಸುವೆನು. ಈಶೇಚ್ಛೆ ಏನಿರುವದೋ ಯಾರಿಗೆ ಗೊತ್ತು ! ಸಾವಿರಾರು ಜನರನ್ನು ಪ್ರತಿನಿತ್ಯ ಸಮೀಚೀನವಾದ ಭೋಜನದಿಂದ ತೃಪ್ತಿಬಡಿಸುತ್ತಿದ್ದೆನೋ? ಅಂಥ ನಾನು ಒಂದು ಹಿಡಿ ಅನ್ನಕ್ಕೆ ಎರಡನೆಯವರ ಮುಖ ನೋಡುವ ಹೊತ್ತು ಬಂದಿದೆ. ಮನೆಯಲ್ಲಿ ರತ್ನಗಂಬಳಿಯ ಮೇಲೆ ಅಡ್ಡಾಡಬೇಕಾದರೆ ಉಣ್ಣೆಯ ಮೆತ್ತನ್ನ ಪಾಪೋಸುಗಳನ್ನು ಮೆಟ್ಟುತ್ತಿದ್ದ ನಾನು ಇಂದು ಕಲ್ಲು ಮುಳ್ಳುಗಳಿಂದ ಆವೃತವಾದ ಕಟ್ಟಡವಿಯಲ್ಲಿ ಕಾರ್ಗತ್ತಲೆಯಲ್ಲಿ ಬರಿಗಾಲಿಲೆ ನಡೆಯುವ ಅಲ್ಲಿ ಓಡುವ ಹೊತ್ತು ಬಂದಿದೆ. ತುಸು ಚಳಿ ಹತ್ತಿದರೆ ಉಣ್ಣೆಯ ಬೆಚ್ಚನ್ನ ವಸ್ತ್ರಗಳನ್ನೂ ಧರಿಸುತ್ತಿದ್ದನು. ಈಗಲಾದರೂ ಥಂಡಿಯಿಂದ ಗದಗುಟ್ಟಿ ನಡುಗು ಹುಟ್ಟಿದರೂ ಹೊದ್ದುಕೊಳ್ಳಲಿಕ್ಕೆ ಒಂದು ಹರಕು ವಸ್ತ್ರವೂ ಕೂಡ ಇಲ್ಲದಾಗಿದೆ. ಮೊದಲು ಸಿರಿವಂತಿಕೆಯನ್ನನುಭವಿಸಿದವನಿಗೆ ದಾರಿದ್ರ್ಯವು ಎಂದೂ ಬರಬಾರದು. ದೇವಾ, ಅಂಥ ಹೊತ್ತನ್ನು ಯಾರಿಗೂ ತರಬೇಡ. ನಿನ್ನಲ್ಲಿ ನನ್ನ ಬೇಡಿಕೆಯು ಇಷ್ಟೇ. ಈಗ ಎಲ್ಲಿಯಾದರೂ ತುಸು ಸಪ್ಪಳವಾದರೆ ತೀರಿತು. ವೈರಿಗಳು ಬಂದರೇನೋ ಎಂಬ ಸಂಶಯದಿಂದ ನನ್ನ ಹೃದಯವು ತಲ್ಲಣಿಸಿ ಹೋಗುವದು. ನನಗೆ ಈಗ ಇಷ್ಟು ಭಯ! ನನ್ನ ಮೊದಲಿನ ಸ್ಥಿತಿಗೂ ಈಗಿನ ಸ್ಥಿತಿಗೂ ಇಷ್ಟು ಮಹದಂತರವಾಗಿ ಹೋಗಿದೆ! ಆ ಇಬ್ಬರು (ಕೃಷ್ಣಾಜಿಪಂತ ಜೋಶಿ ಮತ್ತು ಬನ್ಯಾಬಾಪು) ದುಷ್ಟರು ಕೃತಘ್ನರಾಗಿ ನಮ್ಮ ರಹಸ್ಯವನ್ನು ಬ್ರಿಟಿಶರಿಗೆ ತಿಳಿಸಿದುದರಿಂದಲೇ, ನಮ್ಮ ಮೇಲೆ ಈ ದುರ್ಧರವಾದ ಪ್ರಸಂಗವು ಬಂದಿತು. ನಾವೆಲ್ಲರೂ ವನವಾಸಿಗಳಾಗಿ ಅಡ್ಡಾಡಿದರೂ ಅಡ್ಡಿಯಿಲ್ಲ, ದೇವಾ, ಅವರನ್ನಾದರೂ ಸೌಖ್ಯದಿಂದಿಡೆಂದರಾಯಿತು ” ಎಂದು ನಾನಾ ಬಗೆಯಿಂದ ವಿಚಾರ ಮಾಡುತ್ತ ಮಾರ್ಗಕ್ರಮಿಸುತ್ತಿರಲು, ಮುಳ್ಳುಗಳನೇಕವಾಗಿ ನಟ್ಟಿದ್ದರಿಂದಲೂ ಕಲ್ಲು ತುಳಿದು ತುಳಿದು ನೋವಾದುದರಿಂದಲೂ ಆತನಿಂದ ಮುಂದಕ್ಕೆ ಕಾಲುಗಳನ್ನಿಕ್ಕುವದಾಗಲೊಲ್ಲದು. ಪ್ರಖರವಾದ ಬಿಸಿಲಿನ ತಾಪದಿಂದ ಭೂಮಿಯು ಕಾದು ಹೋಗಿತ್ತು. ಕಾಲಿಗೆ ಗುಳ್ಳೆಗಳೇಳತೊಡಗಿದವು. ಸತೇಜವಾದ ಮುಖವು ನಿಸ್ತೇಜವಾಯಿತು. ಆಗ ಆತನು “ ಈಗ ಮಾತ್ರ ನನ್ನ ದುರ್ದೆಶೆಯು

ಹೆಚ್ಚಾಯಿತು. ಇದನ್ನು ನಾನು ತಾಳಲಾರೆನು. ದೇವಾ ಶೀಘ್ರ ಕಣ್ಣು ಮುಚ್ಚಿಬಿಡು '' ಎಂದು ಶೋಕಿಸಹತ್ತಿದನು. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಯಾದರೂ ಯಾರಾದರೂ ಅವನ ಹತ್ತರ ಇದ್ದರೇನು? ಇಲ್ಲ. ಇದರಿಂದ ಧೈರ್ಯ ಶಾಲಿಯಾಗಿದ್ದ ಭಾಸ್ಕರರಾಯನೂ ಕೂಡ ಎದೆಯೊಡೆದುಕೊಂಡನು.

ಒಂದರ ಹಿಂದೊಂದರಂತೆ ಅವಕಾಶವಿಲ್ಲದೆ ಸಂಕಟಗಳು ಬರಹತ್ತಿದವೆಂದರೆ, ಮೊದಲು ಮೊದಲು ಆ ಮನುಷ್ಯನು ತುಸು ಬೆದರಿದರೂ ಮುಂದೆ ಅವನೇ ಕಲ್ಲೆದೆಯುವನಾಗಿ ಬಂದಂಥ ಸಂಕಟಗಳಿಗೆ ಎದೆಗೊಟ್ಟು ಧೈರ್ಯದಿಂದ ಪಾರಾಗಹತ್ತುವನು. ಸಂಕಟಗಳನ್ನು ಸಹಿಸಿಕೊಳ್ಳುವ ಸಾಮರ್ಥ್ಯವು ಆತನಲ್ಲಿ ಸಹಜವಾಗಿ ತಾನಾಗಿಯೇ ಉತ್ಪನ್ನವಾಗುವದು. ಇದು ಸಹಜವಾದುದು. ಅದರಂತೆ ಭಾಸ್ಕರರಾಯನು ಮೊದಲು ಮೊದಲು ತನ್ನ ಪೂರ್ವದ ವೈಭವವನ್ನು ನೆನೆಸಿಕೊಂಡು ಶೋಕ ಮಾಡುತ್ತಿದ್ದರೂ, ಬರಬರುತ್ತ ಎಲ್ಲವನ್ನೂ ಬಿಟ್ಟು ಗಟ್ಟಿ ಮನದಿಂದ ಬಂದ ಸಂಕಟಗಳಿಗೆ ಎದೆಗೊಟ್ಟು ಪಾರಾಗಹತ್ತಿದನು. ಒಂಟಿಗನಾಗಿ ಅಡವಿಯಲ್ಲಿ ಅಲೆದಾಡಲು ಸಿದ್ಧನಾದನು. ಹೀಗೆ ಅರಣ್ಯದಲ್ಲಿ ತಿರುಗಾಡುತ್ತಿರುವಾಗ ಆತನಿಗೆ ಮೊದಲಿನ ತನ್ನ ಅಧಿಕಾರಿಗಳಲ್ಲಿಯ ಮೂರು ನಾಲ್ಕು ಜನರು ಭೆಟ್ಟಿಯಾದರು. ಅವರು ಅವನನ್ನು ಹಿಂಬಾಲಿಸಿದರು. ಎಂಥ ಕಠಿಣ ಪ್ರಸಂಗ ಬಂದರೂ ಒಬ್ಬರನ್ನೊಬ್ಬರು ಅಗಲಬಾರದೆಂದು ನಿಶ್ಚಯ ಮಾಡಿಕೊಂಡರು. ಒಂಟಿಗರಾಗಿ ಅಲೆದಾಡುವದಕ್ಕಿಂತ ಹೀಗೆ ಕೂಡಿಕೊಂಡಿರುವದೇ ಅವರಿಗೆಲ್ಲ ನೆಟ್ಟಗೆಂದೆನಿಸಿತು. ಬಳಿಕ ಅವರು ಅಡವಿಯಲ್ಲಿ ಅಲೆದಾಡುವದನ್ನು ಬಿಟ್ಟು ಊರಿಂದೂರಿಗೆ ಅಡ್ಡಾಡಹತ್ತಿದರು. ಹೀಗೆ ಮಾಡಿದುದೇ ಅವರು ಶೀಘ್ರವಾಗಿ ಸಿಗುವದಕ್ಕೆ ಕಾರಣವಾಯಿತು.

ಸರ ಫ್ರಾಂಕ ಸೂಟರನೂ ಅವನ ಕೈಕೆಳಗಿನ ೨೦೦ ಜನರೂ ಅನೇಕ ವೇಷಗಳನ್ನು ಧರಿಸಿಕೊಂಡು ಭಾಸ್ಕರರಾಯನ ಶೋಧಕ್ಕಾಗಿ ಊರೂರು ತಿರುಗುತ್ತಿದ್ದರೆಂಬದನ್ನು ಈ ಮೊದಲೇ ಹೇಳಿದೆ. ಅವರ ಈ ಉದ್ಯೋಗವು ಇನ್ನೂ ಒಂದೇ ಸವನೇ ಸಾಗಿತ್ತು. ಬಂಡಾಯಕ್ಕೆ ಕಾರಣರಾದವರು ಕೈಗೆ ಸಿಕ್ಕ ಸಿಕ್ಕಂತೆ ಅವರನ್ನು ಬೆಳಗಾವಿಗಾಗಲೀ, ಸಮೀಪದಲ್ಲಿದ್ದ ಮತ್ತಾವ ಬ್ರಿಟಿಶ ಠಾಣ್ಯಕ್ಕಾಗಲೀ ಕಳಿಸುವ ಕಾರ್ಯವೂ ಒತ್ತರದಿಂದ ನಡೆದಿತ್ತು.

ಒಂದು ದಿವಸ ಭಾಸ್ಕರರಾಯನೂ ಅವನ ಸಂಗಡಿಗರೂ ಬಹು ದೊಡ್ಡ ಪ್ರಯಾಣ ಮಾಡಿ ಒಂದು ಹಳ್ಳಿಯಲ್ಲಿ ಹೊಕ್ಕು ಮಾರುತಿಯ ದೇವಾಲಯದಲ್ಲಿ ವಸತಿ ಮಾಡಿದರು. ಕಳೆದ ಮೂರು ನಾಲ್ಕು ದಿವಸಗಳಿಂದ ಅನ್ನವಿಲ್ಲದ್ದರಿಂದಲೂ ದಾರಿಯ ಪ್ರಯಾಸದಿಂದಲೂ ತೀರ ಹೈರಾಣಾಗಿದ್ದನು. ಅವರಿಗೆ ಆಗುತ್ತಿರುವ ತಾಪವು ದೇವರಿಗೆ ಕಡಿಮೆಯಾಗಿ ತೋರಿತೋ ಏನೋ!

ಯಾಕಂದರೆ ಅಂದು ಭಾಸ್ಕರರಾಯನಿಗೆ ಒಳ್ಳೇ ಜ್ವರ ಬಂದು ಬಿಟ್ಟಿವು. ಅವನು ಒಂದು ಹರಕು ಧೋತರದ ತುಂಡಿನ ಮೇಲೆ ಎಚ್ಚರದಪ್ಪಿ ಮಲಗಿಕೊಂಡನು ಪಾತಃಕರೇ, ರೇಶಿಮೆಯ ಮೃದುವಾದ ಸುಪ್ಪತ್ತಿಗೆಯ ಮೇಲೆ ಒರುಗುತ್ತಿದ್ದ ಭಾಸ್ಕರರಾಯನು ತಿರುಕನಂತೆ ಕ್ಷುಧಾಪೀಡಿತನೂ ಜ್ವರಪೀಡಿತನೂ ಆಗಿ ಅನಾಥನಂತೆ ಹಾಳು ದೇಗುಲದಲ್ಲಿ ಹರಕು ಧೋತರದ ತುಂಡನ್ನು ಹಾಸಿಕೊಂಡು ಮಲಗುವ ಪ್ರಸಂಗ ಬಂದಿತು! ನೋಡಿರಿ ಕಾಲವು ಹೇಗಿದೆ!

ಸಂಗಡಿಗರಲ್ಲಿ ಒಬ್ಬನು "ಈ ಸ್ಥಳವು ಬೆಚ್ಚಗಿದೆ. ಯಜಮಾನರು ಮಲಗಿರುವರು. ಆದದರಿಂದ ಇವರನ್ನು ಇಲ್ಲಿಯೇ ಬಿಟ್ಟು ಅನ್ನಕ್ಕಾಗಿ ಊರೊಳಗೆ ಅಡ್ಡಾಡಿ ಬರುವಾ" ಎಂದನು. ಅದಕ್ಕೆ ಮತ್ತೊಬ್ಬನು "ಹುಚ್ಚಾ ಇಂಥ ಅಪರಾತ್ರಿಯಲ್ಲಿ ಅನ್ನವನ್ನಾರು ಹಾಕುವರು. ಅಷ್ಟು ಪುಣ್ಯವಂತರು ಯಾರಿರುವರು" ಎಂದು ಮಾತಾಡಿದನು ಆಗ ಮೊದಲನೆಯವನು 'ಒಬ್ಬರು ಮಹಾರಾಜರ ಬಳಿಯಲ್ಲಿರ್ರಿ. ಒಬ್ಬರು ನನ್ನ ಸಂಗಡ ಬನ್ನಿರಿ ಈ ಊರಲ್ಲಿ ಒಂದಾದರೂ ಬ್ರಾಹ್ಮಣರ ಮನೆಯಿದ್ದರೆ ಸಾಕು. ನಾನು ಹೇಗಾದರೂ ಮಾಡಿ ಅನ್ನವನ್ನು ದೊರಕಿಸುವೆನು' ಎಂದು ಮಾತಾಡಿದನು. ಕೂಡಲೆ ಒಬ್ಬನು ಜ್ವರದ ರಭಸದಿಂದ ಬಡಬಡಿಸುತ್ತ ಮಲಗಿದ್ದ ಭಾಸ್ಕರರಾಯನ ಬಳಿಯಲ್ಲಿ ಕುಳಿತುಕೊಂಡನು. ಮತ್ತೊಬ್ಬನು ಮೊದಲು ಮಾತನಾಡಿದವನ ಸಂಗಡ ಊರಲ್ಲಿ ಹೊರಟನು.

ಜ್ವರಪೀಡಿತನಾದ ಭಾಸ್ಕರರಾಯನು ತಾಪದಿಂದ ಹೊರಳಾಡುತ್ತಿದದ್ದನ್ನು ನೋಡಿ, ಅಲ್ಲಿಯೇ ಕುಳಿತ ಆತನ ಸೇವಕನು ತನ್ನಷ್ಟಕ್ಕೆ ತಾನೆ 'ವೆಂಕಟಪತೇ, ಇದೇ ಏನು ನಿನ್ನ ನ್ಯಾಯವು. ಇಲ್ಲಿಯ ವರೆಗೆ ಯಾವನು ಸಾವಿರಾರು ಜನರ ರಕ್ಷಣೆ ಮಾಡಿದನೋ, ಸ್ವಧರ್ಮ ರಕ್ಷಣೆಯ ಕಾರ್ಯದಲ್ಲಿ ಯಾವನು ಒಳ್ಳೇ ದಕ್ಷನಾಗಿರುತ್ತಿದ್ದನೋ, ಸ್ವದೇಶ ಹಿತಕ್ಕಾಗಿ ಯಾವನು ಬಲಿಷ್ಠವಾದ ವೈರಿಗೆ ಎದುರಾಗಿ ನಿಂತನೋ, ಅಂಥ ಮನುಷ್ಯನ ದೇಹದಲ್ಲಿ ಈಗ ಶಾಂತತೆಯಿಲ್ಲವಲ್ಲ. ಅಯ್ಯೋ, ನೀನು ವಿಶ್ವ ಚಕ್ಷು, ನ್ಯಾಯಿ, ಕರುಣಾಸಾಗರ, ಹಾಗೂ ಭಕ್ತಾಭಿಮಾನಿಯಲ್ಲವೇ? ಇಂತಹ ನೀನು ನಮ್ಮ ಯಜಮಾನನ ಸ್ಥಿತಿಯನ್ನು ಹೀಗೆ ಮಾಡಿದೆ. ಈತನು ಸದಾಚಾರಿಯೂ ಭೂತದಯಾಪರನೂ ಇರುವನೆಂಬುದು ನಮಗೆ ಪೂರ್ಣವಾಗಿ ಗೊತ್ತಿದೆ. ಯಾವನು ತನ್ನ ಕಾಲಕಿರ್ದಿಯಲ್ಲಿ ಲಕ್ಷಾವಧಿ ಜನರನ್ನು ಮೃಷ್ಟಾನ್ನದಿಂದ ತೃಪ್ತಿಬಡಿಸಿದನೋ ಅವನಿಗೆ ಅಂತಹ ಉದಾರಿಯ ಮಹಾರಾಜನಿಗೆ ಅನ್ನಕ್ಕಾದರೂ ಕೊರತೆಯಾಗಲಾರದೆಂದು ನನಗನಿಸುತ್ತದೆ.' ಹೀಗೆ ಆತನು ವಿಚಾರ ಮಾಡುತ್ತ ಕುಳಿತಿರುವಷ್ಟರಲ್ಲಿ ಊರೊಳಗೆ ಹೋದ ಆ ಮೂವರು ಉಂಡು ತಿರುಗಿ ಬಂದರು. ಬಳಿಕ

ಬಂದವರೊಳಗಿನವನೊಬ್ಬನು ಭಾಸ್ಕರರಾಯನ ಬಳಿ ಕುಳಿತುಕೊಂಡವನನ್ನು ಕರೆದುಕೊಂಡು ಹೋಗಿ ಆತನಿಗೆ ಊಟ ಮಾಡಿಸಿ ಇಬ್ಬರೂ ತಿರುಗಿ ಬರುವಾಗ ಭಾಸ್ಕರರಾಯನಿಗಾಗಿ ಒಂದು ಎಲೆ ಬಡಿಸಿಕೊಂಡು ಬಂದರು. ಮುಂದೆ ಕೆಲ ವೇಳೆಯಲ್ಲಿಯೇ ಭಾಸ್ಕರರಾಯನ ಮೈಯಲ್ಲಿ ತುಂಬಿದ ಜ್ವರ ಕ್ರಮೇಣ ಕಡಿಮೆಯಾಗಹತ್ತಿತು. ಆತನಿಗೆ ಎಚ್ಚರಿಕೆಯಾಗತೊಡಗಿತು. ಆತನು "ಗಂಟಲೊಣಗಿದೆ ನೀರು ಕೊಡಿರಿ. ನೀರು" ಎಂದು ಮಾತಿನಾಡಿದನು. ಆಗ ಸಂಗಡಿಗರು ಒಳ್ಳೆ ಆಗ್ರಹದಿಂದ ಆತನಿಗೆ ನಾಲ್ಕು ತುತ್ತು ಅನ್ನವನ್ನುಣ್ಣಿಸಿ ಬಳಿಕ ನೀರು ಕುಡಿಸಿದರು. ಜ್ವರವು ಕಡಿಮೆಯಾದುದರಿಂದಲೂ ಅನ್ನ ನೀರಿನಿಂದ ಜಠರಾಗ್ನಿಯು ಶಾಂತವಾದುದರಿಂದಲೂ ಭಾಸ್ಕರರಾಯನು ಎದ್ದು ಕುಳಿತುಕೊಂಡನು.

ಅಷ್ಟರಲ್ಲಿ ಹತ್ತೆಂಟು ಜನ ಗೋಸಾವಿಗಳು, ಗಾಡನ ಹೇಳಿಕೆಯಂತೆ ಇವರು ಕುಳಿತ ದೇವಾಲಯದಲ್ಲಿ ವಸತಿಗಾಗಿ ಬಂದರು. ಅವರು ಬಂದು ನೋಡುತ್ತಾರೆ. ಗುಡಿಯಲ್ಲಿ ನಾಲ್ಕಾರು ಜನ ಬ್ರಾಹ್ಮಣರು ಇಳಿದುಕೊಂಡಿದ್ದಾರೆ. ವ್ಯಾಧಿಗ್ರಸ್ತನಾದ ಒಬ್ಬನು ಮಧ್ಯದಲ್ಲಿ ಕುಳಿತಿದ್ದಾನೆ. ಇದನ್ನು ಕಂಡು ಆ ಗೋಸಾವಿಗಳಲ್ಲೊಬ್ಬನು "ಚಲೋಜಿ, ಬಸ್ತರೆ ಲಗಾವೊ ರಾತಕೇ ರಾತ! ಕಲ್ ಫಜ್ಜರಕು ದೇಖೇಂಗೇ ಬಸ್ತಿಮೆ ಘೂಮುಕೆ ಪೇರೀ ಕರೆಂಗೆ ಔರ ಚಲೆ ಜಾಯಿಗೆ" ಎಂದು ಮಾತಾಡಿದೊಡನೆ ಎಲ್ಲರೂ ತಮ್ಮ ತಮ್ಮ ಗಂಟುಗವಡಿಗಳನ್ನು ಗುಡಿಯೊಳಗೆ ಇಳಿಸಿದರು. ಅಲ್ಲಿ ಕತ್ತಲೆಯು ವಿಶೇಷವಿದ್ದುದರಿಂದ ಒಬ್ಬ ಗೋಸಾವಿಯು ತನ್ನ ಗಂಟಿನೊಳಗಿಂದ ಒಂದು ಮೇಣಬತ್ತಿಯನ್ನು ತೆಗೆದು ಹೊತ್ತಿಸಿ ಬೆಳಕು ಮಾಡಿದನು. ತಮ್ಮ ಗುರುವಾದ ಓರ್ವ ಮಹಂತನಿಗೆ ಒಂದು ಆಸನವನ್ನು ಹಾಕಿಕೊಟ್ಟರು. ಆತನು ಬಂದು ಕುಳಿತೊಡನೆ ಒಬ್ಬ ಗೋಸಾವಿಯು ಪಾತ್ರೆಯಲ್ಲಿ ನೀರು ತುಂಬಿ ಆತನ ಬಳಿಯಲ್ಲಿರಿಸಿದನು. ಎಲ್ಲರೂ ಗಂಟು ಬಿಚ್ಚಿ ಫಲಾಹಾರ ಮಾಡಿ ನೀರು ಕುಡಿದು ಶಾಂತರಾದ ಬಳಿಕ 'ದೇವಾಲಯದಲ್ಲಿಳಿದುಕೊಂಡ ಬ್ರಾಹ್ಮಣರ ವಿಚಾರಣೆಯನ್ನು ಮಾಡಬೇಕೆಂದು' ಅವರ ಮನದಲ್ಲಿ ಬಂದಿತು. ಆಗ ಒಬ್ಬ ಗೋಸಾವಿಯು, ಬ್ರಾಹ್ಮಣರಲ್ಲಿ ಇನ್ನೂ ಎಚ್ಚರಾಗಿ ಕುಳಿತುಕೊಂಡವನನ್ನು ಕುರಿತು "ಕ್ಯಾಜಿ ಬಮ್ಮನ ದೇವತಾ, ಆಪ ಕಿತ್ತೆ ಮೂರತಹೋ ಔರ ಕಾಂಸೆ ಆತೆಹೋ? ಎಂದು ಪ್ರಶ್ನೆ ಮಾಡಿದೊಡನೆ ಆ ಬ್ರಾಹ್ಮಣನು "ಹಾಮ್ ಪಾಂಚ ಮೂರ್ತಿ ಹೈ. ಔರ, ಐಸೆಯೀ ಪೇಟಕಿ ಪೀಛೆ ಲಗೆಹುವೆ ಘೂಮತೆ ಹೈ. ಕ್ಯಾ ಕರನಾ? ಇಸ ಬಿಪತಮೆ ಹಮಾರಾ ಏಕ ಸಾಥೀದಾರ ಬುಖಾರಕೆ ಮಾರೆ ಬಹೋತ ಬೇಮಾರ ಹುವಾಹೈ. ಔರ ಉಸ್ಕೆ ವಾಸ್ತೆ ಚಾರೋ ಆದಮಿ

ರಂಜಮೆ ಪಡೆಹೈ.' ಎಂದು ನುಡಿದೊಡನೆ ಮತ್ತೊಬ್ಬ ಗೋಸಾವಿಯು "ಓ. ಕುಛ್ ಡರನೇಕಾ ಕಾಮ ನಹಿ. ಓ ಭಗವಾನ್ ಸಬಕೆ ಸಿರ ಪರ ಹೈ. ಔರ ಬಂದೇಕಿ ಬಂದಗಿ ಹಮೇಶ ಸುನತಾ ಹೈ' ಎಂದು ಮಾತಾಡುವಷ್ಟರಲ್ಲಿ ಮತ್ತೊಬ್ಬನು ಚಿಲಿಮೆಯನ್ನು ಸಿದ್ಧಮಾಡಿದನು. ಕೂಡಲೆ ನಾಲ್ಕಾರು ಜನ ಗೋಸಾವಿಗಳು ಮಂಡಲಾಕೃತಿಯಾಗಿ ಕುಳಿತುಕೊಂಡು ಅದನ್ನು ಸೇದಹತ್ತಿದರು. ಇತ್ತ ಎಚ್ಚರಿದ್ದ ಬ್ರಾಹ್ಮಣನೂ ಅಡ್ಡಾದನು. ಕೂಡಲೆ ಆತನಿಗೆ ಗಾಢವಾದ ನಿದ್ರೆ ಹತ್ತಿತು.

ಧೂಮ್ರಪಾನ ಮಾಡುತ್ತಲಿದ್ದ ಗೋಸಾವಿಗಳಲ್ಲೊಬ್ಬನು 'ಕ್ಯಾ ಕರನಾ? ಕುಛ ತಪಾಸ ಲಗತಾ ನಹಿ. ಆಜ ಆಠದಿನ ಯಹಾಸೆ ಪಂಹಾ ಔರ ಪಂಹಾಸೆ ಯಂಹಾ ಘೂಮತೆ ಹೈ. ಲೇಕಿನ್ ಏಕ ಬೀ ಗುನೆಹಗಾರ ನಜರ ಆತಾ ನಹಿ' ಎಂದು ಮಾತಾಡಿದನು.

'ಮಿಳೆಗಾ ಜೀ! ಸೋಚ ಕ್ಯಾ ಕರತೆಹೋ! ಆಜ ನಹೀ ಕಲ, ನಹಿ ಪರಸೂ ಗುನಾಹ ಕರನೇವಾಲಾ ಕಬೀ ಛುಪ ರಹನೇಕಾ ನಹಿ" ಎಂದು ಮಹಂತನು ಅವರಿಗೆ ಧೈರ್ಯಗೊಟ್ಟು ಮತ್ತೆ "ಸುನೋ! ಯಿ ಜೋ ಬಮ್ಮನ ಪಡರಹೆ ಹೈ, ಇನ್‌ಕೆವಾಸ್ತೆ ಮೇರಾದಿಲ ಬಹೋತ ಅಂದೇಸಾ ಲೇತಾಹೈ ತುಮ್ ಸಬ್ ಖಾನೆ ಪೀನೆಮೆ ಮಷಗುಲ ಥೆ ಔರ ಜೋ ಆದಮೀ ಬೀಮಾರ ಪಡಾಹೈ, ಉಸಕೆ ಖಾನೆಕೆ ಬಾಬದಮೆ ಯಹ ಬಮನೋಮೆಂಸೆ ದೋ ಆದಮಿ ಬಾತ ಕರತೆಥೆ; ತಬ ಬೀಮಾರ ಪಡನೆವಾಲೆಕೂ 'ಸರಕಾರ' ಕಾ ಕಿತಾಬ ದೇಕೆ ಬಾತ ಕರತೆಥೆ. ಮೈ ಆಪನೆ ಕಾನಸೆ ಸುನಾಹೈ; ಏಕ ಬಮ್ಮನ ದುಸರೇಕೂ ಬೋಲತಾಥಾ "ಮಹಾರಾಜರಂತೂ ಜ್ವರ ಪೀಡಿತರಾಗಿ ಬಡಬಡಿಸುತ್ತದ್ದಾರೆ. ಬಹಳ ಹೈರಾಣಾಗಿದ್ದಾರೆ. ಇವರಿಗಾಗಿ ಬಿಸಿನೀರು ತಂದಿದ್ದರೆ ಒಳ್ಳೆಯದಾಗುತ್ತಿತ್ತು' ಯಹ ಬಾತ ಸುನಕರ ದೂಸರಾ ಆದಮೀ ಬೋಲಾ' ನೀನು ಹುಚ್ಚನು. ಬಿಸಿನೀರು ಹೇಗೆ ದೊರಕಬೇಕು? ಆ ಹೆಣ್ಣುಮಗಳು ನೀರು ಸೇದಿ ಕೊಟ್ಟದ್ದೇ ದೊಡ್ಡ ಉಪಕಾರ. ಮಹಾರಾಜರ ಚಿಂತೆ ನಮಗೆ, ಅವರ ಮಮತೆಯೂ ನಮಗೆ! ಅದು ಜನರಿಗೇನು? ಒಂದು ವೇಳೆ ನಿಜಸ್ಥಿತಿಯು ಗೊತ್ತಾದರೂ ಕಠಿಣ. ಜಗತ್ತು ಬಹು ಲೋಭಿಯಾದುದು' ಯಹ ಬಾತ ವೋ ಲೋಕ ಬಹೋತ ಆಸ್ತೆ ಔರ ಸಮಾಲಕರ ಕರತೆಥೆ, ಔರ ಉಸವಖ್ತ ಮೈನೆ ಆಪನೆ ಮೂಹಪರ ಯಹ ದುಪ್ಪಟ್ಟಾ ಓಢಕರ ಸೋನೆಕಾ ಢೋಂಗ ಕಿಯಾಥಾ. (ಮತ್ತೋರ್ವನ ಕಡೆಗೆ ನೋಡಿ) ಕ್ಯಾಂ ಜಮಾದಾರ ತುಮ್ಹಾರೆ ಮನಮೆ ಇಸ ಗುಸ್ತಗು ಅಂದೇಸಾ ಪೈದಾ ಕರತಿ ಹೈ ನಹಿ? ಕಹೋ ಔರ,

ಕಲ್ ಬಡೇ ಫಜ್ಜರಕು ಯಹ ಬನುನೋಕಾ ತಪಾಸಕರೋ ' ಎಂದು ಹೇಳಿ ದನು.

" ಅಲಬತ, ಜರೂರ, ಅಂದೇಸಾ ಲೇನೆ ಲಾಯುಕರೇ ವಹ ಗುಫ್ತಗೂ ಹೈ. ಕಲ್ ಫಜ್ಜರ ಉನ್‌ಕಾ ತಪಾಸ ಕರನಾ ಜರೂರ ಹೈ. ಮತ್ತು ' ಅಲ್ಲ ಹಕೆ ಪನಾಹಸೆ ಜೋ ಇನ್ ಲೋಕೋಮೆ ವಹ ದುಷ್ಮನ್ ಮಿಲೆಗಾತೋ ಫೇರ ಛಟಿಕನೇಕಾ ಕಾಮು ಖಲಾಸ ಹುವಾ. ಐಸಾ ಮೇರಾ ದಿಲ ಕಹತಾಹೈ. ' ಎಂದು ಜಮಾದಾರನು ಉತ್ತರವಿತ್ತನು.

ಅದಕ್ಕೆ ಮಹಂತನು ಮತ್ತೆ " ಬಹೋತ ಅಚ್ಛಾ ಭಾಯಿ ತುಮ್ಹಾರೆ ದಿಲ್‌ಕೆ ಮುವಾಫಿಕ ವಹ ದುಷ್ಮನ್ ಭಾಸ್ಕರರಾವ್ ಜೋ ಕಲ್ ಮಿಲೇಗಾ. ತೋ, ಫಿರನೇಕಾ ಕಾಮು ಮೋಕೂಫ ಕರೇಂಗೆ, ಅಬ ರಾತ ಬಹೋತ ಹೋ ರಹೀಹೈ. ದೋ ಜವಾನ ಪೆಹರೆ ಪರ ರಖಕೆ ಸೋ ಜಾವ. ಫಜರ ಜಲದಿ ಉಠಾನಾ ಚಾಹಿಯೆ ' ಎಂದು ನುಡಿದು, ಆತನು ಮಲಗಿದೊಡನೆ ಆತನ ಆಜ್ಞೆ ಯಂತೆ ಜಮಾದಾರನು ಇಬ್ಬರು ಸಿಪಾಯರಿಗೆ ಪಹರೆ ಮಾಡಲು ಹೇಳಿ ಉಳಿ ದವರಿಗೂ ತೀವ್ರ ಮಲಗಿಕೊಳ್ಳಲು ಅಜ್ಞಾಪಿದ ಕೂಡಲೆ ಎಲ್ಲರೂ ಮಲಗಿ ನಿದ್ರೆ ಹೋದರು.

ಅಂದು ಭಾಸ್ಕರರಾಯನಿಗೆ ಜ್ವರ ಬಂದವರಿಂದ ಮೊದಲಿಗೆ ತುಸು ಜಂಪು ಹತ್ತಿತ್ತು. ಆದರೆ ಮಧ್ಯದಲ್ಲಿಯೇ ನೀರಡಿಕೆಯಾದುದರಿಂದ ಎಚ್ಚರಿಕೆಯಾ ಯಿತು. ಸಂಗಡಿಗರು ತುಸು ಅನ್ನವನ್ನುಣಿಸಿ ನೀರು ಕುಡಿಸಲು ತುಸು ಸಮಾ ಧಾನವಾಗಿ ಕೆಲಕಾಲ ಎಚ್ಚರಾಗಿಯೇ ಇದ್ದನು. ಜ್ವರದ ಮಬ್ಬು ಇನ್ನೂ ವಿಶೇಷವಾಗಿದ್ದವರಿಂದ ಮತ್ತೆ ನಿದ್ರೆ ಹೋದನು. ರಾತ್ರಿ ಸುಮಾರು ಮೂರು ಘಂಟೆಗೆ ಜಿವರು ಬಿಟ್ಟದ್ದರಿಂದ ಆತನು ಪೂರ್ಣವಾಗಿ ಎಚ್ಚತ್ತನು. ಮತ್ತು ಬಳಿಯಲ್ಲಿಯೇ ಮಲಗಿಕೊಂಡಿದ್ದ ಮನುಷ್ಯನನ್ನು ಎಬ್ಬಿಸತೊಡಗಿದನು, ಆತನು ಒಳ್ಳೇ ನಿದ್ರೆಯಲ್ಲಿದ್ದವರಿಂದ ಮಲಗಿಕೊಂಡೇ ಮುಖದ ಮೇಲಿನ ಹೊದಿ ಕೆಯನ್ನು ತುಸು ತೆಗೆದು " ಸರಕಾರ, ಇನ್ನೂ ರಾತ್ರಿ ಬಹಳವಿದ್ದಂತೆ ತೋರು ವದು. ಕಾರಣ ತಾವು ಇಂತಹ ತಂಪಿನಲ್ಲಿ ಎದ್ದು ಕೂಡ್ರಬೇಡಿರಿ ' ಎಂದು ನುಡಿದನು.

ಸಂಗಡಿಗನು ಹೀಗೆ ಹೇಳಿದರೂ ಕೂಡ ಶೌಚವು ಒತ್ತರಿಸಿ ಬರುವ ಲಕ್ಷಣ ಕಂಡದ್ದರಿಂದ ಅವನು ಎದ್ದನು. ಅದೇ ಎಚ್ಚರಾಗಿದ್ದ ಆ ಮಹಂತನು " ಬಮ್ಮನ ದೇವತಾ, ಕಂಹಾ ಜಾತೆ ಹೋ ? ರಾತ ಬಹೋತ ಹೈ ! ' ಎಂದು ನುಡಿಯುತ್ತ ಆತನ ಮುಂದೆ ಬಂದು ನಿಂತನು ಆಗ ' ಅಪಕೋನ ಹೈ

ಭಾಯಿ?' ಎಂದು ಭಾಸ್ಕರರಾಯನು ಅವನನ್ನು ಕೇಳಿದೊಡನೆ ಅವನು ''ಹಮ್ ಗುಸಾಯೀ ಹೈ' ಎಂದು ಮಹಂತನು ನುಡಿದನು. ಆಗ ಭಾಸ್ಕರರಾಯನು "ಮಹಾರಾಜ ಆಜ ಮೈ ಬುಖಾರಕೆ ಮಾರೆ ಬಹೋತ ಬೇಮಾರ ಹುವಾ ಹೂ. ತೋಬಿ ಇಸ್‌ವಖ್ತ ಥೋಡಾ ಫಿರಕರ್ ಆನೇಕಾ ಮನಮೇ ಹೈ. ಆಪ ಸಾಧೂ ಹೆಜೇ, ತೋ ಮೆಹರಬಾನೀ ಕರಕೆ, ಮುಜೆ ಪಾನೀಕಾ ಠಿಕಾನಾ ಕಹೊ. ಚಾಂದಕಾ ಉಜಾಲಾ ಹೈ. ಝುಟ ಜಾಕೆ ಆಏಂಗೆ ಕ್ಯಂ! ಜಾನತೋ ಹೂ ಪಾನೀ ಕಹಾ ಹೈಸೊ ಎಂದು ಮತ್ತೆ ಕೇಳಿದನು.

ಕೂಡಲೆ ವೇಷಧಾರಿಯಾದ ಗೋಸಾವಿಯು ಗುಡಿಯಿಂದ ಹೊರಬಿದ್ದು ಭಾಸ್ಕರರಾಯನಿಗೆ "ಆವ್ ಹಮಾರೆ ಸಾಥ. ಹಮ್, ಆಪಕೊ ಪಾನೀಕಾ ಝುರಾ ಹೈ ಸೋ ಬತಾತೆ ಹೈ. ಲೇಕಿನ್ ಕುಚ ಬರ್ತನ, ಲೋಟಾ ತುಂಬಾ, ಜೋ ಹೋಗಾ ಸೋ ಸಾಥ ಲೇಕೆ ಚಲೊ' ಹೇಳಿದೊಡನೆ ಭಾಸ್ಕರರಾಯನು ಸಂಗಡಿಗನೊಬ್ಬನ ತಂಬಿಗೆ ತೆಗೆದುಕೊಂಡು ಗೋಸಾವಿಯನ್ನು ಹಿಂಬಾಲಿಸಿ ನಡೆದನು. ಮತ್ತು ಬಹಿರ್ದಿಶೆಗೆ ಹೋಗಿ ಬಂದು ಮುಖಮಾರ್ಜನಾದಿಗಳನ್ನು ಪ್ರಶಸ್ತವಾಗಿ ತೀರಿಸಿಕೊಂಡು ಅವನೊಡನೆ ಮರಳಿ ದೇವಾಲಯಕ್ಕೆ ಬಂದನು. ಬಳಿಕ ಗೋಸಾವಿಯು 'ಅಬ ಸೋಜಾವ' ಎಂದು ಹೇಳಿದನು. ಆದರೆ ಭಾಸ್ಕರ ರಾಯನಿಗೆ ಮಲಗಿಕೊಳ್ಳಲು ಮನಸ್ಸಿದ್ದಿಲ್ಲ. ಬೆಳಗೂ ಸಮೀಪಿಸಿತ್ತು. ಕಾರಣ ಅವನು ಮಲಗಿಕೊಳ್ಳದೆ ಉದಯರಾಗಗಳನ್ನು ಹಾಡುತ್ತ ಕುಳಿತುಕೊಂಡನು. ಗೋಸಾವಿಯು ಮುಖಮಾರ್ಜನೆಗಳನ್ನು ತೀರಿಸಿಕೊಂಡು ಬಂದು ಆತನು ಹಾಸಿಗೆಯ ಮೇಲೆ ಅಡ್ಡಾಗಿದ್ದನು. ಆದರೆ ಭಾಸ್ಕರರಾಯನು ಮಲಗದೆ ಉದಯ ರಾಗಗಳನ್ನು ಮಾಡುತ್ತ ಕುಳಿತದರಿಂದ ಆತನೂ ಎಚ್ಚತ್ತು ಕುಳಿತುಕೊ ಪ್ಳಬೇಕಾಯಿತು. ಆಗ ಆ ಗೋಸಾವಿಯು ಭಾಸ್ಕರರಾಯನಿಗೆ "ಮಹಾರಾಜ ಅಬ ಆಪ ಕಹಾ ಜಾನೇಕಾ ಇರಾದಾ ರಖತೆಹೋ' ಎಂದು ಕೇಳಿದನು.

ಅದಕ್ಕೆ "ಹಮಾರಾ ಇರಾದಾ ಕಾಯಕಾ ಜಿ? ಜಿದರ ಪೇಟಕೂ ಮಿಲೇಗಾ ಉದರ ಜಾನಾ. ಐಸಾ ಹಮಾರೆ ಲೋಕೋಂಕಾ ಘೂಮನಾ ಹೈ. ಲೇಕಿನ್ ಆಪ ಕಹಾ ಜಾತೆ ಹೋ? ಔರ ಕಹಾಸೆ ಆತೆ ಹೋ?" ಎಂದು ಭಾಸ್ಕರರಾಯನು ಗೋಸಾವಿಯನ್ನು ಕೇಳಿದನು.

"ಹಮತೋ ಗೋಕರ್ಣಕಾ ಮಹಾಬಲೇಸರಕಾ ದರಶನ ಕರನೆಕೆವಾಸ್ತೆ ಗಯೇಥೆ ಸೊ ಅಬ ಇದರಕೆ ಬಡೆ ಬಡೆ ಮಂದಿರ ಔರ ದೇವಸ್ಥಾನ ದೇಖತೆ ಚಲೆ ಹೈ. ಜಾಯೆಂಗೆ ಹಿಂದುಸ್ತಾನಕೆ ತರಫ ಲೇಕಿನ ಹಾಲತೋ ಕೋಲ್ಹಾಪುರ, ವಾಡಿ, ಕುರಂದವಾಡ, ಜಮಖಂಡಿ ಔರ ಐಸಾ ಜೋ ಕ್ಷೇತ್ರ ಹೋಗಾ, ಸೋ

ದೇಖಕೆ ಜಾನಾ. ಐಂಸಾ ಇರಾದಾ ರಖತೆ ಹೈ. ಹೀಗೆ ಆ ವೇಷಧಾರಿಯು ಹೇಳಿದರೂ ಕೂಡ ಆತನ ವನಾತಿನಲ್ಲಿ ಕಂಡು ಬಂದ ಮಹದಂತರವನ್ನು ಕಂಡು ಭಾಸ್ಕರರಾಯನಿಗೆ ಅವನ ವಿಷಯವಲ್ಲಿ ಸಂಶಯ ಹುಟ್ಟಿತು. ಅಂತರಂಗವನ್ನು ತಿಳಿದುಕೊಳ್ಳುವದಕ್ಕಾಗಿ ಮತ್ತೆ 'ಗುಸಾಯಿಜೀ, ಮಹಾರಾಜ, ಆಪನಾ ಮಠ ಕೊನಸೆ ದೇಸಮೇ ಹೈ? ಔರ ಆಪ ಕಿಸ್ಕೆ ಚೆಲೆ ಹೋ? ಮೆಹರಬಾನಿ ಕರಕೆ ಕ ಹೋಗೆ?" ಎಂದು ಕೇಳಿದರು.

ಅವಕ್ಕೆ ವೇಷಧಾರಿಯು 'ಅಲಬತ, ಅಲಬತ ಕ ಹೆ ಗೆ. ಗುರೂಕಾ ನಾಮ ಕಹನೇಕೆ ಬಾಬದಮೆ ಗುಸಾಯಿಂಕೆ ಚಲೆಕೊ ಬಡಾ ಆನಂದ ಪೈದಾಹೋತಾ ಹೈ. ಹಮಾರಾ ಮಠ ತೊ ಅಲಾಹಾಬಾದಮೆ ಹೈ. ಔರ ಒಡಾಮಠ ಕಲಕತ್ತೆಮೆ ಹೈ. ಹಮಾರೆ ಗುರೂಕಾ ನಾಮ ನಿಶ್ಚಲದಾಸಜಿ ಮಹಾರಜ ಹೈ ಔರ ಹಾಲ ಅಲಾಹಾಬಾದಮೆ ಹೋಗೆ ಬಿ" ಎಂದು ಉತ್ತರವಿತ್ತನು.

'ಬಹೋತ ಅಚ್ಛಾ! ಗುಸಾಈ, ಔರ ಸನ್ಯಾಸೀ ದಸ ನಾಮಕೆ ಹೋತೆ ಹೋತೆ ಹೈ. ಆಪ ಕ್ಯಾ ನಾಮ ಕಹತಾತೆ ಹೋ?" ಭಾಸ್ಕರರಾಯನು ಮತ್ತೆ ಪ್ರಶ್ನೆ ಮಾಡಿದನು.

'ಅರೆ ಭಾಯಿ, ನಾಮ ಬೀಮ ಸಬ ಯಹ ಮುಲುಖ ಗಿರಿಮೇ ಭೂಲ ಗಯೇ ಹೈ. ಅರೆ ಹಮತೊ ಹಮಾರೆ ಗುರು ನಿಶ್ಚಲದಾಸಜೀಕೆ ಚರನ ಕಮಲ ಬಿನಾ ಔರ ಬಾತೋಕಿ ದರಕಾರ ನಹಿ ಕರತೆ" ಎಂದು ಗೋಸಾವಿಗಳಲ್ಲಿಯ ಭೇದವನ್ನರಿಯದೆ ಗಾಬರಿಯಾದ ಆ ವೇಷಧಾರಿಯು ಉತ್ತರವಿತ್ತನು.

ಅವನ ಅಜ್ಞಾನವು ಆವನಿಗೆ ತಿಳಿಯುವದಕ್ಕಾಗಿ ಭಾಸ್ಕರರಾಯನು ಮತ್ತೆ ಔರ ಕುಛ ಜಾನತೇ ಭಿ ನಹಿ? ಕಹೊ. ಕ್ಯಾ ಹರಕತ ಹೈ? ಜೋ ಕೋಯಿ ದೋದಿನ ಚಾರದಿನಮೆ ನವಾ ಗುಸಾಯಿ ಬನತಾ ಹೈ. ಓ ಅಂದರಕೆ ಭೇದ ನಹಿ ದೇಖತಾ. ಕ್ಯೊಂಕಿ ಉಸ್ಕು ವೊ ಲಿಬಾಸ ಫೇಕನೇಕೊಬಿ ದೇರ ನಹೀ ಲಗತೀ" ಎಂದು ನುಡಿದನು.

'ತನ್ನ ಮೋಸವು ಹೊರಬೀಳುವ ಪ್ರಸಂಗ ಬಂದದರಿಂದ ಆ ವೇಷಧಾರಿಯು 'ಅರೇ ಭಾಯಿ, ತೂ ಚಾಹೆ ಸೋ ಬೋಲ. ಹಮ್ ಸಾಧೂಲೋಕ ಜಬ ಘುಸ್ಸೇಕೊ ಮಾರತೆ ಹೈ, ತಬ ದೇಸ ಬಿದೇಸ ಘೂಮತೆ ಫಿರತೆ ಹೈ. ದುನಿಯಾಮೆ ಜಿಸ್ಕು ಜೈಸಾ ಚಾಹೆ ವೈಸೀ ಬಾತವೋ ಕರ ತಾ ಹೈ. ಲೇಕಿನ್ ಹಮ್ ಜೋ ಸಬಕೆ ಸಾಥ ಝುಗಡಾ ಕರೆಂಗೆ ತೋ ಸಬ ತೀರಥ ಔರ ಠಾಕುರ ಜೀಕು ಭೂಲಜಾಯುಂಗೆ" ಎಂದು ವೇಷಧಾರಿಯು ಮತ್ತೆ ಮಾತಾಡಿದನು.

'ಬಹೋತ ಖೂಬ! ಬಜಾವ ತೋ ಖೂಬ ಕರಲೀತೆಹೋ" ಎಂದು ಭಾಸ್ಕರರಾಯನು ನುಡಿದನು.

ವೇಷಧಾರಿಯ ವಿಷಯದಲ್ಲಿ ಮೊದಲೇ ಸಂಶಯಗ್ರಸ್ತನಾಗಿದ್ದ ಭಾಸ್ಕರ ರಾಯನು 'ಈತನು ಯಾರು? ಹೀಗೇಕೆ ತಿರುಗುತ್ತಾನೆ' ಎಂಬುವನ್ನೆಲ್ಲ ತಿಳಿದು ಕೊಂಡನು. ಗೋಸಾವಿಯ ಉತ್ತರದಿಂದ ಭಾಸ್ಕರರಾಯನು ಸಂತಪ್ತನಾದನು. "ಈಗ ನನ್ನ ಪ್ರಕೃತಿಯು ನೆಟ್ಟಗಿದ್ದಿದ್ದರೆ, ಹಿಂದಕ್ಕೆ ನನ್ನನ್ನು ಶೋಧಿಸುತ್ತ ಬಂದ ಆ ನಾಲ್ವರು ನೀಚರಿಗೆ ಕೊಟ್ಟ ಬಹುಮಾನವನ್ನೇ ಇವನಿಗೂ ಕೊಡು ತ್ತಿದ್ದೆನು. ಆದರೆ ಏನು ಮಾಡುವದು? ನನ್ನ ಕೈಯನ್ನೆತ್ತುವದು ನನಗಿಂದು ಜಡವಾಗಿದೆ' ಎಂದು ಮನದಲ್ಲಿ ಅಂದುಕೊಂಡು ಸಿಟ್ಟನ್ನು ನುಂಗಿಕೊಂಡು, ಸುಮ್ಮನಾದನು. ಇತ್ತ ವೇಷಧಾರಿಯಾದರೂ ಸಹಜವಾಗಿ ಮಾತನಾಡುತ್ತ ತನ್ನ ಹುಳುಕೆಲ್ಲ ಹೊರಬಿದ್ದದ್ದಕ್ಕಾಗಿ ನಾಚಿಕೊಂಡು ಆತನೂ ಮಾತಾಡಲಿಲ್ಲ.

ಮನುಷ್ಯನು ಎಷ್ಟೇ ಚತುರನಿದ್ದರೂ ಕೂಡ ಪ್ರಕೃತಿಯ ಮುಂದೆ ಆತನ ಆಟ ಸಾಗದು. ಆದದರಿಂದ ಲಜ್ಜಿತನಾದ ವೇಷಧಾರಿಯು ಗೋಡೆಗೆ ಆತು ಕೊಂಡು ಕುಳಿತಲ್ಲಿಯೇ ಕಣ್ಣು ಮುಚ್ಚಿದನು. ಬಹಳಹೊತ್ತಿನ ವರೆಗೆ ಜಾಗರ ಣೆಯಾದುದರಿಂದ ಆತನಿಗೆ ಕೂಡಲೆ ಜಂಪು ಹತ್ತಿತು. ಇತ್ತ ಕಾವಲು ಮಾಡು ತ್ತಿದ್ದ ಇಬ್ಬರು ಗೋಸಾವಿಗಳೂ ಮುಂಜಾವಿನ ತಂಗಾಳಿಯ ಸ್ಪರ್ಶದಿಂದ ನಿದ್ರೆಹೋದರು. ಕೂಡಲೆ ಭಾಸ್ಕರರಾಯನು 'ದೇವರು ದಯತೋರಿದನು' ಎಂದು ನುಡಿದು ಸಂಗಡಿಗರನ್ನೆಲ್ಲ ಎಬ್ಬಿಸಿಕೊಂಡು ಗದ್ದಲಾಗದಂತೆ ಮೆಲ್ಲನೆ ಗುಡಿಯಿಂದ ಹೊರಬಿದ್ದನು.

"ಸೋವೇಗಾ ಸೋ ಖೋವೇಗಾ ಔರ ಜಾಗೇಗಾ ಸೋ ಪಾವೇಗಾ' ಎಂಬ ಹಿಂದುಸ್ಥಾನೀ ಗಾದೆಯಂತೆ ಭಾಸ್ಕರರಾಯನು ಸಂಕಟದಿಂದ ಪಾರಾಗಿ ಸಂಗ ಡಿಗರೊಂದಿಗೆ ಪಲಾಯನ ಮಾಡಿದನು. ರಾತ್ರಿ ಸಂಗಡಿಗರೊಂದಿಗೆ ಮಹಂ ತನು ಮಾತಾಡಿದುದೆಲ್ಲವನ್ನೂ ಜ್ವರಗ್ರಸ್ತನಾಗಿ ಮಲಗಿದ್ದ ಭಾಸ್ಕರರಾಯನು ಕೇಳಿದ್ದನು. ಇವರು ನಮ್ಮ ವೈರಿಗಳು ಇವರ ಬಲೆಯಲ್ಲಿ ನಾವು ಸಿಕ್ಕು ಬಿದ್ದಂ ತಾಯಿತು. ಎಂದು ತಿಳಿದರೂ ಭಾಸ್ಕರರಾಯನು ಶಾಂತನಾಗಿದ್ದನು. ಮುಖ ಮಾರ್ಜನಾದಿಗಳನ್ನು ತೀರಿಸಿಕೊಂಡು ಬಂದ ಬಳಿಕ ಮಹಂತನ ಮೋಸವನ್ನೆಲ್ಲ ಬೈಲಿಗೆಳೆದು ಆವರೆಲ್ಲರಿಗೆ ನಿದ್ರೆಹತ್ತಿದೊಡನೆ, ಅಷ್ಟು ಅಲ್ಪಾವಕಾಶವ ಉಪ ಯೋಗ ಮಾಡಿಕೊಂಡು ಗುಡಿಯಿಂದ ಹೊರಬಿದ್ದನು. ಮೈಯಲ್ಲಿ ತ್ರಾಣವಿಲ್ಲ ದಿದ್ದರೂ ಶತ್ರುಗಳ ಭಯದಿಂದ ಆತನು ಒತ್ತರದಿಂದ ಹೆಜ್ಜೆಗಳನ್ನಿಡುತ್ತ ಸಾಗಿ ದ್ದನು. ಮೂರು ತಾಸು ಹೊತ್ತೇರುವದರೊಳಗಾಗಿ ಆತನು ತೊರಗಲ್ಲಿಗೆ ಹೋಗಿ ತಲ್ಪಿದನು. ಮುಂದೆ ಮಾತ್ರ ಅವನಿಂದ ನಡೆಯುವದಾಗಲಿಲ್ಲ. ಕಾರಣ ಗೌಡನ ಮನೆಗೆ ಹೋದನು. ಭಾಸ್ಕರರಾಯನ ಪರಿಚಯವು ಆ ಗೌಡನಿಗೆ ಚೆನ್ನಾಗಿತ್ತು. ಆದದರಿಂದ ಅವನನ್ನು ಕಂಡೊಡನೆ ಪ್ರೇಮದಿಂದ ಬರಮಾಡಿ

ಕೊಂಡು ಬಂದು ಉತ್ತಮವಾದ ಗುಪ್ತ ಸ್ಥಳದಲ್ಲಿ ಆತನನ್ನು ಬಚ್ಚಿಟ್ಟನು. ಹೀಗೆ ಬಚ್ಚಿಡುವವರಲ್ಲಿ ಗೌಡನ ದುರುದ್ದೇಶವಿರಲಿಲ್ಲ. ವೈರಿಗಳ ಕೈಗೆ ಸಿಗಬಾರದೆಂದೇ ಆತನನ್ನು ಗುಪ್ತವಾಗಿಟ್ಟನು.

ಮಾರುತಿಯ ಗುಡಿಯಲ್ಲಿ ಮಲಗಿದ ಗೋಸಾವಿಗಳ ತಂಡವು ಬೆಳಗಾದೊಡನೆ ಎಚ್ಚತ್ತು ನೋಡುತ್ತಾರೆ. ಎಲ್ಲ ಬ್ರಾಹ್ಮಣರು ಹೊರಟುಹೋಗಿದ್ದರು. ಇಷ್ಟು ಅಲ್ಪಾವಧಿಯಲ್ಲಿಯೇ ಕಣ್ಣಲ್ಲಿ ಮಣ್ಣೊಗೆದು ಅವರು ಓಡಿ ಹೋದ ವಿಷಯವು ವೇಷಧಾರಿಯಾದ ಆ ಮಹಂತನಿಗೆ ತಿಳಿದೊಡನೆ ಆಕಾಶಪಾತಾಳಗಳನ್ನೊಂದು ಮಾಡಿದನು. ಸಂಗಡಿಗರಿಗೆಲ್ಲ ಮನಸೋಕ್ತವಾಗಿ ಬೈಯುತ್ತ ಅವಸರದಿಂದ ಚಣ್ಣವನ್ನು ಏರಿಸಿದನು. ಕೋಟು ತೊಟ್ಟುಕೊಂಡು ಟೊಪ್ಪಿಗೆಯನ್ನು ಸಿಕ್ಕಿಸಿದನು. ಸಂಗಡಿಗರೆಲ್ಲರಿಗೆ ಹಾಗೆ ಮಾಡಲು ಅಪ್ಪಣೆಯನ್ನಿತ್ತನು. ಕೂಡಲೆ ಎಲ್ಲರೂ ಸಿಪಾಯಿಗಳ ವೇಷವನ್ನು ಧರಿಸಿ ಸಿದ್ಧರಾದರು. ಬಳಿಕ ಎಲ್ಲರೂ ಭಾಸ್ಕರರಾಯನ ಶೋಧ ಮಾಡುತ್ತ ಉತ್ತರದಿಂದ ಸಾಗಿದರು.

ಭಾಸ್ಕರರಾಯನು ತಮ್ಮ ಮನೆಯಲ್ಲಿಳಿದುಕೊಂಡು, ತನ್ನ ತಂದೆಯು ಅವನ ಆದರಾತಿಥ್ಯ ಮಾಡುತ್ತಲಿದ್ದುದು ಗೌಡನ ಹತ್ತು ವರುಷದ ಮಗನಿಗೆ ಗೊತ್ತಿತ್ತು. ಗೌಡನು ಅಂದು ಸಂಜೆಯ ಮುಂದೆ ಉತ್ಕೃಷ್ಟವಾದ ಮಾವಿನ ಹಣ್ಣುಗಳನ್ನು ತರಿಸಿ ಭಾಸ್ಕರರಾಯನ ಮುಂದಿಟ್ಟು ಒಂದೊಂದನ್ನೆ ಹೆಚ್ಚಿ ಕೊಡುತ್ತಲಿದ್ದನು. ಭಾಸ್ಕರರಾಯನು ಆತನೊಡನೆ ಸಂತೋಷದಿಂದ ಮಾತನಾಡುತ್ತ ಇಬ್ಬರೂ ಹಣ್ಣುಗಳನ್ನು ತಿನ್ನುತ್ತಲಿದ್ದರು. ಅಷ್ಟರಲ್ಲಿ ಸರ ಫ್ರಾಂಕ ಸೂಟರ ಸಾಹೇಬನೂ ಆತನ ಅನುಯಾಯಿಗಳೂ ತೊರಗಲ್ಲ ಗ್ರಾಮದೊಳಗೆ ಬಂದು ಗೌಡನ ಮನೆಯನ್ನು ಶೋಧಿಸುತ್ತಲಿದ್ದರು. ಅಲ್ಲಿಯೇ ಆಡುತ್ತಲಿದ್ದ ಆ ಗೌಡನ ಮಗನಿಗೆ 'ಪಾಟೀಲ ಕಂಹಾ ಹೈ' ಎಂದು ಕೇಳಿದೊಡನೆ ಏನೂ ಅರಿಯದ ಆ ಹುಡುಗನು, 'ಬಾಬಾಸಾಹೇಬ ನರಗುಂದಕರರು ಬಂದದ್ದರಿಂದ ಅಪ್ಪನು ಅವರಿಗೆ ಮಾವಿನ ಹಣ್ಣುಗಳನ್ನು ಕೊಡಲು ಹೋಗಿದ್ದಾನೆ.' ಎಂದು ಹೇಳಿದನು. ಹುಡುಗನ ಉತ್ತರವನ್ನು ಕೇಳಿ ಸಾಹೇಬನಿಗೆ ಅತ್ಯಾನಂದವಾಯಿತು. ಆತನು "ಬಚ್ಯಾ ಉನೆ ಕಂಹಾ ಹೈ ಬತಾವ" ಎಂದು ಕೇಳಿದೊಡನೆ ಅವರನ್ನೆಲ್ಲ ಕರೆದುಕೊಂಡು ಆ ಬಾಲಕನು ಭಾಸ್ಕರರಾಯನೂ ತಮ್ಮ ತಂದೆಯೂ ಕುಳಿತಲ್ಲಿಗೆ ಹೋಗಿ "ನೋಡಿರಿ ಇಲ್ಲೇ ಕುಳಿತಿದ್ದಾರೆ"ಎಂದು ತೋರಿಸಿದನು. ಸಾಹೇಬನನ್ನು ಕಂಡೊಡನೆ ಎಲ್ಲರು ಗಾಬರಿಯಾದರು. ಸೂಟರ ಸಾಹೇಬನು "ಸಲಾಮ ಬಾಬಾಸಾಹೇಬ ಅಬ ಕಂಹಾ ಭಾಗ ಜಾ ವೋಗೆ? ಚಲೋ, ಸರಕಾರ, ಅಬ ಬೆಲಗಾಮಕೂ ಚಲೆ ಜಾಯೆಂಗೆ" ಎಂದು ನುಡಿಯುತ್ತ ಅವನ ಕೈಹಿಡಿದನು. ಆಗ ಭಾಸ್ಕರರಾಯನು ಅಶಕ್ತನಾಗಿದ್ದರೂ

ಕೂಡ ಸಾಹೇಬನ ಉದ್ಧಾಮತನದಿಂದ ರೇಗಿ ವಿಲಕ್ಷಣವಾದ ಶಕ್ತಿಯಿಂದ ಸಾಹೇಬನನ್ನು ಒದ್ದು ನೆಲಕ್ಕುರುಳಿಸಿದನು. ಆದರೆ ಸಾಹೇಬನ ಸಂಗಡಿಗರು ಬಹಳ ಜನರು, ತಾವು ಕೇವಲ ಐದೇ ಜನರಾದುದರಿಂದ ಎಷ್ಟು ಗುದ್ದಾಡಿದರೂ ಸಾಹೇಬನ ಸೆರೆಯಲ್ಲಿ ಸಿಕ್ಕು ಬಿದ್ದರು.

ಸೂಟರಸಾಹೇಬನು ಭಾಸ್ಕರರಾಯನನ್ನೂ ಅವನ ಸಂಗಡಿಗರನ್ನೂ ಬೆಳಗಾವಿಗೆ ತಕ್ಕೊಂಡು ಹೋಗುವಾಗ ದಾರಿಯಲ್ಲಿ ನಾನಾಪ್ರಕಾರದ ಅಪಮಾನ ಮಾಡಿದನು. ಮನಬಂದಂತೆ ಗೋಳಾಡಿಸಿದನು. ಇಷ್ಟಾದರೂ ಅವರು ಸಾಹೇಬನಿಗೆ ಒಂದು ಬಿರಸು ಮಾತಾಡಲಿಲ್ಲ. ಯಾಕಂದರೆ ಈ ಅಜ್ಞಾನಿ ಹಾಗು ಅವಿಚಾರಿ ಜನರಿಗೆ ಏನು ಹೇಳಿದರೇನು ಪ್ರಯೋಜನವೆಂದು ಭಾವಿಸಿದ್ದರು. ಮತ್ತು ಈ ನೀಚರಿಗೆ ಏನು ಹೇಳಿಕೊಂಡರೂ ಕರುಣೆ ಬಾರದೆಂಬುದು ಅವರಿಗೆ ಗೊತ್ತಿತ್ತು. ಆದದರಿಂದ ದುಃಖವನ್ನನುಭವಿಸುತ್ತ ೧೮೫೭ನೆಯ ಇಸ್ವಿಯ ಜೂನ ೨ನೆಯ ತಾರೀಖಿಗೆ ಬೆಳಗಾವಿಗೆ ತಲ್ಪಿದರು.

ಇಂಗ್ಲಿಷರ ಕಟ್ಟಾ ವೈರಿಯೂ ನರಗುಂದ ಸಂಸ್ಥಾನಾಧಿಪನೂ ಆದ ಭಾಸ್ಕರರಾಯನನ್ನು ಬಂಧಿಸಿ ತಂದ ಸುದ್ದಿಯು ತೀವ್ರದಲ್ಲಿಯೇ ಸುತ್ತಲೂ ಪಸರಿಸಿತು. ಸರಕಾರದವರು 'ನರಗುಂದದ ಅರಸನೂ ನಮ್ಮ ವೈರಿಯೂ ಆದ ಭಾಸ್ಕರರಾಯನ ನ್ಯಾಯ ವಿಚಾರಣೆಯು ಇಂಥ ದಿವಸ ಆಗುವದೆಂದು' ಜಾಹೀರನಾಮೆಯನ್ನು ಹಚ್ಚಿದರು. ನ್ಯಾಯಸಭೆಗೆ ಎಲ್ಲರಿಗೂ ಬರಲಿಕ್ಕೆ ಅಪ್ಪಣೆಯಿತ್ತು. ಮತ್ತು ಭಾಸ್ಕರರಾಯನಿಗೆ ದ್ರೋಹ ಮಾಡಿದ ಕೃಷ್ಣಾಜಿಪಂತ ಹಾಗೂ ಬನ್ಯಾಬಾಪೂ ಇವರ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವೂ ದೊರೆಯುವದೆಂದು ಅನ್ನುತಿದ್ದರು.

ನಿರ್ದಿಷ್ಟವಾದ ದಿವಸ ಭಾಸ್ಕರರಾಯನ ಅಪರಾಧದ ವಿಚಾರಣೆಗಾರಂಭವಾಯಿತು. ಆತನು ಅನೇಕ ಅಪರಾಧಗಳನ್ನು ಮಾಡಿದ್ದರಿಂದ ಅವನಿಗೆ ಕಡೆಯಲ್ಲಿ ಫಾಸೀ ಶಿಕ್ಷೆಯು ವಿಧಿಸಲ್ಪಟ್ಟಿತು. ಈ ಸುದ್ದಿಯು ಕ್ಷಣಾರ್ಧದಲ್ಲಿ ಊರಲ್ಲೆಲ್ಲ ಹಬ್ಬಿತು. ಜನರೆಲ್ಲ ಮನದಲ್ಲಿ ಮರಮರನೆ ಮರುಗಿದರು.

ನ್ಯಾಯ ವಿಚಾರಣೆಯು ಇನ್ನೂ ನಡೆದಾಗಲೇ ಮಧ್ಯದಲ್ಲಿ ನ್ಯಾಯಾಧೀಶನು ಭಾಸ್ಕರರಾಯನಿಗೆ "ಭಾಸ್ಕರರಾವ, ನಿಮ್ಮ ಈ ಬಂಡಾಯದಲ್ಲಿ ಮತ್ತೆ ಯಾವಯಾವ ಸಂಸ್ಥಾನಿಕರು ಭಾಗ ತಕ್ಕೊಳ್ಳಲು ಒಪ್ಪಿದ್ದರೆಂಬದನ್ನು ತಿಳಿಸಿದರೆ ನಾವು ನಿಮ್ಮನ್ನು ಬಿಡುಗಡೆ ಮಾಡುವದಲ್ಲದೆ, ನಿಮ್ಮ ರಾಜ್ಯದ ಸಂಗಡ ನಮ್ಮ ರಾಜ್ಯದ ಕೆಲವು ಭಾಗವನ್ನು ತಮಗೆ ಸಂತೋಷದಿಂದ ಬಿಟ್ಟು ಕೊಡುತ್ತೇವೆ." ಎಂದನು. ಅದನ್ನು ಕೇಳಿ ಭಾಸ್ಕರರಾಯನು ಜೀವದ ಪರಿವೆಯಿ

ಲ್ಲದೆ, ' ನಾನು ನಿಮ್ಮ ಈ ತರಹದ ಆಮಿಷಕ್ಕೆ ಮರುಳಾಗಿ ಬಲೆ ಬೀಳುವ ಮನುಷ್ಯನಲ್ಲ. ನನಗೆ ನನ್ನ ರಾಜ್ಯವೂ ಬೇಡ ನೀವು ಸಂತೋಷದಿಂದ ಹೆಚ್ಚಾಗಿ ಕೊಡುವ ಭೂದಾನವೂ ಬೇಡ. ಭೂಪತಿಯು ಭೂದಾನಕ್ಕೆ ಮರುಳಾಗುವನೇ? ನನಗೆ ಬಂಡಾಯ ಮಾಡಲು ಯಾವ ಸಂಸ್ಥಾನಿಕನೂ ನೆರವಾಗಿಲ್ಲ. ಯಾರ ಹೇಳಿಕೆಯಂತೆಯೂ ನಾನು ಬಂಡು ಮಾಡಲಿಲ್ಲ. ಸ್ವ ಸಾಮರ್ಥ್ಯದ ಧೈರ್ಯದ ಮೇಲಿಂದಲೇ ಬಂಡಾಯ ಹೂಡಿದೆನು. ವ್ಯಾಪಾರಿಗಳಾದ ನೀವು ನಿಮ್ಮ ಕರಾರ ಪತ್ರದಂತೆ ನಡೆಯಲು ಒಪ್ಪಿದ್ದರೆ ಯುದ್ಧ ಹೂಡುವ ಪ್ರಸಂಗವೇ ಬರುತ್ತಿರಲಿಲ್ಲ. ನೀವು ಕೊಟ್ಟ ವಚನಗಳನ್ನು ಮರೆತಿರಿ ಕಾರಣ ನಾನು ಹೀಗೆ ನಡೆದು ನಿಮ್ಮನ್ನು ಎಚ್ಚರಿಸಬೇಕಾಯಿತು. ಇನ್ನಾದರೂ ನ್ಯಾಯ ಮಾರ್ಗವನ್ನೇ ಅನುಸರಿಸಿರಿ ಪ್ರಜೆಗಳ ಸೌಖ್ಯದ ಕಡೆಗೆ ಹೆಚ್ಚಾಗಿ ಲಕ್ಷ್ಯಪೂರೈಸಿರಿ. ಅಂದರೆ ನಾನು ಮಾಡಿದ ಈ ಬಂಡಾಯಕ್ಕೆ ತಕ್ಕ ಫಲದೊರೆತಂತಾಗುವದು ' ಎಂದು ಸ್ಪಷ್ಟವಾಗಿ ಉತ್ತರವಿತ್ತನು.

ಸೆರೆಮನೆಯಲ್ಲಿದ್ದ ಭಾಸ್ಕರರಾಯನಿಗೆ ಮೊದಲು ಮೊದಲು ಸೀದಾ ಸಾಮಗ್ರಿಯು ಕೊಡಲ್ಪಡುತ್ತಿತ್ತು. ಆದರೆ ಪಾಠಕರೇ, ಜನ್ಮತಃ ಅನ್ನ ಮಾಡಿಕೊಂಡು ಗೊತ್ತಿಲ್ಲದ ದುರ್ದೈವಿಯಾದ ನಮ್ಮ ಭಾಸ್ಕರರಾಯನು ಅದನ್ನೆಲ್ಲ ಅಟ್ಟಿಕೊಂಡು ತಿನ್ನುವದೆಂದು? ಆದವರಿಂದ ಮೊದಲಿನ ಮೂರು ನಾಲ್ಕು ದಿವಸಗಳ ವರೆಗೆ ಆ ಸಾಮಗ್ರಿಯನ್ನು ಹಾಗೇ ಇಟ್ಟು ನಿಶ್ಚಕ್ರ ಉಪವಾಸ ಮಾಡಿದನು. ಭಾಸ್ಕರರಾಯನು ಉಪವಾಸ ಮಾಡುತ್ತಿರುವದು ಮೇಲಧಿಕಾರಿಯ ಲಕ್ಷ್ಯಕ್ಕೆ ಬಂತು. ಕೂಡಲೆ ಆತನು ಒಬ್ಬ ಬ್ರಾಹ್ಮಣನನ್ನು ಕರೆಯಿಸಿ ದಿನಾಲು ಎರಡು ಸಾರೆ ತಾಟನ್ನು ಬಡಿಸಿಕೊಂಡು ಬಂದು ಭಾಸ್ಕರರಾಯನಿಗೆ ಕೊಡುವಂತೆ ಆಜ್ಞಾಪಿಸಿದನು.

ಭಾಸ್ಕರರಾಯನಿಗೆ ಊಟವನ್ನೊಯ್ಯುವ ಬ್ರಾಹ್ಮಣನು ಬಹು ದಯಾಳುವಾಗಿದ್ದನು. ಒಂದು ದಿವಸ ಆತನು ತನ್ನ ಮನದಲ್ಲಿ « ನಾನು ಪ್ರತಿ ದಿವಸ ಊಟವನ್ನೊಯ್ದು ಕೊಡುವ ಪುರುಷನೊಬ್ಬನೇ ನಿಜವಾದ ವೀರನು. ಉಳಿದವರೆಲ್ಲರೂ ಬಹುತರವಾಗಿ ತಾಯಿಯ ತಾರುಣ್ಯ ಹರಣಮಾಡುವದಕ್ಕಾಗಿಯೇ ಜನಿಸಿದವರೆಂದರೆ ಏನೂ ಅಡ್ಡಿಯಿಲ್ಲ. ಯಾಕಂದರೆ ನಮ್ಮ ಪವಿತ್ರವಾದ ಧರ್ಮದ ಹಾಗೂ ದೇವರ ಅಪಮಾನವನ್ನು ಸಹಿಸದೆ ಜೀವದ ಮೇಲೆ ಉದಾರನಾಗಿ ಶಸ್ತ್ರವನ್ನೆತ್ತಿದವನೆಂದರೆ ಇವನೊಬ್ಬನೇ. ನಿಜವಾದ ದೇಶಾಭಿಮಾನಿಯು ಇವನೊಬ್ಬನೇ. ಆವನೊಬ್ಬನ ಜೀವದ ಬೆಲೆಯು ಕೋಟ್ಯಾವಧಿ ನಮ್ಮಂತಹ ಜೀವನಕ್ಕಿಂತಲೂ ಹೆಚ್ಚಾದದ್ದು ಇಂತಹ ಮಹಾಪುರುಷರು ಬದುಕಿದ್ದರೆ ಒಂದಿಲ್ಲೊಂದು ದಿನ ಜನಕ್ಕೆಲ್ಲ ಸುಖವನ್ನುಂಟು ಮಾಡಬಹುದು. ಕೂಳಿಗೆ ಕಾಳಾಗಿ

ಭೂಮಿಗೆ ಭಾರವಾಗಿ ನೂರು ವರುಷ ಬಾಳುವ ಹೇಡಿಗಳಿಂದ ಜಗಕ್ಕೇನು? ಹೇಗಾದರೂ ಮಾಡಿ ಈ ಮಹಾಪುರುಷನನ್ನು ಈ ಸಂಕಟದಿಂದ ಪಾರು ಮಾಡಬೇಕು! (ತುಸುಹೊತ್ತು ವಿಚಾರ ಮಾಡಿ ಮತ್ತೆ) ಸ್ಯೆ. ಹೀಗೆಯೇ ಮಾಡಬೇಕು. ಇವನ ಪ್ರಾಣ ಉಳಿಸುವದಕ್ಕಾಗಿ ನನ್ನ ಪ್ರಾಣಹೋದರೆ ಏನು ತಪ್ಪಾಗುವದು? ಮತ್ತು ಜನ್ಮದಾರಭ್ಯ ಅವನ ಅನ್ನವನ್ನೇ ತಿಂದು ದೇಹವನ್ನು ಬೆಳೆಸಿದ್ದೇನೆ. ಅವನ ದಯೆಯಿಂದಲೇ ನಾಲ್ಕು ದುಡ್ಡು ಗಳಿಸಿ ಸುಖವಾಗಿದ್ದೇನೆ. ನನ್ನ ತಂದೆ ತಾಯಿಗಳನ್ನು ಸುಖವಾಗಿ ಇಟ್ಟುದಾದರೂ ಅವನ ದಯೆಯಿಂದಲೇ! ಅನ್ನದಾತನ ಮೇಲೆ ಪ್ರಾಣ ಸಂಕಟ ಬಂದಾಗ ಅವನ ಪ್ರಾಣಕ್ಕಾಗಿ ನಮ್ಮ ಪ್ರಾಣವನ್ನರ್ಪಿಸಿ ಅವನ ಸಂಕಟ ದೂರ ಮಾಡದಿದ್ದರೆ, ನಾನು ಕೃತಘ್ನನಾಗುವದಿಲ್ಲವೇ? ಅನ್ನದಾತೃವಿನ ಸಲುವಾಗಿ ಅಸುವನ್ನು ಅರ್ಪಣ ಮಾಡಿದರ ಸ್ವರ್ಗವು ಸಿಕ್ಕುವದು ನಿಜವೆ: (ಮತ್ತೆ ತುಸು ತಡೆದು) ಹು. ಇದೇ ನಿಶ್ಚಯವು. ನಾಳೆ ಮುಂಜಾನೆ ಭಾಸ್ಕರರಾಯನಿಗೆ ಪ್ರಾಣದಂಡನೆಯು ವಿಧಿಸಲ್ಪಡುವದು. ಆದ್ದರಿಂದ ಇಂದು ರಾತ್ರಿ ಆವನನ್ನು ಬಂಧಮುಕ್ತ ಮಾಡಲಿಕ್ಕೆಬೇಕು. ” ಅಂದರಾಯಿತು ಎಂದು ನಿಶ್ಚಯಿಸಿದನು.

ಹೀಗೆ ನಿಶ್ಚಯ ಮಾಡಿಕೊಂಡು ಆತನು ಮಧ್ಯಾಹ್ನದ ತಾಟನ್ನು ಬಡಿಸಿಕೊಂಡು ಭಾಸ್ಕರರಾಯನ ಬಳಿಗೆ ಹೊರಟನು. ಭಾಸ್ಕರರಾಯನ ಮುಂದೆ ತಾಟನ್ನಿರಿಸಿ ತಾನು ಸರಿದು ನಿಂತುಕೊಂಡನು. ಶೆರೆಸಿಕ್ಕಂದಿನಿಂದ ಭಾಸ್ಕರರಾಯನು ಯಾರ ಸಂಗಡಲೂ ವಿಶೇಷವಾಗಿ ಮಾತನಾಡುತ್ತಿರಲಿಲ್ಲ. ಅಂತಹ ಪ್ರಸಂಗವೇ ಬಂದರೆ ಕಾರ್ಯದ ಪೂರ್ತಿಗಾಗಿ ಮಾತನಾಡುತ್ತಿದ್ದನು. ಊಟ ಮುಗಿದೊಡನೆ ಬ್ರಾಹ್ಮಣನು ನಿತ್ಯದಂತೆ ತಾಟನ್ನು ತಕ್ಕೊಳ್ಳದೆ ಹಾಗೆಯೇ ಸುಮ್ಮನೆ ನಿಂತುಕೊಂಡನು. ಇಂದು ಆತನ ಮುಖಮುದ್ರೆಯು ವಿಶೇಷ ಗಾಂಭೀರ್ಯಯುಕ್ತವಾಗಿತ್ತು. ಮಾತಾಡಬೇಕೆಂದು ಅವನ ನಾಲಿಗೆಯು ಕುಣಿದಾಡುತ್ತಲಿತ್ತು. ಬ್ರಾಹ್ಮಣನ ಮನೋದಯವು ಭಾಸ್ಕರರಾಯನಿಗೆ ತಿಳಿಯದಿರಲಿಲ್ಲ. ಎಂದೂ ಮಾತಾಡದ ಆತನು ‘ಏನು ಭಟ್ಟರೆ ಇಂದು ತಮ್ಮ ಮನದಲ್ಲಿ ಯಾವ ವಿಚಾರವು ಓಡಾಡುತ್ತಲಿದೆ? ಬಂದಾಗಿನಿಂದ ಕೈಮುಗಿದುಕೊಂಡು ಹಾಗೆಯೇ ನಿಂತುಕೊಂಡಿರುವಿರಲ್ಲ! ಸಂಕೋಚವೇಕೆ? ನಿಮ್ಮ ಮನದಲ್ಲೇನಿರುವದೆಂಬನ್ನು ಹೇಳಿರಿ’ ಎಂದನು.

ಭಾಸ್ಕರರಾಯನು ತಾನಾಗಿಯೇ ಮಾತಿನ ಪ್ರಸ್ತಾಪವನ್ನೆತ್ತಿದ್ದನ್ನು ಕಂಡು ಬ್ರಾಹ್ಮಣನಿಗೆ ಬಹಳ ಸಂತೋಷವಾಯಿತು. ಮಾತಾಡುವ ಮೊದಲು ಬಾಗಿಲದ ಕಡೆಗೊಮ್ಮೆ ದೃಷ್ಟಿಸಿ ಬಳಿಕ ಮೆಲ್ಲನೆ ‘ ಮಹಾರಾಜ, ನಾಳೆ ತಮಗೆ ಫಾಶೀ ಶಿಕ್ಷೆಯಾಗುವದೆಂಬುದು ತಮಗೆ ಗೊತ್ತಿರಬಹುದು ’

"ಅಹುದು ನನಗೆ ಪೂರ್ಣವಾಗಿ ಗೊತ್ತಿದೆ. ಆದರೆ ಅವಕ್ಕೇನು ಮಾಡಬೇಕೆನ್ನುವಿ? ಎಂದು ಭಾಸ್ಕರರಾಯನು ಕೇಳಿದನು.

"ಏನೂ ಇಲ್ಲ. ಮಹಾರಾಜ, ಆದರೆ ತಮ್ಮ ಸೇವೆಯು ಅಂತರಿಸುವವಲ್ಲವೆಂದು ನನಗೆ ಬಹಳ ಕೆಡಕೆನಿಸಿದೆ ''.ಎಂದು ಬ್ರಾಹ್ಮಣನು ನುಡಿದನು.

"ನಾಳೆ ನಾನು ಈ ಜಗತ್ತನ್ನೇ ತೊಲಗಿ ಹೋಗುವಾಗ, ನನ್ನ ಶೇವೆಗಾಗಿ ನೀನೇಕೆ ಇಷ್ಟು ಹಳಹಳಿಸುವಿ? ಅದರಲ್ಲಿ ಅಷ್ಟು ಕೆಡಕೆನಿಸುವ ವಿಷಯವಾದರೂ ಯಾವದಿದೆ?

"ಇದೇ ಕೆಡಕೆನಿಸುವ ವಿಷಯವಿದೆಯಂತಲೇ ನಾನು ಹಳಹಳಿಸುವದು! ನಾಳಿನಿಂದ ತಮ್ಮ ದರ್ಶನ ಕೂಡ ಆಗುವದಿಲ್ಲವೆಂಬ ವಿಷಯವೇ ನನ್ನನ್ನು ಭ್ರಾಂತನನ್ನಾಗಿ ಮಾಡಿದೆ. ಅಂತಃಕರುಣದ ಸಾಗರದಲ್ಲಿ ಅನೇಕ ತೆರೆಗಳೇಳುತ್ತಲಿವೆ. ತಾವು ದಯೆದೋರಿದರೆ ನನ್ನ ಮನಕ್ಕೆ ಸಮಾಧಾನವಾಗುವಂತಿದೆ. ಇಲ್ಲದಿದ್ದರೆ ನೀರ ಮೇಲಿನ ಗುರುಳೆಯು ಒಡೆದುಹೋಗುವಂತೆ ಆಶಾಭಂಗವಾಗುತ್ತದೆ ಹೀಗೆ ಅದೆಷ್ಟು ಗುರುಳೆಗಳು ಒಡೆದು ಹೋಗಿವೆಯೆಂಬದನ್ನು ಲೆಕ್ಕ ಮಾಡಲು ಬರುವಂತಿಲ್ಲ. ಹೀಗಿದ್ದರೂ ಕೂಡ, ಶೂರರೂ ಸ್ವಧರ್ಮನಿಷ್ಠರೂ, ಉದಾರರೂ ಆದ ಮಹಾಪುರುಷರು ಸಂಕಟದಲ್ಲಿದ್ದಾಗ, ಅಂದರೆ ಮಹಾರಾಜ ನಿಮಗೆ ಸಂಕಟ ಬಂದಾಗ ಅದನ್ನು ನೋಡುತ್ತ ನಮ್ಮಂತಹರು ಜೀವಿಸಿದ್ದು ಫಲವೇನು? ' ಎಂದು ಮಾತನಾಡಿದನು.

ದಯೆಭರಿತನಾದ ಭಾಸ್ಕರರಾಯನು ತನ್ನ ಸ್ವಭಾವಕ್ಕನುಸರಿಸಿ ' ಹೀಗೇಕೆ ಮಾತನಾಡುವದು? ನೀವು ಸುಖವಾಗಿ ಜೀವಿಸಿರಿ. ನಮ್ಮ ಸಲುವಾಗಿ ತಾವು ತೋರಿದ ದುಃಖಕ್ಕಾಗಿ ನಾವು ತಮಗೆ ಆಭಾರಿಯಾಗಿದ್ದೇವೆ. ದುಃಖ ಪಡುವದಕ್ಕಿಂತ ಹೆಚ್ಚಾಗಿ ಏನನ್ನೂ ಮಾಡುವ ಶಕ್ತಿಯಿಲ್ಲದಿರುವಾಗ ನೀವಾದರೂ ಮಾಡುವವೇನು? ನಾವು ನಮ್ಮ ಕೃತಕರ್ಮದ ಫಲವನ್ನು ಭೋಗಿಸುತ್ತಲಿದ್ದೇವೆ. ಆದದರಿಂದ ತಾವು ನನ್ನ ವಿಷಯದಲ್ಲಿ ದುಃಖಿಸಬಾರದೆಂದು ನನ್ನ ಬಲವಾದ ಆಶೆ ' ಎಂದು ಆತನಿಗೆ ನುಡಿದನು.

ಭಾಸ್ಕರರಾಯನು ತೀರ ಹತಾಶನಾಗಿ ನುಡಿದುದನ್ನು ಕೇಳಿ ಬ್ರಾಹ್ಮಣನಿಗೆ ಅತಿ ಸಂಕಟವಾಯಿತು. ಆಗ ಆತನು ಸ್ಪಷ್ಟವಾಗಿ ಹೇಳದ ಹೊರತು ಗತಿಯಿಲ್ಲವೆಂದು ತಿಳಿದು ಆತನು "ಮಹಾರಾಜ, ನೀವು ಈ ಪ್ರಾಣಸಂಕಟದಿಂದ ಮುಕ್ತರಾಗಬೇಕೆಂದು ನನ್ನ ಬಲವಾದ ಇಚ್ಛೆ. ಜಗದೀಶನು ನನ್ನ ಇಚ್ಛೆಯನ್ನು ಪೂರ್ಣ ಮಾಡುವನೆಂಬ ಆತ್ಮ ವಿಶ್ವಾಸವೂ ನನಗಿದೆ ' ಎಂದನು.

"ಅಹುದು. ನಿಜವು. ನಾಳಿನ ಕಾರ್ಯವೊಂದು ಮುಗಿಯಿತೆಂದರೆ ನನ್ನ

ಮೇಲೆ ಕಠಿಣ ಪ್ರಸಂಗಗಳೇ ಬರಲಾರವೆಂಬುದು ನಿಜವು' ಎಂದು ಭಾಸ್ಕರರಾಯನು ಅಂದನು.

"ಶಿವ! ಶಿವ! ಮಹಾರಾಜ ಇಂತಹ ಅಮಂಗಲ ಭಾಷಣ ಮಾಡಬೇಡಿರಿ! ಪರಮೇಶ್ವರನು ತಮ್ಮನು ಪಾರು ಮಾಡುವನು" ಎಂದು ಬ್ರಾಹ್ಮಣನು ಮಾತಾಡಿದನು.

ಅದಕ್ಕೆ ಭಾಸ್ಕರರಾಯನು 'ಹಾಗೆಯೇ ಆಗಲಿ ಆತನೇ ಮುಕ್ತಮಾಡಿದ ಬಳಿಕ ಯಾತರ ಚಿಂತೆ! ನಾನು ಮುಕ್ತನಾಗುವೆನು' ಎಂದು ಉಸುರಿದನು.

ಈಗ ಸದ್ಯಕ್ಕೆ ಯಾವ ವಿಷಯವನ್ನೂ ತಿಳಿಸಬಾರದು ಆಯತ್ತ ಸಮಯದಲ್ಲಿ ಎಲ್ಲವನ್ನೂ ಅರುಹಿ ಪಾರು ಮಾಡಿದರಾಯಿತು ಎಂದುಕೊಂಡು ಆತನು 'ಮಹಾರಾಜ, ಇನ್ನು ಹೋಗಲು ಅಪ್ಪಣೆಯೇ? ಎಂದು ನುಡಿದು ಭಾಸ್ಕರರಾಯನ ಸಮ್ಮತಿಯು ದೊರೆತೊಡನೆ ಹೊರಟು ಹೋದನು.

ಬ್ರಾಹ್ಮಣನು ಹೋದ ಬಳಿಕ ಭಾಸ್ಕರರಾಯನು ತನ್ನಷ್ಟಕ್ಕೆ "ಬ್ರಾಹ್ಮಣರು ಬಹು ಅಂತಃಕರುಣಿಗಳೆನ್ನುವ ಮಾತು ಸುಳ್ಳಲ್ಲ. ನಾಳೆ ನನಗೆ ಫಾಶೀ ಶಿಕ್ಷೆಯಾಗುವದೆಂದು ಆತನಿಗೆ ಬಹು ಅಸಮಾಧಾನವಾಗಿದೆ. ಆದರೆ ಪಾಪ! ಆ ಬಡ ಪ್ರಾಣಿಯು ಏನು ಮಾಡಬಲ್ಲನು? ಫಾಸೀ ಹಾಕುವದನ್ನು ನೋಡಬಹುದು ಹಳಹಳಿಸಬಹುದು, ಬಹಳವಾದರೆ ಶವಕ್ಕೆ ಸಂಸ್ಕಾರ ಮಾಡಬಹುದು. ಇರಲಿ ನಾನು ಇಂತಹ ಸಂಕಟದಲ್ಲಿದ್ದರೂ ನನ್ನನ್ನು ಪ್ರೀತಿಸುವ ಒಬ್ಬನಾದರೂ ಮನುಷ್ಯನು ನನಗೆ ಪ್ರತಿದಿವಸ ದರ್ಶನ ಕೊಡುವನಲ್ಲ ಎಂದು ನನಗೆ ಬಹಳ ಸಮಾಧಾನವೆನಿಸಿದೆ. ನಾನು ದುಃಖಮಾಡುತ್ತ ಕುಳಿತುಕೊಳ್ಳುವದಾದರೂ ಅದೆಷ್ಟು ಕಾಲ! ಕೇವಲ ಆರು ಪ್ರಹರಗಳ ವರೆಗೆ ಮಾತ್ರ. ಬಳಿಕ ಒಮ್ಮೆ ದುಃಖದಿಂದ ಮುಕ್ತನಾಗುವೆನು. ಅಕ್ಷಯ ಸುಖವನ್ನನುಭವಿಸುವೆನು. ಈಗ ನನ್ನ ಹತ್ತರ ಉಳಿದುದಾದರೂ ಏನು? ನಾನು ಶೋಕಿಸುವದು ಏತಕ್ಕಾಗಿ? ರಾಜ್ಯ ಹೋಯಿತು ವೈಭವವು ಮಣ್ಣುಪಾಲಾಯಿತು. ಮಂತ್ರಿಗಳೆಲ್ಲ ದೇಶಾಂತರಕ್ಕೆ ಹೋದರು. ಮಮತೆಯ ಮಾತೆಯೂ ಪ್ರೇಮದ ಪತ್ನಿಯೂ ಸ್ವರ್ಗಕ್ಕೆ ತೆರಳಿದರು. ಹೀಗೆ ಎಲ್ಲ ರೀತಿಯಿಂದಲೂ ಸರ್ವನಾಶವಾಯಿತು. ಇಷ್ಟಾದರೂ ನಾನು ಜೀವದ ಮೇಲೆ ಆಶೆ ಮಾಡುವುದೆಂದರೆ ಕೇವಲ ನನ್ನ ಮೂರ್ಖತನವಲ್ಲವೇ? ನಾನೂ ಸ್ವರ್ಗ ಸೇರಿ ಸುಖಿಯಾಗಿರುವದು ಒಳಿತಲ್ಲವೇ? ಅಂದರೆ ದುಃಖದ ಭಯವೇ ಇಲ್ಲದಾಗುವದು! ಈ ದೇಹದ, ಜೀವದ, ಹಾಗೂ ಇಂದ್ರಿಯಗಳ ಸಂಬಂಧವು ತೀರ ತುಸುಕಾಲ ಉಳಿದಿದೆ. ಆದದರಿಂದ ಅಲ್ಲಿಯವರೆಗೆ ಈಶ ನಾಮಸಂಕೀರ್ತನೆಯ ಹೊರ್ತಾಗಿ ಮತ್ತಾವ ವಿಚಾರವನ್ನು ಮನದಲ್ಲಿ

ತರಬಾರದು ಅಂದಕಾಯಿತು ' ಎಂದು ನಿಶ್ಚಯಿಸಿ ಭಾಸ್ಕರರಾಯನು ವಿವೇಕ ವೈರಾಗ್ಯ ಹಾಗು ಧೈರ್ಯ ಇವುಗಳ ಬಲದಿಂದ ದೇವರ ಸ್ಮರಣೆಯನ್ನು ಮಾಡ ಹತ್ತಿದನು. ಆತನ ಎಲ್ಲ ಇಚ್ಛೆಗಳು ಅಲ್ಲಿಯೇ ಲಯಹೊಂದಿದವು. ಮತ್ತು ' ಈ ಜಗತ್ತಿನಲ್ಲಿ ನನ್ನ ಹಾಗೂ ನನ್ನ ಸಂಬಂಧದ ಎಂದು ಹೇಳುವಂತೆ ಒಬ್ಬ ನನ್ನು ಕೂಡ ದೇವರು ಇಡಲಿಲ್ಲ. ತಾಯಿಯ ಉದರದಿಂದ ಹೇಗೆ ಹೊರಬಿದ್ದು ಈ ಜಗತ್ತನ್ನೆಲ್ಲ ನೋಡಿದೆನೋ ಹಾಗೆಯೇ ನಾಳೆ ಜಗತ್ತನ್ನು ನೋಡುತ್ತ ಹೋಗುವದು ' ಎಂಬ ವಿಚಾರವು ಮನದಟ್ಟಾಗಿ ಹೋಗಿತ್ತು. ಅಷ್ಟರಲ್ಲಿ ಸಾಯಂ ಕಾಲವಾಯಿತು. ಎಲ್ಲೆಡೆಯಲ್ಲಿಯೂ ದೀಪಗಳನ್ನು ಹಚ್ಚಿದರು. ಅಷ್ಟರಲ್ಲಿ ಭಾಸ್ಕರರಾಯನ ಕೋಣೆಯ ಬಳಿಗೆ ಓರ್ವ ಸಿಪಾಯಿಯು ಬಂದು "ಬಂಧವಾ, ಕುಚ್ಛ ಝೂಡಾ, ಪಾನೀ ಪಿಸಾಬ, ಕರನೇಕಾ ಇರಾದಾ ಹೈ ?" ಎಂದು ಕೇಳಿ ದನು. ಭಾಸ್ಕರರಾಯನು "ಕುಚ್ಛ ನಹೀ, ಔರ ಆಜ ತೋ ರಾತಕಾ ಖಾನೇ ಪೀನೇಕಾ ಬೀ ದಿಲ ಹೋತಾ ನಹಿ" ಎಂದು ಉತ್ತರವಿತ್ತನು. ಭಾಸ್ಕರರಾ ಯನ ಉತ್ತರದಿಂದ ಸೀಪಾಯಿಗೆ ಕರುಣೆ ಹುಟ್ಟಿ ಆತನು " ಅಜೀ ಮಹಾರಾಜ, ಜೋತಕ ದಿಕಮೆ ಲಖಾಹುವಾ ಹೈ, ಸೋ ತಜಬೀಜಸೆ ಮಿಟಾನೇಕಾ ನಹಿ ಯೇ ತೋ ಆಪ ಸಮಜತೆ ಹೋ ? ತೋ ಫೇರ ಖಾನಾ ಪೀನಾ ಛೋಡನೇ ಮೆ ಕ್ಯಾ ಮತಲಬ ಹೈ ? ಬೇಷಕ್ ಖಾವ ಮಜಾ ಕರೋ ಜೋ ಹೋನೇಕಾ ಸೋ ಹೋತಾ ಹೈ. ಭಗವತ್ ಕೆ ಬಂದೇಕು ಉಸ್ಕೆ ಹುಕುಮಕೆ ಮುವಾಫಿಕ್ ಚಲನಾ ರಹಾ ಹೈ. ಯೇ ದೇಖೋ, ತುಮಾರಾ ಖಾನಾ ಬೀ ಆಯಾ, ಅಬ ಹಮ್ ಚಲೇ ಜಾತೇ ಹೈ. ಖೂಪ ಮಜಾಸೆ ಖಾ ಲೇವ " ಎಂದು ನುಡಿದು ಹೊರ ಟುಹೋದನು. ಬ್ರಾಹ್ಮಣನು ತಾಟು ತಕ್ಕೊಂಡು ಒಳಗೆ ಬಂದು ತಾಟನ್ನು ಕೆಳಗಿಟ್ಟು ' ಮಹಾರಾಜ, ಇನ್ನು ತಡಮಾಡಿ ಉಪಯೋಗವಿಲ್ಲ. ಹೋದಷ್ಟು ನಾಲ್ಕು ತುತ್ತು ಅನ್ನವನ್ನು ತಕ್ಕೊಳ್ಳಿರಿ. ಕೈತೊಳೆದುಕೊಂಡು ಹೊರಡಲು ಸಿದ್ಧರಾಗಿರಿ. ಇಲ್ಲಿ ಯಾರೂ ಬರುವದಕ್ಕಿಂತ ಮೊದಲು ಪಾರಾಗಿರಿ. ತೆರವಾ ದ ನಿಮ್ಮ ಸ್ಥಳದಲ್ಲಿ ನಾನು ಕೂಡ್ರುವೆನು. ಏಳಿರಿ. ವಿಚಾರಮಾಡುತ್ತ ಕೂಡ್ರಲು ಹೊತ್ತಿಲ್ಲ " ಎಂದು ಅವಸರದಿಂದ ನುಡಿದನು.

" ಛೇ, ಛೇ, ಇದೆಂದಿಗೂ ಆಗದ ಮಾತು. ನನ್ನ ಮುಕ್ತತೆಗೋಸುಗ ನಿರಪರಾಧಿಯಾದ ನಿಮ್ಮನ್ನು ಮೃತ್ಯುವಿನ ಬಾಯಿಗೆ ನೂಕಲು ನನ್ನ ಮನ ಒಪ್ಪದು. ನೀವು ನನ್ನ ಮೇಲಿನ ಪ್ರೇಮದಿಂದ ಹೀಗೆ ನುಡಿದದ್ದಕ್ಕೆ ನಾನವಿ ತಮಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಈ ತಾಟನ್ನು ಹಾಗೆಯೇ ತಕ್ಕೊಂಡು ತಿರುಗಿ ಹೋಗಿರಿ. ಈ ದುರ್ದೈವಿಯ ಮೇಲೆ ಪೂರ್ಣ ಪ್ರೇಮವಿರಲೆಂದರಾ

ಯಿತು. ಇದೇ ನನ್ನ ಕೊನೆಯ ಬಿನ್ನಹವು. ಸುಮ್ಮನೆ ಬಲಾತ್ಕಾರ ಮಾಡಬೇಡಿರಿ. ” ಎಂದು ಭಾಸ್ಕರರಾಯನು ನಿರ್ಧಾರಪೂರ್ವಕವಾಗಿ ನುಡಿದನು.

ಭಾಸ್ಕರರಾಯನ ಈ ತರಹದ ಭಾಷಣವನ್ನು ಕೇಳಿದೊಡನೆ ಆ ಬ್ರಾಹ್ಮಣನು ಭಾಸ್ಕರರಾಯನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕಣ್ಣಲ್ಲಿ ನೀರು ತಂದು “ ಮಹಾರಾಜ, ನಾನು ಜನ್ಮದಾರಭ್ಯ ನಿಮ್ಮ ಉಪ್ಪುಂಡು ಬೆಳೆದಿದ್ದೇನೆ. ತಮ್ಮ ಉದಾರವಾದ ಹಸ್ತದಿಂದ ಕೊಟ್ಟ ದ್ರವ್ಯವು ನಾನು ಹೋದರೂ ನನ್ನ ಕುಟುಂಬದವರನ್ನು ಸಂರಕ್ಷಿಸಬಲ್ಲದು. ನಿಮ್ಮಂತಹರು ಬದುಕಿದರೆ ನನ್ನಂತಹ ಸಾವಿರಾರು ಜನರ ಸಂರಕ್ಷಣೆ ಮಾಡಬಹುದು. ನಿಮ್ಮ ಪ್ರಭಾವವೇ ಹೀಗಿದೆ! ಈಗಲೆ ಪರಲೋಕಕ್ಕೆ ಹೋಗಿ ಆರ್ಯಮಾತೆಯನ್ನು ಅನಾಥಳನ್ನಾಗಿ ಮಾಡಬೇಡಿರಿ. ನನ್ನ ಮಾತನ್ನು ದಯವಿಟ್ಟು ಕೇಳಿರಿ. ನನ್ನ ಮೈಮೇಲಿನ ಈ ವಸ್ತ್ರಗಳನ್ನು ಧರಿಸಿಕೊಂಡು ಸೆರೆಮನೆಯನ್ನು ಪಾರಾಗಿ ದಾಟಿ ಹೋಗಿರಿ. ಪಾರಾಗಿರಿ. ನಾಳೆ ಸೂರ್ಯೋದಯವಾಗುವವರೆಗೆ ನಿಮಗೆ ಶಕ್ಯವಾದಷ್ಟು ಬೆಳಗಾವಿಯಿಂದ ದೂರ ಹೋಗಿರಿ. ಈ ನೀಚ ಜನರ ದೃಷ್ಟಿಗೆ ಬೀಳಬೇಡಿರಿ. ಏಳಿರಿ ತಡಮಾಡಬೇಡಿರಿ. ಊಟವನ್ನು ಮೊದಲು ಮುಗಿಸಿರಿ. ನಡೆಯಲಿಕ್ಕಾಗಲೀ ಓಡಲಿಕ್ಕಾಗಲೀ ಕಾಲಲ್ಲಿ ಸಾಮರ್ಥ್ಯ ಬರಬೇಕಾಗುವದು· ” ಹೀಗೆ ಬಿನ್ನವಿಸಿಕೊಂಡ ಭಾಸ್ಕರರಾಯನನ್ನು ನಿರುತ್ತರನನ್ನಾಗಿ ಮಾಡಿದನು. ಆದರೂ ಭಾಸ್ಕರರಾಯನು ಆತನ ಮಾತಿಗೆ ಒಪ್ಪದೆ ಸುಮ್ಮನೆ ಕುಳಿತುಕೊಂಡದ್ದರಿಂದ ಬ್ರಾಹ್ಮಣನು ಉಪಾಯವಿಲ್ಲದೆ ತಿರುಗಿ ಹೋದನು.

ಭಾಸ್ಕರರಾಯನಿಗೆ ನಾಳೆ ಫಾಶೀ ಶಿಕ್ಷೆಯ ವಿಧಿಸಲ್ಪಡುವದೆಂಬ ವಿಷಯವು ಎಲ್ಲರಿಗೂ ಮೊದಲೇ ಗೊತ್ತಾಗಿತ್ತು. ಆದ್ದರಿಂದ ಅಂದು ಬೆಳಗಾಗುತ್ತಲೇ ಭಾಸ್ಕರರಾಯನನ್ನು ನೋಡುವದಕ್ಕಾಗಿ ಜನರು ಗುಂಪುಗುಂಪಾಗಿ ಬಂದು ಸೇರಿದರು. ಮುಂದೇನಾಗುವದೋ ಎಂದು ಖಿನ್ನ ಮುದ್ರೆಯಿಂದ ಫಾಶೀ ಕೊಡುವದಕ್ಕಾಗಿ ನಿಯಮಿಸಿದ ಸ್ಥಳದ ಕಡೆಗೆ ನೋಡುತ್ತ ಕುಳಿತರು. ಅಷ್ಟರಲ್ಲಿ ಭಾಸ್ಕರರಾಯನು ಫಾಶಿಯ ಬಳಿಗೆ ತರಲ್ಪಟ್ಟನು. ಆತನ ಸುತ್ತಲು ಇಂಗ್ಲಿಷ ಸೈನಿಕರು ನಿಂತುಕೊಂಡದ್ದರಿಂದ ಜನರಿಗೆ ಆತನು ಕಾಣುತ್ತಿರಲಿಲ್ಲ. ಒಬ್ಬ ಸಾಹೇಬನು ಬಂದು ರಾಜಾಜ್ಞೆಯನ್ನು ಓದಿದನು. ಮತ್ತೊಬ್ಬನು ನೆರೆದವರೆಲ್ಲರ ನಿರೋಪ ತಕ್ಕೊಳ್ಳಲು ಹೇಳಿದನು. ಅವನಿಂದ ಎಲ್ಲರಿಗೂ ನಮಸ್ಕಾರಮಾಡಿಸಿದನು. ಜನರೆಲ್ಲರು ಹಾಹಾಕಾರ ಮಾಡಹತ್ತಿದರು. ಆದರೆ ಇವರ ಕಡೆಗೆ ಲಕ್ಷಗೊಡುವವರಾರು? ಒಬ್ಬ ನೀಚನು ಬಂದು ಕಣ್ಣಿನ ಮೇಲೆ ಅರಿವೆ ಹಾಕಿ ಫಾಶಿಯ ಹಗ್ಗವನ್ನು ಕುತ್ತಿಗೆಗೆ ಸಿಕ್ಕಿಸಿದನು. ಮತ್ತೊಬ್ಬನು ಭಾಸ್ಕರರಾಯನು ನಿಂತ ಹಲ

ಗೆಯನ್ನು ಜಗ್ಗಿದನು. ಉರ್ಲು ಪೂರ್ಣವಾಗಿ ಬಿತ್ತು. ಆದರೆ ಉರ್ಲು ಬೀಳು ವ ಮೊದಲೇ ಹಗ್ಗವು ಹರಿದುಹೋಯಿತು. ಅದನ್ನು ಕಂಡು ಜನರೆಲ್ಲ "ಜಗದೀಶನು ದಯಾಪರನು. ಇವರನ್ನು ಕೊಲ್ಲಗೊಡಲಾರನು." ಎಂದು ಮಾತಾಡ ಹತ್ತಿದರು. ಆದರೆ ಅಧಿಕಾರಿಗಳು ಬಿಡುವರೇ? ಜೀವ ಹೋಗುವವರೆಗೆ ಎಂದು ಆಜ್ಞೆಯಲ್ಲಿ ಬರೆದಿದೆ. ಎಂದು ಹೇಳಿ ಮತ್ತೆ ಏರಿಸಿದರು. ಎರಡನೆಯ ಸಾರೆಯೂ ಹರಿಯಿತು. ಮತ್ತೆ ಮೂರನೆಯ ಸಾರೆ ಏರಿಸಿದರು. ಈ ಸಾರೆ ಮಾತ್ರ ಅಧಿಕಾರಿಗಳ ಕಾರ್ಯ ಸಾಧಿಸಿತು. ಭಾಸ್ಕರರಾಯನ ಪ್ರಾಣವು ಹಾರಿಹೋಗಿ ಶವವು ನೇತಾಡತೊಡಗಿತು.

ನೆರೆದ ಜನರೆಲ್ಲ "ಮಹಾಪುರುಷನು ಕಡೆಯಲ್ಲಿ ಮರಣಕ್ಕೀಡಾದನು." ಎಂದು ಮರಮರನೆ ಮರಗುತ್ತ ಮನೆಯ ಮಾರ್ಗವನ್ನನುಸರಿಸಿದರು. ಇತ್ತ ಹರಣವು ಹಾರಿಹೋದುದನ್ನು ಪೂರ್ಣವಾಗಿ ಪರೀಕ್ಷಿಸಿದ ಬಳಿಕ ಡಾಕ್ಟರಸಾಹೇಬರು ಶವದ ಮುಂದಿನ ವ್ಯವಸ್ಥೆಗೆ ಅಪ್ಪಣೆಕೊಟ್ಟರು.

ಬಂಡುಗಾರರಲ್ಲಿಯ ರಾಮರಾವ ಹಾಗೂ ವಿಷ್ಣು ಇವರು ಇನ್ನೂ ಸಿಕ್ಕಿದ್ದಿಲ್ಲ. ಅವರ ಶೋಧವಿನ್ನೂ ನಡೆದೇ ಇತ್ತು. ಆದರೆ ಯಾರಿಂದಲೂ ಹುಡುಕುವದಾಗಲಿಲ್ಲ.

